# ಸತ್ಯಶೋಧನೆ

ಅಥವಾ

# ಗಾಂಧೀಜಿಯವರ ಆತ್ಮಕಥೆ

ಐದನೆಯ ಭಾಗ

---

ಕರ್ನಾಟಕ ಸಾಹಿತ್ಯ ಪ್ರಕಟನ ಮಂದಿರ
ಬೆಂಗಳೂರು ನಗರ
೧೯೩೧

[ಬೆಲೆ: ರೂ. ೧-೮-೦

# ಅನುವಾದಕರ ಬಿನ್ನಹ

---

ಇದು ಗಾಂಧೀಜಿಯವರ ಆತ್ಮಕಥೆಯ ಕಡೆಯ ಭಾಗ ಇದು ಈಗ ಒಂದು ವರ್ಷಕ್ಕೆ ಮುಂಚೆಯೇ ಪ್ರಕಟವಾಗಬೇಕಾಗಿದ್ದಿತು. ಕಾರಣಾಂತರದಿಂದ ಹಾಗಾಗದೆ ಪಾಠಕರಿಗೆ ಅಸನುಕೂಲವಾದುದಕ್ಕಾಗಿ ಅನುವಾದಕರು ಕ್ಷಮಾಪಣೆಯನ್ನು ಬೇಡುತ್ತಾರೆ

ವಸ್ತುತಃ ಗಾಂಧೀಜಿಯವರ ಆತ್ಮಕಥೆಗೆ ಸೇರಿದುದೂ, ಇದುವರೆಗೆ ಪ್ರಚುರವಾಗಿರುವ ಐದು ಭಾಗಗಳಿಗೆ ನಿಕಟ ಸಂಬಂಧವುಳ್ಳುದೂ ಆದ 'ದಕ್ಷಿಣ ಆಫ್ರಿಕದ ಸತ್ಯಾಗ್ರಹದ ಇತಿಹಾಸ' ವನ್ನು ಮುದ್ರಿಸುವ ಪ್ರಯತ್ನವು ನಡೆಯುತ್ತಿದೆ ಅದನ್ನು ಆದಷ್ಟು ಜಾಗ್ರತೆಯಾಗಿ ಕನ್ನಡ ಬಾಂಧವರ ಮುಂದಿಡಲೆಳಸುತ್ತೇವೆ

ಬೆಂಗಳೂರು ನಗರ,
೨೫—೮—೧೯೩೧

**ಕನ್ನಡಿಗರಿಬ್ಬರು.**

# ವಿಷಯ ಸೂಚಿಕೆ

೧

# ಮೊದಲನೆಯ ಅನುಭವ

ಫೀನಿಕ್ಸಿನಿಂದ ಹೊರಟ ಸಂಗಡವು ನಾನು ಸ್ವದೇಶವನ್ನು ಮುಟ್ಟುವುದಕ್ಕಿಂತ ಮುಂಚೆಯೇ ಅಲ್ಲಿಗೆ ತಲುಪಿದ್ದಿತು. ನಮ್ಮ ಮೊದಲಿನ ಏರ್ಪಾಡಿನಪ್ರಕಾರ ನಾನೇ ಅವರಿಗಿಂತ ಮುಂಚೆ ಬಂದಿರಬೇಕಾಗಿದ್ದಿತು. ಆದರೆ ಯುದ್ಧಸಂಬಂಧವಾಗಿ ಇಂಗ್ಲೆಂಡಿನಲ್ಲಿ ನನಗೆ ಒದಗಿದ ಕೆಲಸವು ಈ ಏರ್ಪಾಡನ್ನು ತಲೆಕೆಳಗು ಮಾಡಿಬಿಟ್ಟಿತು. ಇಂಗ್ಲೆಂಡಿನಲ್ಲಿ ಎಷ್ಟು ಕಾಲ ಇರಬೇಕೆಂಬುದನ್ನು ನಿಶ್ಚಯಿಸಲಶಕ್ಯವೆಂಬುದು ನನಗೆ ಕಂಡುಬಂದಿತು. ಈಗ ನಾನು ಫೀನಿಕ್ಸ್ ಸಂಗಡವು ಎಲ್ಲಿ ವಾಸಿಸಬೇಕೆಂಬ ಪ್ರಶ್ನೆಯನ್ನು ನಿರ್ಧರಿಸಬೇಕಾಯಿತು. ಸಾಧ್ಯವಾದರೆ ಅವರೆಲ್ಲರೂ ಒಟ್ಟಿಗೆ ಹಿಂದೂಸ್ಥಾನದಲ್ಲಿದ್ದು ಅವರು ಫೀನಿಕ್ಸ್ ಆಶ್ರಮದಲ್ಲಿ ನಡೆಸುತ್ತಿದ್ದ ಜೀವನವನ್ನೇ ನಡೆಸಬೇಕೆಂದು ನನ್ನ ಇಷ್ಟವಿದ್ದಿತು. ಅವರು ಹೋಗಿ ಇರಲು ಯೋಗ್ಯವಾದ ಆಶ್ರಮವಾವುದೂ ನನಗೆ ಗೊತ್ತಿರಲಿಲ್ಲ. ಆದುದರಿಂದ ಅವರು ಮಿ. ಆಂಡ್ರೂಸರನ್ನು ಕಂಡು ಅವರ (ಆಂಡ್ರೂಸರ) ಸಲಹೆಯಂತೆ ನಡೆಯಬೇಕೆಂದು ಫೀನಿಕ್ಸ್ ಸಂಗಡದವರಿಗೆ ತಾರು ಕೊಟ್ಟೆನು.

ಮೊದಲು ಅವರು ಕಾಂಗ್ರಿಯ (ಹರಿದ್ವಾರದ) ಗುರುಕುಲದಲ್ಲಿ ಇಳಿದರು. ಅಲ್ಲಿ ದಿವಂ ಸ್ವಾಮಿ ಶ್ರದ್ಧಾನಂದಜಿಯವರು ಅವರನ್ನು ತಮ್ಮ ಮಕ್ಕಳಂತೆ ಕಂಡರು. ಇದಾದಮೇಲೆ ಅವರನ್ನು ಶಾಂತಿನಿಕೇತನ ಆಶ್ರಮಕ್ಕೆ ಕೊಂಡೊಯ್ದರು. ಅಲ್ಲಿ ಕವಿ ರವೀಂದ್ರರೂ ಅವರ ಜನರೂ ಈ ಸಂಗಡದ ಮೇಲೆ ಅದೇ ರೀತಿಯಾಗಿ ಪ್ರೇಮವರ್ಷವನ್ನು ಸುರಿಸಿದರು. ಇವೆರಡು ಸ್ಥಳಗಳಲ್ಲಿಯೂ ಅವರು ಸಂಪಾದಿಸಿದ ಅನುಭವವು ಅವರಿಗೂ ನನಗೂ ಸಹಾಯವಾಯಿತು. ರವೀಂದ್ರರೂ ಶ್ರದ್ಧಾನಂದಜಿಯವರೂ ಮತ್ತು ಅಧ್ಯಾಪಕ ಸುಶೀಲರುದ್ರರೂ, ನಾನು ಆಂಡ್ರೂ

ಸರಿಗೆ ಹೇಳುತ್ತಿದ್ದಂತೆ, ಅವರ (ಆಂಡ್ರೂಸರ) ತ್ರಿಮೂರ್ತಿಗಳಾಗಿದ್ದರು. ಅವರು ದಕ್ಷಿಣ ಆಫ್ರಿಕದಲ್ಲಿದ್ದಾಗ ಇವರುಗಳ ವಿಷಯವಾಗಿ ಮಾತನಾಡಲು ಅವರಿಗೆ ಬೇಸರವೇ ಆಗುತ್ತಿರಲಿಲ್ಲ ಅಲ್ಲಿನ ಅನೇಕ ಸವಿನೆನಹುಗಳಲ್ಲಿ ಇವರು ಆ ಮಹಾ ತ್ರಿಮೂರ್ತಿಗಳ ವಿಷಯವಾಗಿ ಹಗಲಿರುಳೂ ಮಾತನಾಡುತ್ತಿದ್ದುದಕ್ಕಿಂತ ಹೆಚ್ಚು ಮಧುರವಾದುದೂ ಸ್ಪಷ್ಟವಾದುದೂ ಯಾವುದೂ ಇಲ್ಲ. ಆದುದರಿಂದ ಮಿ. ಆಂಡ್ರೂಸರು ಫೀನಿಕ್ಸ್ ಪಂಗಡಕ್ಕೆ ಸುಶೀಲ ರುದ್ರರ ಸಂಪರ್ಕವನ್ನೂ ಉಂಟುಮಾಡಿದರು. ಅಧ್ಯಾಪಕ ರುದ್ರರಿಗೆ ಯಾವ ಆಶ್ರಮವೂ ಇರಲಿಲ್ಲ. ಅವರಿಗಿದ್ದುದು ತಮ್ಮ ಮನೆ ಅದನ್ನು ಅವರು ಫೀನಿಕ್ಸ್ ಕುಟುಂಬದ ಸರ್ವಸ್ವಾತಂತ್ರ್ಯಕ್ಕೆ ಬಿಟ್ಟುಕೊಟ್ಟರು. ಅವರ ಮನೆಯವರು ಪಂಗಡದವರನ್ನು ಎಷ್ಟು ಆದರದಿಂದ ಕಂಡರೆಂದರೆ ಪಂಗಡವು ಬಂದಿಳಿದ ಒಂದು ದಿನದಲ್ಲಿಯೇ ಅವರು ಫೀನಿಕ್ಸ್ ಆಶ್ರಮವನ್ನು ಮರೆತಂತೆ ಕಂಡಿತು.

ಫೀನಿಕ್ಸ್ ಕುಟುಂಬವು ಶಾಂತಿನಿಕೇತನದಲ್ಲಿರುವುದೆಂಬುದು ನಾನು ಮುಂಬಯಿಯಲ್ಲಿಳಿದಾಗಲೇ ನನಗೆ ಗೊತ್ತಾದುದು. ಆದುದರಿಂದ ನಾನು ಗೋಖಲೆಯವರೊಡನೆ ಬೆಟ್ಟಿಯಾದಮೇಲೆ ಆದಷ್ಟು ಜಾಗ್ರತೆಯಾಗಿ ಪಂಗಡವನ್ನು ನೋಡಲು ಆತುರನಾಗಿದ್ದೆನು

ಮುಂಬಯಿಯಲ್ಲಿ ನನಗಾಗಿ ಏರ್ಪಡಿಸಿದ ಸ್ವಾಗತಸಭೆಗಳು ನಾನು ಸಣ್ಣ ಸತ್ಯಾಗ್ರಹವನ್ನು ನಡೆಸಲು ಕಾರಣವಾದುವು

ನನ್ನ ಸಮ್ಮಾನಾರ್ಥವಾಗಿ ಮಿ. ಜಹಾಂಗೀರ್ ಪಟಿಟರ ಮನೆಯಲ್ಲಿ ಕೂಡಿದ ಸಭೆಯಲ್ಲಿ ನನಗೆ ಗುಜರಾತಿಯಲ್ಲಿ ಮಾತನಾಡಲು ಧೈರ್ಯವುಂಟಾಗಲಿಲ್ಲ. ಮಹಾ ವೈಭವದಿಂದ ಬೆಳಗುತ್ತಿದ್ದ ಆ ಪ್ರಾಸಾದದ ಆವರಣದಲ್ಲಿ ಜೀವನದ ಮುಖ್ಯಭಾಗವನ್ನು ಕರಾರುಕೂಲಿಗಾರರ ಮಧ್ಯೆ ಕಳೆದಿದ್ದ ನಾನು ನನ್ನ ಮನಸ್ಸಿಗೇ ಹಳ್ಳಿಯ ಗೌಡನಂತೆ ತೋರಿದೆನು. ನಾನು ಆಗ ಕಾಧ್ಯವಾಡಿ ಸಿಲುವಂಗಿ, ಪೇಟಾ ಮತ್ತು ಪಂಚೆಗಳನ್ನು ಹಾಕಿಕೊಂಡಿದ್ದೆನು. ಆದುದರಿಂದ ನಾನು ಇಂದು ಕಾಣುವುದಕ್ಕಿಂತ ಅಂದು ಹೆಚ್ಚುಮಟ್ಟಿಗೆ ನಾಗರಿಕನಾಗಿ ಕಂಡಿದ್ದಿರಬೇಕು. ಆದರೆ

ಎಂ. ಪೆಟಿಟರ ದಿವ್ಯಭವನದ ವೈಭವಪಮಾರಂಭಗಳು ನನ್ನನ್ನು ನೀರಿನಿಂದ ಹೊರಗೆ ಬಂದ ಮೀನಿನಂತೆ ಮಾಡಿದುವು. ಆದರೂ ನಾನು ಸರ್ ಫಿರೋಜ್‌ಷಹರ ಆಶ್ರಯವನ್ನು ಹೊಕ್ಕು ನಗೆಗೀಡಾಗದೆ ಗೆದ್ದೆನು.

ಇದಾದಮೇಲೆ ಗುಜರಾತೀ ಕೂಟವಿದ್ದಿತು. ಸ್ವಾಗತಸಭೆಯಲ್ಲಿ ನನಗೆ ಮನ್ನಣೆಮಾಡದೆ ಗುಜರಾತಿಗಳು ನನ್ನನ್ನು ಬಿಡುವುದೆಲ್ಲಿ? ಈ ಸಭೆಯನ್ನು ದಿವಂ. ಉತ್ತಮಲಾಲ ತ್ರಿವೇದಿಯವರು ಏರ್ಪಡಿಸಿದ್ದರು. ಇದರ ಕಾರ್ಯಕ್ರಮವನ್ನು ನಾನು ಮುಂಚೆಯೇ ತಿಳಿದುಕೊಂಡಿದ್ದೆನು. ಮಿ. ಜಿನ್ನಾರವರು ಗುಜರಾತಿನವರು ಆದುದರಿಂದ ಅವರೂ ಅಲ್ಲಿಗೆ ಬಂದಿದ್ದರು—ಅಧ್ಯಕ್ಷರಾಗಿಯೋ ಅಥವಾ ಪ್ರಧಾನ ಉಪನ್ಯಾಸಕರಾಗಿಯೋ ನನಗೆ ನೆನಪಿಲ್ಲ. ಅವರು ತಮ್ಮ ಮಧುರವಾದ ಸಂಕ್ಷೇಪವಾದ ಭಾಷಣವನ್ನು ಇಂಗ್ಲಿಷಿನಲ್ಲಿ ಮಾಡಿದರು. ನನಗೆ ನೆನಪಿರುವಮಟ್ಟಿಗೆ ಉಳಿದ ಭಾಷಣಗಳಲ್ಲಿ ಬಹು ಭಾಗವು ಇಂಗ್ಲಿಷಿನಲ್ಲಿಯೇ ನಡೆಯಿತು. ನನ್ನ ಸರದಿಯು ಬಂದಾಗ ನಾನು ನನ್ನ ಕೃತಜ್ಞತೆಯನ್ನು ಗುಜರಾತಿಯಲ್ಲಿ ವ್ಯಕ್ತಪಡಿಸುತ್ತಾ ಗುಜರಾತಿ ಹಿಂದುಸ್ಥಾನಿ ಭಾಷೆಗಳಲ್ಲಿ ನನಗಿರುವ ಪಕ್ಷಪಾತಕ್ಕೆ ಕಾರಣವನ್ನು ವಿವರಿಸಿ ಗುಜರಾತೀ ಜನರು ಕೂಡಿರುವ ಸಭೆಯಲ್ಲಿ ಇಂಗ್ಲಿಷಿನಲ್ಲಿ ಮಾತನಾಡುವುದನ್ನು ನಮ್ರತಾಪೂರ್ವಕವಾಗಿ ಖಂಡಿಸಿದೆನು. ಹೀಗೆ ಮಾಡುವಾಗ ನಾನು ಸ್ವಲ್ಪ ಹಿಂದೆಗೆಯದೆ ಇರಲಿಲ್ಲ. ಏಕೆಂದರೆ ದೀರ್ಘಪ್ರವಾಸದಿಂದ ಹಿಂತಿರುಗಿದ ಅನುಭವಸಾಲದ ಮನುಷ್ಯನು ನಡೆವಳಿಕೆಯಲ್ಲಿರುವ ಪದ್ಧತಿಗಳನ್ನು ವಿರೋಧಿಸುವುದು ಎಲ್ಲಿ ಅವಿನಯವರ್ತನೆಯೆಂದು ಎಣಿಸಲ್ಪಡುವುದೋ ಎಂಬ ದಿಗಿಲು ನನಗಿದ್ದಿತು. ಆದರೆ ಗುಜರಾತಿಯಲ್ಲಿಯೇ ಉತ್ತರಕೊಡಬೇಕೆಂದು ನಾನು ಖಂಡಿತದಿಂದ್ದುದನ್ನು ಯಾರೂ ತಪ್ಪುತಿಳಿದುಕೊಂಡಂತೆ ತೋರಲಿಲ್ಲ. ಅಷ್ಟೇಕೆ, ಪ್ರತಿಯೊಬ್ಬರೂ ನನ್ನ ವಿರೋಧವಾದಕ್ಕೆ ಸಮ್ಮತಿಸಿದಂತೆಯೇ ತೋರಿತು. ಇದರಿಂದ ನನಗೆ ಸಂತೋಷವಾಯಿತು.

ದೇಶಬಾಂಧವರ ಮುಂದೆ ನನ್ನ ಹೊಸರೀತಿಯ ಅಭಿಪ್ರಾಯಗಳನ್ನು ನಿರ್ದೇಶಿಸಲು ಕಷ್ಟವೇನೂ ಆಗುವುದಿಲ್ಲವೆಂದು ಯೋಚಿಸಲು ಈ ಸಭೆಯಿಂದ ನಾನು ಎದೆಗೊಂಡೆನು

ನಾನು ಮುಂಬಯಿಯಲ್ಲಿ ಕೊಂಚ ಕಾಲ ಮಾತ್ರ ನಿಂತೆನು. ಈ ಅಲ್ಪಕಾಲವು ಈ ರೀತಿಯ ಪ್ರಾಥಮಿಕ ಅನುಭವಗಳಿಂದ ತುಂಬಿದ್ದಿತು ಅಲ್ಲಿಂದ ನಾನು ಗೋಖಲೆಯವರ ಆಜ್ಞೆಯಪ್ರಕಾರ ಪೂನಾಕ್ಕೆ ಹೋದೆನು



೨

# ಪೂನಾದಲ್ಲಿ ಗೋಖಲೆಯವರೊಡನೆ

ನಾನು ಮುಂಬಯಿಯನ್ನು ತಲಪಿದೆನೋ ಇಲ್ಲವೋ ಗವರ್ನರರು ನನ್ನನ್ನು ನೋಡಲಿಚ್ಛಿಸುವರೆಂದೂ ನಾನು ಪೂನಾಕ್ಕೆ ಹೊರಡುವುದಕ್ಕೆ ಮುಂಚೆ ಅವರನ್ನು ನೋಡುವುದು ಉಚಿತವೆಂದೂ ಗೋಖಲೆಯವರು ನನಗೆ ಹೇಳಿಕಳುಹಿಸಿದರು ಅದೇಪ್ರಕಾರ ನಾನು ಗವರ್ನರರನ್ನು ಬೆಟ್ಟಿ ಮಾಡಿದೆನು ಯಥಾಪ್ರಕಾರ ಕುಶಲವಾರ್ತಾವಿಚಾರವಾದಮೇಲೆ ಅವರು

"ನಿಮ್ಮಲ್ಲಿ ಒಂದು ವಿಚಾರವನ್ನು ಕೇಳುತ್ತೇನೆ—ಸರಕಾರದ ಸಂಬಂಧವಾಗಿ ನೀವು ಯಾವ ಕೆಲಸವನ್ನು ಮಾಡಬೇಕಾದರೂ ನನ್ನನ್ನು ಬಂದು ನೋಡಿದರೆ ಸಂತೋಷ" ಎಂದು ನನಗೆ ಹೇಳಿದರು

"ನಾನು ಇದಕ್ಕೆ ಸುಲಭವಾಗಿ ಒಪ್ಪಬಲ್ಲೆನು. ಏಕೆಂದರೆ ಸತ್ಯಾಗ್ರಹಿಯಾಗಿ ನಾನು ನನ್ನ ಇದಿರುಕಕ್ಷಿಗಳ ಅಭಿಮತವನ್ನು ತಿಳಿದುಕೊಂಡು ಸಾಧ್ಯವಾದಮಟ್ಟಿಗೂ ಅವರ 'ಅಭಿಪ್ರಾಯಕ್ಕೆ ಸಮ್ಮತಿಸಲು ಪ್ರಯತ್ನಪಡುವುದು ನನ್ನ ನಿಯಮ. ದಕ್ಷಿಣ ಆಫ್ರಿಕದಲ್ಲಿ ನಾನು ಈ ನಿಯಮವನ್ನು ತಪ್ಪದೆ ಅನುಸರಿಸಿದೆನು. ಇಲ್ಲಿಯೂ ಹಾಗೆಯೇ ಮಾಡಬೇಕೆಂದು ನನ್ನ ಉದ್ದೇಶ." ಎಂದು ಉತ್ತರವಿತ್ತೆನು.

ಲಾರ್ಡ್ ವಿಲ್ಲಿಂಗ್‍ಡನರು ನನಗೆ ತಮ್ಮ ಕೃತಜ್ಞತೆಯನ್ನು ವ್ಯಕ್ತಪಡಿಸಿ

"ನಿಮಗೆ ಇಷ್ಟಬಂದಾಗ ನೀವು ನನ್ನನ್ನು ಕಾಣಬಹುದು ನನ್ನ ಸರಕಾರವು ಉದ್ದೇಶಪೂರ್ವಕವಾಗಿ ಯಾವ ತಪ್ಪನ್ನೂ ಮಾಡುವುದಿಲ್ಲ ವೆಂಬುದನ್ನು ನೀವೇ ನೋಡುವಿರಿ" ಎಂದರು.

ಅದಕ್ಕೆ ನಾನು "ಈ ನಂಬಿಕೆಯೇ ನನ್ನ ಆಧಾರಸ್ತಂಭವಾಗಿದೆ." ಎಂದೆನು.

ಆಮೇಲೆ ನಾನು ಪೂನಾಕ್ಕೆ ಹೋದೆನು ಈ ಅಮೂಲ್ಯವಾದ ಕಾಲದ ನೆನಪುಗಳನ್ನೆಲ್ಲಾ ತಿಳಿಸುವುದು ಅಸಾಧ್ಯ. ಗೋಖಲೆಯವರೂ ಭಾರತಸೇವಾಸಂಘ (ಸರ್ವೆಂಟ್ಸ್ ಆಫ್ ಇಂಡಿಯ ಸೊಸೈಟಿ) ದ ಸದಸ್ಯರೂ ನನ್ನನ್ನು ಅತ್ಯಾದರದಿಂದ ಕಂಡರು ನನಗೆ ನೆನಪಿರುವಮಟ್ಟಿಗೆ ಗೋಖಲೆಯವರು ನನ್ನನ್ನು ನೋಡುವುದಕ್ಕಾಗಿ ಅವರೆಲ್ಲರನ್ನೂ ಕರೆಸಿದ್ದರು. ಸಕಲ ವಿಧದ ವಿಷಯಗಳನ್ನೂ ಕುರಿತು ಅವರೆಲ್ಲರೊಡನೆ ನಾನು ನಿರಾತಂಕವಾಗಿ ಮಾತನಾಡಿದೆನು

ನಾನು ಭಾರತ ಸೇವಾಸಂಘವನ್ನು ಸೇರಬೇಕೆಂದು ಗೋಖಲೆಯವರಿಗೆ ಬಹು ತೀವ್ರವಾದ ಇಚ್ಛೆಯಿದ್ದಿತು ನನಗೂ ಹಾಗೆಯೇ ಇದ್ದಿತು. ಆದರೆ ನನ್ನ ಮತ್ತು ಸಂಘದವರ ಧ್ಯೇಯಗಳಿಗೂ ಕೆಲಸ ನಡೆಸುವ ರೀತಿಗೂ ಬಹು ವ್ಯತ್ಯಾಸವಿದ್ದುದರಿಂದ ನಾನು ಸಂಘಕ್ಕೆ ಸೇರುವುದು ಉಚಿತವಾಗಿರಲಾರದೆಂದು ಸದಸ್ಯರುಗಳಿಗೆ ತೋರಿತು ನನ್ನ ಸ್ವಂತ ನೀತಿನಿಯಮಗಳ ವಿಷಯದಲ್ಲಿ ನಾನು ಖಂಡಿತವಾಗಿದ್ದರೂ ಅವರ ನೀತಿನಿಯಮಗಳಿಗೆ ಸಹನೆಯನ್ನು ತೋರಿಸಲು ನಾನು ಸಿದ್ಧನಾಗಿರುವೆನೆಂದು ಗೋಖಲೆಯವರು ನಂಬಿದ್ದರು.

"ಆದರೆ ಇತರರ ಅಭಿಮತಕ್ಕೆ ತಕ್ಕ ಬೆಲೆಯನ್ನು ಕೊಡಲು ನಿಮಗಿರುವ ಸಿದ್ಧತೆಯನ್ನು ಸಂಘದ ಸದಸ್ಯರು ಇನ್ನೂ ಅರಿತಿಲ್ಲ. ಅವರು ತಮ್ಮ ನೀತಿನಿಯಮಗಳ ವಿಷಯವಾಗಿ ಹಟವಾದಿಗಳಾಗಿದ್ದಾರೆ. ಮತ್ತು ಕೇವಲ ಸ್ವತಂತ್ರರಾಗಿದ್ದಾರೆ ಅವರು ನಿಮ್ಮನ್ನು ಸ್ವೀಕರಿಸುವರೆಂಬ ಆಸೆಯನ್ನು ನಾನು ಇಟ್ಟುಕೊಂಡಿದ್ದೇನೆ. ಒಂದುವೇಳೆ ಅವರು ಹಾಗೆ ಮಾಡದಿದ್ದರೆ ಅವರಿಗೆ ನಿಮ್ಮಲ್ಲಿ ಗೌರವವಾಗಲಿ ಆದರವಾಗಲಿ ಇಲ್ಲವೆಂದು ಒಂದು ಕ್ಷಣವೂ ಎಣಿಸಬೇಡಿ. ನಿಮ್ಮಲ್ಲಿ ಅವರಿಟ್ಟಿರುವ ಗೌರವಕ್ಕೆ ಅಪಾಯವುಂಟಾದೀತೆಂದು ಅವರು ನಿಮ್ಮನ್ನು ಸೇರಿಸಿಕೊಳ್ಳಲು ಹಿಂದುಮುಂದು ನೋಡುತ್ತಿದ್ದಾರೆ ಆದರೆ ಅವರು ನಿಮ್ಮನ್ನು ನಿಯ

ಮಪೂರ್ವಕವಾಗಿ ಸೇರಿಸಿಕೊಳ್ಳಲಿ ಬಿಡಲಿ ನಾನಂತು ನಿಮ್ಮನ್ನು ಸದಸ್ಯರೆಂದೇ ಎಣಿಸುತ್ತೇನೆ '' ಎಂದು ಗೋಖಲೆಯವರು ಹೇಳಿದರು.

ನಾನು ಗೋಖಲೆಯವರಿಗೆ ನನ್ನ ಉದ್ದೇಶಗಳನ್ನು ತಿಳಿಸಿದೆನು. ನನ್ನನ್ನು ಸದಸ್ಯನನ್ನಾಗಿ ಸೇರಿಸಿಕೊಳ್ಳಲಿ ಬಿಡಲಿ, ನನ್ನ ಫೀನಿಕ್ಸ್ ಕುಟುಂಬದೊಡನೆ ಗುಜರಾತಿನಲ್ಲಿ ಎಲ್ಲಿಯಾದರೂ ಆಶ್ರಮವನ್ನು ಮಾಡಿಕೊಂಡು ನೆಲೆಸಬೇಕೆಂದು ನನಗೆ ಇಚ್ಛೆಯಿದ್ದಿತು. ಏಕೆಂದರೆ ನಾನು ಗುಜರಾತಿನವನಾದುದರಿಂದ ಗುಜರಾತಿನ ಸೇವೆಮಾಡುವುದರ ಮೂಲಕ ದೇಶಸೇವೆ ಮಾಡುವುದೇ ನನಗೆ ಸರಿಯಾದ ದಾರಿಯೆಂದು ನಾನು ತಿಳಿದುಕೊಂಡಿದ್ದೆನು. ಗೋಖಲೆಯವರಿಗೆ ಈ ಅಭಿಪ್ರಾಯವು ರುಚಿಸಿತು. ಅವರು

'' ನೀವು ಅಗತ್ಯವಾಗಿ ಹಾಗೆ ಮಾಡಬೇಕು ಸದಸ್ಯರೊಡನೆ ನಿಮ್ಮ ಮಾತುಕಥೆಯ ಫಲವೇನೇ ಆಗಲಿ ಆಶ್ರಮದ ವೆಚ್ಚವನ್ನು ನೀವು ನನ್ನಿಂದಲೇ ಪಡೆಯಬೇಕು ಆಶ್ರಮವು ನನ್ನದೆಂದೇ ಎಣಿಸುತ್ತೇನೆ '' ಎಂದರು.

ನನ್ನ ಹೃದಯವು ಆನಂದದಿಂದ ತುಂಬಿತುಳುಕಿತು ಹಣ ಕೂಡಿಸುವ ಜವಾಬ್ದಾರಿಯು ತೊಲಗಿ ನಾನೊಬ್ಬನೇ ಈ ಕೆಲಸದಲ್ಲಿ ತೊಡಗಬೇಕಾದ ಆವಶ್ಯಕತೆಯಿಲ್ಲದೆ ನಾನು ಕಷ್ಟಕ್ಕೆ ಸಿಲುಕಿದಾಗಲೆಲ್ಲಾ ಕಡೆಹಾಯಿಸುವವರೊಬ್ಬರು ದೊರಕಿದುದು ಹರ್ಷದಾಯಕವಾಗಿದ್ದಿತು. ಇದೆಲ್ಲದರಿಂದ ನನ್ನ ಮನಸ್ಸಿನಿಂದ ದೊಡ್ಡ ಹೊರೆಯೊಂದಿಳಿಯಿತು. ದಿವಂ. ಡಾ ದೇವರನ್ನು ಕರೆಯಿಸಿ ಸಂಘದ ಲೆಕ್ಕದ ಪುಸ್ತಕಗಳಲ್ಲಿ ನನ್ನ ಹೆಸರಿಗೊಂದು ಖಾತೆಯನ್ನು ತೆಗೆದು ಆಶ್ರಮಕ್ಕಾಗಿಯೂ ಸಾರ್ವಜನಿಕ ಕಾರ್ಯಗಳ ವೆಚ್ಚಕ್ಕಾಗಿಯೂ ನನಗೆ ಬೇಕಾಗುವ ಹಣವನ್ನು ಕೊಡಲು ಅವರಿಗೆ ಹೇಳಿದುದಾಯಿತು.

ನಾನು ಇನ್ನು ಶಾಂತಿನಿಕೇತನಕ್ಕೆ ಹೋಗಲು ಸಿದ್ಧಪಡಿಸಿಕೊಂಡೆನು. ನಾನು ಹೊರಡುವುದಕ್ಕೆ ಮುಂಚೆ ಗೋಖಲೆಯವರು ಕಲವು ಮಿತ್ರರನ್ನು ಆರಿಸಿ ಕರೆದು ಕೂಟವನ್ನೇರ್ಪಡಿಸಿದರು. ನನಗೆ ಇಷ್ಟವಾದ ಆಹಾರ

ಪದಾರ್ಥಗಳನ್ನೇ—ಹಣ್ಣುಗಳು, ಬಾದಾಮಿ, ದ್ರಾಕ್ಷಿ ಮುಂತಾದುವುಗಳನ್ನು—ತರಿಸಿದ್ದರು. ಅವರ ಕೊಠಡಿಯಿಂದ ನಾಲ್ಕು ಹೆಜ್ಜೆಯ ದೂರದಲ್ಲಿಯೇ ಈ ಕೂಟವು ಸೇರಿದ್ದರೂ ಅವರು ಅಷ್ಟು ದೂರ ಕೂಡ ನಡೆದು ಕೂಟದಲ್ಲಿ ಭಾಗಿಗಳಾಗುವ ಸ್ಥಿತಿಯಲ್ಲಿರಲಿಲ್ಲ. ಆದರೆ ಅವರು ನನ್ನಲ್ಲಿಟ್ಟಿದ್ದ ಪ್ರೇಮದ ಕಾರಣ ಹಟ ಹಿಡಿದು ಅವರು ಬಂದರು. ಆದರೆ ಅವರು ಮೂರ್ಛೆಹೋದುದರಿಂದ ಅವರನ್ನು ಹಿಂದಕ್ಕೆ ಹೊತ್ತುಕೊಂಡು ಹೋಗಬೇಕಾಯಿತು. ಹಾಗೆ ಅವರು ಮೂರ್ಛೆ ಹೋದುದು ಇದೇನೂ ಮೊದಲನೆಯ ಸಲವಾಗಿರಲಿಲ್ಲ. ಆದುದರಿಂದ ತಮಗೆ ತಿಳಿವು ಬಂದೊಡನೆಯೇ ಅವರು ನಾವು ಕೂಟವನ್ನು ನಡೆಸಬೇಕೆಂದು ಹೇಳಿಕಳುಹಿಸಿದರು.

ಈ ಕೂಟವು ಸಂಘದ ಅತಿಥಿಗೃಹದ ಇದಿರಿನ ಬಯಲಿನಲ್ಲಿ ಕೆಲವು ಮಿತ್ರರು ಸೇರಿ ನೆಲಗಡಲೆಕಾಯಿ, ಖರ್ಜೂರ ಮತ್ತು ಆಗ ದೊರಕುತ್ತಿದ್ದ ಹಣ್ಣುಗಳನ್ನು ಸೇವಿಸುತ್ತಾ, ಒಬ್ಬರಿಗೊಬ್ಬರು ತಮ್ಮ ಮನಸ್ಸಿನಲ್ಲಿದ್ದುದನ್ನೆಲ್ಲಾ ಹೇಳುತ್ತಾ ಮಾತುಕಥೆಯಾಡಲು ಅವಕಾಶವನ್ನೊದಗಿಸಿಕೊಡುವ ಏರ್ಪಾಡಾಗಿದ್ದಿತೇ ವಿನಾ ಇನ್ನೇನೂ ಅಲ್ಲವೆಂದು ಹೇಳಬೇಕಾಗಿಲ್ಲ.

ಆದರೆ ಎಚ್ಚರದಪ್ಪಿ ಬೀಳುವುದು ನನ್ನ ಜೀವನದಲ್ಲಿ ಸಾಧಾರಣವಾದ ವಿಷಯವಾಗಿಯೇನೂ ಪರಿಣಮಿಸಲಿಲ್ಲ.



೩

# ಅದೇನು ಬೆದರಿಕೆಯೆ ?

ನಾನು ಮುಂಬಯಿಯಿಂದ ರಾಜಕೋಟೆಗೂ ಪೋರಬಂದರಿಗೂ ಹೋದೆನು ಅಲ್ಲಿ ನಾನು ನಮ್ಮ ಅತ್ತಿಗೆ (ನಮ್ಮ ಗತಿಸಿದ ಅಣ್ಣನ ಹೆಂಡತಿ)ಯನ್ನೂ ಇತರ ನೆಂಟರನ್ನೂ ನೋಡಬೇಕಾಗಿದ್ದಿತು

ದಕ್ಷಿಣ ಆಫ್ರಿಕದಲ್ಲಿ ಸತ್ಯಾಗ್ರಹಕದನದ ಕಾಲದಲ್ಲಿ ನಾನು ನನ್ನ ಉಡುಪನ್ನು ಸಾಧ್ಯವಾದಮಟ್ಟಿಗೂ ಕರಾರುಕೂಲಿಗಾರರ ಉಡುಪಿನಂತಿರುವಂತೆ ಮಾರ್ಪಡಿಸಿದ್ದೆನು ಇಂಗ್ಲೆಂಡಿನಲ್ಲಿ ಕೂಡ ಮನೆಯಲ್ಲಿ ಇದೇ ಪೋಷಾಕನ್ನು ಧರಿಸುತ್ತಿದ್ದನು ಮುಂಬಯಿಯಲ್ಲಿ ಜಹಜಿನಿಂದ ಇಳಿಯುವಾಗ ಹಾಕಿಕೊಳ್ಳಲು ನನ್ನ ಬಳಿ ಕಾಧ್ಯವಾಡೀ ಉಡುಪಿದ್ದಿತು. —ಒಂದು ಕುಡತ, ಒಂದು ಪಂಚೆ, ಒಂದು ನಿಲುವಂಗಿ ಮತ್ತು ಒಂದು ಬಿಳಿಯ ಪೇಟಾ ಇದೆಲ್ಲವೂ ಹಿಂದೂಸ್ಥಾನದಲ್ಲಿ ಯಂತ್ರರಿಂದ ಆದ ಬಟ್ಟೆಯಾಗಿದ್ದಿತು. ಆದರ ನಾನು ಮುಂಬಯಿಯಿಂದ ಮೂರನೆಯ ತರಗತಿಯಲ್ಲಿ ಪ್ರಯಾಣಮಾಡುವವನಾಗಿದ್ದುದರಿಂದ ನಿಲುವಂಗಿ, ಪೇಟಾ, ಇವುಗಳು ಹೊರೆಯೆಂದೆಣಿಸಿ ಅವನ್ನು ತಗದಿಟ್ಟು ಒಂದು ಹತ್ತಾಣೆಯ ಕಾಶ್ಮೀರೀ ಟೋಪಿಯನ್ನು ಕೊಂಡುಕೊಂಡೆನು. ಈ ರೀತಿಯಾದ ಉಡುಪನ್ನು ಧರಿಸಿರುವವನನ್ನು ನೋಡಿದವರು ಬಡವನೆಂದೆಣಿಸುವುದರಲ್ಲಿ ಸಂಶಯವೇ ಇರಲಿಲ್ಲ.

ಆಗ ಗಂಟುಬೇನೆಯು (ಪ್ಲೇಗ್) ಹರಡಿದ್ದಿತಾದುದರಿಂದ ಮೂರನೆಯ ತರಗತಿಯ ಪ್ರಯಾಣಿಕರನ್ನು ವೀರಮ್ ಗಾಮುದಲ್ಲಿಯೋ ವಢವಾಣದಲ್ಲಿಯೋ (ನನಗೆ ಸರಿಯಾಗಿ ನೆನಪಿಲ್ಲ) ವೈದ್ಯರು ಪರೀಕ್ಷಿಸುತ್ತಿದ್ದರು ನನಗೆ ಸ್ವಲ್ಪ ಜ್ವರವಿದ್ದಿತು. ನನ್ನ ಮೈ ಬಿಸಿಯಾಗಿದ್ದುದನ್ನು ನೋಡಿ ವೈದ್ಯರು ನಾನು ರಾಜಕೋಟೆಯಲ್ಲಿನ ವೈದ್ಯಾಧಿಕಾರಿಗಳನ್ನು ಕಾಣಬೇಕೆಂದು ನನಗೆ ಹೇಳಿ ನನ್ನ ಹೆಸರನ್ನು ಬರದುಕೊಂಡರು

ನಾನು ವಢವಾಣದಮೇಲೆ ಪಯಣ ಬೆಳೆಸುವೆನೆಂಬ ಸಮಾಚಾರವನ್ನು ಯಾರೋ ಕಳುಹಿಸಿದ್ದರೆಂದು ತೋರುತ್ತದೆ ಏಕೆಂದರೆ ಅಲ್ಲಿನ ಪ್ರಸಿದ್ಧ ಪ್ರಜಾಸೇವಕರಾದ ಚಿಪ್ಪಿಗ (ದರ್ಜಿ) ಮೋತೀಲಾಲರು ನನ್ನನ್ನು ನಿಲ್ದಾಣದಲ್ಲಿ ಬಂದು ಕಂಡು ವೀರಮ್‌ಗಾಮದ ಸುಂಕದಕಟ್ಟೆಯ ವಿಚಾರವನ್ನೂ ಆ ಕಾರಣದಿಂದ ರೈಲಿನ ಪ್ರಯಾಣಿಕರು ಪಡುತ್ತಿದ್ದ ಸಂಕಟಗಳನ್ನೂ ನನಗೆ ತಿಳಿಸಿದರು. ನಾನು ಜ್ವರದಿಂದ ನರಳುತ್ತಿದ್ದಕಾರಣ ನನಗೆ ಮಾತನಾಡಲು ಇಚ್ಛೆಯಿರಲ್ಲಿಲ್ಲ. ಆದುದರಿಂದ ಸಂಕ್ಷೇಪವಾದ ಉತ್ತರವನ್ನಿತ್ತು ಈ ಪ್ರಸಂಗವನ್ನು ಮುಗಿಸಲು ಯತ್ನಿಸಿದೆನು. ಆ ಉತ್ತರವು ಈ ಪ್ರಶ್ನೆಯ ರೂಪವಾಗಿದ್ದಿತು

"ನೀವುಗಳು ಸೆರೆಮನೆಗೆ ಹೋಗಲು ಸಿದ್ಧರಾಗಿದ್ದೀರಾ?"

ಆಲೋಚನೆಯಿಲ್ಲದೆ ಮಾತನಾಡುವ ದುಡುಕಿನ ಯುವಕರಲ್ಲಿ ಮೋತೀಲಾಲರೂ ಒಬ್ಬರೆಂದು ನಾನು ಎಣಿಸಿದ್ದೆನು ಆದರೆ ಅದು ತಪ್ಪಾಗಿದ್ದಿತು. ಅವರು ದೃಢತಾಪೂರ್ವಕವಾಗಿ

"ನೀವು ನಮ್ಮ ಮುಂದಾಳಾಗುವುದಾದರೆ ನಾವು ಕಾರಾಗೃಹಕ್ಕೆ ಅಗತ್ಯವಾಗಿ ಹೋಗುತ್ತೇವೆ ನಾವು ಕಾಥ್ಯವಾಡಿಗಳಾದುದರಿಂದ ನಿಮ್ಮ ಮೇಲಿನ ಮೊಟ್ಟಮೊದಲಿನ ಅಧಿಕಾರವು ನಮ್ಮದೇ ಆಗಿದೆ. ನಿಮ್ಮನ್ನು ಈಗ ಇಲ್ಲಿ ನಿಲ್ಲಿಸಬೇಕೆಂದು ನಾವೇನೂ ಅಪೇಕ್ಷಿಸುವುದಿಲ್ಲ. ಆದರ ನೀವು ಹಿಂತಿರುಗುವಾಗ ಇಲ್ಲಿ ನಿಲ್ಲುವಿರೆಂದು ಮಾತುಕೊಡಬೇಕು ನಮ್ಮ ಯುವಕರ ಕಾರ್ಯವನ್ನೂ ಉತ್ಸಾಹವನ್ನೂ ನೋಡಿ ನೀವು ಸಂತಸಗೊಳ್ಳುವಿರಿ ನೀವು ಕರೆಯುವುದೇ ತಡ ನಾವು ಬಂದು ಸೇರುವೆವೆಂದು ನೀವು ನಮ್ಮಲ್ಲಿ ಭರವಸೆಯಿಡಬಹುದು." ಎಂದು ಉತ್ತರ ಕೊಟ್ಟರು

ಮೋತೀಲಾಲರಿಗೆ ನಾನು ಮನಸೋತೆನು. ಅವರ ಜೊತೆಗಾರರೊಬ್ಬರು ಅವರನ್ನು ಹೊಗಳುತ್ತಾ

"ನಮ್ಮ ಮಿತ್ರರೇನೋ ದರ್ಜಿಯವರು. ಆದರೆ ತಮ್ಮ ಕೆಲಸದಲ್ಲಿ ಅವರು ಎಷ್ಟು ಗಟ್ಟಿಗರೆಂದರ ದಿನಕ್ಕೆ ಒಂದು ಘಂಟೆಯಂತೆ ಕೆಲಸ

ಮಾಡಿ ತಿಂಗಳಿಗೆ ಸುಲಭವಾಗಿ ೧೫ ರೂಪಾಯಿ ಸಂಪಾದಿಸುತ್ತಾರೆ. ಅವರಿಗೆ ಬೇಕಾದುದೂ ಅಷ್ಟೆ. ಉಳಿದ ಕಾಲವನ್ನೆಲ್ಲಾ ಸಾರ್ವಜನಿಕ ಸೇವೆಯಲ್ಲಿ ವಿನಿಯೋಗಿಸುತ್ತಾರೆ. ಓದು ಬರಹ ಕಲಿತ ನಮ್ಮೆಲ್ಲರಿಗೂ ಮುಂದಾಳಾಗಿ ಅವರು ನಮ್ಮನ್ನು ನಾಚಿಕೆಗೊಳಿಸುತ್ತಾರೆ.'' ಎಂದರು.

ಆಮೇಲೆ ಮೋತೀಲಾಲರಿಗೂ ನನಗೂ ಗಾಢಪರಿಚಯವುಂಟಾದಾಗ ಈ ಸ್ತುತಿಯಲ್ಲಿ ಅತಿಶಯೋಕ್ತಿಯೇನೂ ಇರಲಿಲ್ಲವೆಂಬುದು ನನಗೆ ಗೊತ್ತಾಯಿತು. ಸತ್ಯಾಗ್ರಹಾಶ್ರಮದ ಸ್ಥಾಪನೆಯಾದ ಮೇಲೆ ಪ್ರತಿ ತಿಂಗಳೂ ಕೆಲವು ದಿವಸಗಳನ್ನು ಅಲ್ಲಿ ಕಳೆದು ಅಲ್ಲಿನ ಹುಡುಗರಿಗೆ ಹೊಲಿಗೆಯ ಕೆಲಸವನ್ನು ಕಲಿಸಿಕೊಟ್ಟು ಆಶ್ರಮದ ಬಟ್ಟೆಗಳಲ್ಲಿ ಕೆಲವನ್ನು ಸ್ವತಃ ಹೊಲಿಯುತಿದ್ದರು. ವೀರಮ್‌ಗಾಮದ ವಿಷಯವನ್ನೂ ಅಲ್ಲಿ ಪ್ರಯಾಣಿಕರು ಅನುಭವಿಸುತ್ತಿದ್ದ ತೊಂದರೆಗಳನ್ನೂ ಇವರು ಪ್ರತಿನಿತ್ಯವೂ ನನ್ನೊಡನೆ ಹೇಳುತ್ತಿದ್ದರು ಹಾದಿಗಾರರ ಸಂಕಟವನ್ನು ನೋಡಿ ಸಹಿಸಲು ಇವರಿಗೆ ಕೇವಲ ಅಸಾಧ್ಯವಾಗಿದ್ದಿತು. ಆಕಸ್ಮಿಕವಾಗಿ ಒದಗಿದ ಜಾಡ್ಯವು ಇವರನ್ನು ತುಂಬುಜವ್ವನದಲ್ಲಿ ಕೊಂಡೊಯ್ದಿತು. ಇವರನ್ನುಳಿದ ವಢವಾಣದ ಲೋಕಜೀವನವು ಕಳೆಗುಂದಿತು.

ರಾಜಕೋಟೆಯನ್ನು ತಲುಪಿದ ಮಾರನೆಯ ಪ್ರಾತಃಕಾಲವೇ ನಾನು ಅಲ್ಲಿನ ವೈದ್ಯಾಧಿಕಾರಿಗಳನ್ನು ಹೋಗಿ ಕಂಡೆನು ಅವರು ನಾಚಿಕೆಗೊಂಡು ನನ್ನನ್ನು ಪರೀಕ್ಷಿಸಿದ ವೈದ್ಯರ ಮೇಲೆ ಸಿಟ್ಟಾದರು. ಇದು ಅನಾವಶ್ಯಕವಾಗಿದ್ದಿತು. ಏಕೆಂದರೆ ಪರೀಕ್ಷಕರು ತಮ್ಮ ಕರ್ತವ್ಯವನ್ನು ಮಾಡಿದ್ದರೇ ಹೊರತು ಇನ್ನೇನೂ ಇಲ್ಲ. ಅವರಿಗೆ ನಾನು ಯಾರೆಂಬುದು ತಿಳಿದಿರಲಿಲ್ಲ. ಒಂದುವೇಳೆ ಹಾಗೆ ತಿಳಿದಿದ್ದರೂ ಅವರು ಬೇರೆ ರೀತಿಯಲ್ಲಿ ವರ್ತಿಸಕೂಡದಾಗಿದ್ದಿತು. ವೈದ್ಯಾಧಿಕಾರಿಗಳು ನನ್ನನ್ನು ಪುನಃ ತಮ್ಮ ಬಳಿಗೆ ಬರಗೊಡದೆ ಅದಕ್ಕೆ ಬದಲಾಗಿ ಒಬ್ಬ ಪರೀಕ್ಷಕರನ್ನು ನನ್ನ ಮನೆಗೆ ಕಳುಹಿಸಿಕೊಡುತ್ತಿದ್ದರು.

ಇಂತಹ ಸಂದರ್ಭಗಳಲ್ಲಿ ಮೂರನೆಯ ತರಗತಿಯ ಪ್ರಯಾಣಿಕರನ್ನು ಪರೀಕ್ಷಿಸುವುದು ಆರೋಗ್ಯಸಂರಕ್ಷಣೆಯ ದೃಷ್ಟಿಯಿಂದ ಅಗತ್ಯ

ವಾದುದು. ದೊಡ್ಡಮನುಷ್ಯರು ಇಚ್ಛಾಪೂರ್ವಕವಾಗಿ ಮೂರನೆಯ ದರ್ಜೆಯಲ್ಲಿ ಹೋದರೆ ಬಡವರಿಗೆ ಅನ್ವಯಿಸುವ ನಿಯಮನಿಬಂಧನೆಗಳಿಗೆಲ್ಲಾ ತಾವೂ ಮನಃಪೂರ್ವಕವಾಗಿ ಒಳಗಾಗಬೇಕು, ಮತ್ತು ಅಧಿಕಾರಿಗಳು ಈ ವಿಷಯದಲ್ಲಿ ನಿಷ್ಪಕ್ಷಪಾತವಾಗಿ ನಡೆದುಕೊಳ್ಳಬೇಕು. ನನ್ನ ಅನುಭವವೇನೆಂದರೆ, ಅಧಿಕಾರಿಗಳು ಮೂರನೆಯ ವರ್ಗದ ಪ್ರಯಾಣಿಕರನ್ನು ತಮ್ಮಂತೆಯೇ ಮನುಷ್ಯರೆಂದೆಣಿಸದೆ ಅವರನ್ನು ಅಷ್ಟು ಕುರಿಗಳಂತೆ ಕಾಣುತ್ತಾರೆ, ಅವರೊಡನೆ ತಿರಸ್ಕಾರದಿಂದ ಮಾತನಾಡುತ್ತಾರೆ, ಅವರಿಂದ ಉತ್ತರಗಳಿಗಾಗಲಿ ಕಾರಣಗಳಿಗಾಗಲಿ ಕಿವಿಗೊಡುವುದಿಲ್ಲ. ಮೂರನೆಯ ವರ್ಗದ ಪ್ರಯಾಣಿಕನು ಆಳಿನಂತೆ ಅಧಿಕಾರಿಯ ಅಪ್ಪಣೆಯನ್ನು ನೆರವೇರಿಸಬೇಕು. ಅಧಿಕಾರಿಯು ಅವನನ್ನು ನಿರ್ಭಯವಾಗಿ ಹೊಡೆಯಬಹುದು, ಅವನಿಂದ ಹಣ ಸುಲಿಯಬಹುದು, ಅವನಿಗೆ ಆದಷ್ಟುಮಟ್ಟಿಗೆ ತೊಂದರೆಮಾಡಿದ ಮೇಲೆಯೇ ಅವನಿಗೆ ಟಿಕೆಟನ್ನು ಕೊಡಬಹುದು, ಅನೇಕವೇಳೆ ಅವನಿಗೆ ರೈಲುಗಾಡಿಯನ್ನು ತಪ್ಪಿಸಬಹುದು. ಇವೆಲ್ಲವನ್ನೂ ನಾನು ನನ್ನ ಕಣ್ಣಿನಿಂದಲೇ ನೋಡಿದ್ದೇನೆ. ವಿದ್ಯಾವಂತರಲ್ಲಿ, ಧನಿಕರಲ್ಲಿ, ಕೆಲವರು ಬಡವರ ಮಟ್ಟಲಗಿಳಿದು ಮೂರನೆಯ ದರ್ಜೆಯಲ್ಲಿ ಪ್ರಯಾಣಮಾಡಿ ಬಡವರಿಗೆ ದೊರಕದ ಸೌಕರ್ಯಗಳನ್ನು ನಿರಾಕರಿಸಿ ತೊಲಗಿಸಲಾಗುವ ತೊಂದರೆಗಳಿಗೂ ಅವಿನಯಕ್ಕೂ ಅನ್ಯಾಯಕ್ಕೂ ತಲೆಬಾಗಿಸದೆ ಎಂದಿಗೂ ತಪ್ಪದೆ ಅವುಗಳನ್ನು ನಿರ್ಮೂಲಮಾಡಲು ಹೊಡೆದಾಡುವವರೆಗೂ ಯಾವ ಸುಧಾರಣೆಯೂ ಸಾಧ್ಯವಲ್ಲ.

ನಾನು ಕಾಥ್ಯವಾಡದಲ್ಲಿ ಎಲ್ಲಿ ಹೋದರೂ ವೀರಮ್‌ಗಾಮದ ಸುಂಕದಕಟ್ಟೆಯ ತೊಂದರೆಯ ವಿಚಾರವಾಗಿ ಜನರ ದೂರನ್ನು ಕೇಳಿದೆನು ಆದುದರಿಂದ ನಾನು ಲಾರ್ಡ್ ವಿಲ್ಲಿಂಗ್‌ಡನರ ಸೂಚನೆಯಂತೆ ನಡೆಯಲು ಒಡನೆಯೇ ನಿಶ್ಚಯಿಸಿದೆನು. ಈ ವಿಷಯಕ್ಕೆ ಸಂಬಂಧಪಟ್ಟು ದೊರೆತ ಕಾಗದಪತ್ರಗಳನ್ನೆಲ್ಲಾ ಒಟ್ಟುಗೂಡಿಸಿ ಜನರ ದೂರಿಗೆ ಆಧಾರವಿದೆಯೆಂಬ ಭರವಸೆಯುಂಟಾದಮೇಲೆ ಮುಂಬಯಿ ಸರಕಾರದೊಡನೆ ಪತ್ರವ್ಯವಹಾರ ನಡೆಸಿದೆನು. ಲಾರ್ಡ್ ವಿಲ್ಲಿಂಗ್‌ಡನರ ಆಪ್ತಕಾರ್ಯದರ್ಶಿಗಳನ್ನು ಕಂಡುದಲ್ಲದೆ ಗವರ್ನರರನ್ನೂ ಭೆಟ್ಟಿಮಾಡಿದೆನು. ಅವರು

ಈ ವಿಷಯದಲ್ಲಿ ತಮಗಿದ್ದ ಸಹಾನುಭೂತಿಯನ್ನು ವ್ಯಕ್ತಪಡಿಸಿದರು ಆದರೆ ತಪ್ಪನ್ನು ದೆಹಲಿಯ ಮೇಲೆ ಹೊರೆಸಿದರು "ನಮ್ಮ ಕೈಯಲ್ಲಿದ್ದಿದ್ದರೆ ಸುಂಕದಕಟ್ಟೆಯನ್ನು ಎಂದೋ ತೆಗೆದುಬಿಟ್ಟಿರುತ್ತಿದ್ದೆವು ನೀವು ಇಂಡಿಯಾ ಸರಕಾರದ ಮುಂದೆ ಹೋಗಬೇಕು" ಎಂದು ಕಾರ್ಯದರ್ಶಿಗಳು ಹೇಳಿದರು.

ನಾನು ಇಂಡಿಯಾ ಸರಕಾರಕ್ಕೆ ಕಾಗದ ಬರೆದೆನು. ಆದರೆ ನನ್ನ ಪತ್ರವು ತಲಪಿತೆಂದು ಹೊರತು ಇನ್ನಾವ ಉತ್ತರವೂ ಬರಲಿಲ್ಲ. ನಾನು ಲಾರ್ಡ್ ಚೆಮ್ಸ್‌ಫರ್ಡ (ಆಗಿನ ವೃಸರಾಯರು) ರನ್ನು ನೋಡುವ ಸಂಭವವೊದಗಿದಾಗಲೇ ಈ ತೊಂದರೆಯು ಪರಿಹಾರವಾದುದು. ನಾನು ಇದಕ್ಕೆ ಸಂಬಂಧಪಟ್ಟ ವಿಷಯಗಳನ್ನೆಲ್ಲಾ ಅವರಿಗೆ ತಿಳಿಸಲು ಅವರು ತಮ್ಮ ಆಶ್ಚರ್ಯವನ್ನು ವ್ಯಕ್ತಪಡಿಸಿದರು ಅವರಿಗೆ ವೀರಮ್‌ಗಾಮುದ ವಿಷಯವೇ ತಿಳಿದಿರಲಿಲ್ಲ ಅವರು ನನ್ನ ಹೇಳಿಕೆಯನ್ನು ತಾಳ್ಮೆಯಿಂದ ಕೇಳಿ ವೀರಮ್‌ಗಾಮುಕ್ಕೆ ಸಂಬಂಧಪಟ್ಟ ಕಾಗದಪತ್ರಗಳಿಗೆ ಆಕ್ಷಣವೇ ಟೆಲಿಫೋನಿನ ಮೂಲಕ ಹೇಳಿಕಳುಹಿಸಿ ಅಧಿಕಾರವರ್ಗದವರು ಯಾವ ಸಮಾಧಾನವನ್ನೂ ಹೇಳಲು ಅಸಮರ್ಥರಾದರೆ ಸುಂಕದಕಟ್ಟೆಯನ್ನು ತೆಗೆದುಹಾಕಿಬಿಡುವುದಾಗಿ ಮಾತುಕೊಟ್ಟರು ಈ ಭೆಟ್ಟಿಯಾದ ಕೆಲವು ದಿವಸಗಳೊಳಗಾಗಿ ವೀರಮ್‌ಗಾಮುದ ಸುಂಕದಕಟ್ಟೆಯನ್ನು ತೆಗೆದುಹಾಕಿರುವರೆಂಬ ವರ್ತಮಾನವನ್ನು ನಾನು ವೃತ್ತಪತ್ರಗಳಲ್ಲಿ ಓದಿದೆನು.

ಈ ಘಟನೆಯೇ ಹಿಂದೂಸ್ಥಾನದಲ್ಲಿ ಸತ್ಯಾಗ್ರಹದ ಉದಯವೆಂದು ನಾನು ಎಣಿಸಿದೆನು ಏಕೆಂದರೆ ನಾನು ಮುಂಬಯಿ ಸರಕಾರವನ್ನು ನೋಡುವುದಕ್ಕೆ ಹೋದಾಗ ಕಾರ್ಯದರ್ಶಿಯವರು ನಾನು ಬಗಸರಾ (ಕಾಥ್ಯವಾಡದಲ್ಲಿನ ಒಂದು ಊರು) ದಲ್ಲಿ ಕೊಟ್ಟ ಒಂದು ಭಾಷಣದಲ್ಲಿ ಸತ್ಯಾಗ್ರಹದ ವಿಷಯವಾಗಿ ಮಾತನಾಡಿದುದರ ವರದಿಯನ್ನು ಓದಿ ಹಾಗೆ ಮಾತನಾಡಿದುದು ತಮಗೆ ರುಚಿಸಲಿಲ್ಲವೆಂದು ಹೇಳಿದ್ದರು.

"ಇದೇನು ಬೆದರಿಕೆಯಲ್ಲವೆ? ಪ್ರಬಲವಾದ ಸರಕಾರವು ಬೆದರಿಕೆಗಳಿಗೆ ಬಗ್ಗುವುದೆಂದು ನೀವು ಎಣಿಸಿರುವಿರಾ?" ಎಂದು ನನ್ನನ್ನು ಕೇಳಿದ್ದರು.

"ಇದೇನೂ ಬೆದರಿಕೆಯಲ್ಲ. ಇದು ಪ್ರಜಾಶಿಕ್ಷಣ. ತಮ್ಮ ಸಂಕಟಗಳನ್ನು ದೂರಮಾಡುವುದಕ್ಕೆ ಎಲ್ಲಾ ನ್ಯಾಯವಾದ ಉಪಾಯಗಳನ್ನೂ ಜನರಿಗೆ ತಿಳಿಯಹೇಳುವುದು ನನ್ನಂತಹರ ಧರ್ಮ. ಪ್ರಜಾಸ್ವಾತಂತ್ರ್ಯವನ್ನು ಗಳಿಸಬೇಕೆಂದಿಚ್ಛಿಸುವ ಜನಾಂಗವು ಆ ಸ್ವಾತಂತ್ರ್ಯವನ್ನು ಸಾಧಿಸಲು ಎಲ್ಲಾ ಮಾರ್ಗಗಳನ್ನೂ ಉಪಾಯಗಳನ್ನೂ ಅರಿತಿರಬೇಕು. ಸಾಧಾರಣವಾಗಿ ಈ ಉಪಾಯಗಳಲ್ಲಿ ಪಶುಬಲವೇ ಅಂತಿಮೋಪಾಯವಾಗಿರುತ್ತದೆ. ಸತ್ಯಾಗ್ರಹವಾದರೋ ಶುದ್ಧ ಅಹಿಂಸಾತ್ಮಕವಾದ ಉಪಾಯ. ಅದರ ಉಪಯೋಗವನ್ನೂ ಅದರ ಮೇರೆಗಳನ್ನೂ ಜನರಿಗೆ ವಿಶದಪಡಿಸುವುದು ನನ್ನ ಕರ್ತವ್ಯವೆಂದು ನಾನು ಎಣಿಸುತ್ತೇನೆ. ಬ್ರಿಟಿಷ್ ಸರಕಾರವು ಪ್ರಬಲವಾದ ಸರಕಾರವೆಂಬುದರಲ್ಲಿ ನನಗೇನೂ ಸಂಶಯವಿಲ್ಲ. ಆದರೆ ಸತ್ಯಾಗ್ರಹವು ಸಮಸ್ತ ಸಂಕಟಗಳಿಗೂ ದಿವ್ಯೌಷಧವೆಂಬುದರಲ್ಲಿಯೂ ನನಗೆ ಸಂದೇಹವಿಲ್ಲ." ಎಂದು ಉತ್ತರಕೊಟ್ಟೆನು

ಜಾಣರಾದ ಕಾರ್ಯದರ್ಶಿಗಳು ತಲೆಯಲ್ಲಾಡಿಸಿ ಸಂಶಯವನ್ನು ಸೂಚಿಸುತ್ತಾ 'ನೋಡೋಣ!' ಎಂದರು.



೪

# ಶಾಂತಿನಿಕೇತನ

ನಾನು ರಾಜಕೋಟೆಯಿಂದ ಶಾಂತಿನಿಕೇತನಕ್ಕೆ ತೆರಳಿದೆನು. ಅಲ್ಲಿನ ಶಿಕ್ಷಕರೂ ವಿದ್ಯಾರ್ಥಿಗಳೂ ನನ್ನಮೇಲೆ ವಾತ್ಸಲ್ಯವೃಷ್ಟಿಯನ್ನು ಕರೆದರು. ಆ ಸ್ವಾಗತದಲ್ಲಿ ಸರಳತೆಯೂ ಕಲಾಕೌಶಲ್ಯವೂ ಪ್ರೇಮವೂ ಚೆಂದದಿಂದ ಒಂದುಗೂಡಿದ್ದುವು ಇಲ್ಲಿಯೇ ನಾನು ಮೊಟ್ಟಮೊದಲು ಕಾಕಾ ಸಾಹೇಬ್ ಕಾಳೇಲ್‌ಕರರನ್ನು ಕಂಡುದು.

ಕಾಳೇಲ್‌ಕರರನ್ನು 'ಕಾಕಾಸಾಹೇಬ'ರೆಂದು ಏತಕ್ಕೆ ಕರೆಯುತ್ತಿದ್ದರೋ ಆಗ ನನಗೆ ಗೊತ್ತಿರಲಿಲ್ಲ ಇಂಗ್ಲೆಂಡಿನಲ್ಲಿ ನಾನು ಇದ್ದ ಕಾಲದಲ್ಲಿಯೇ ಕೇಶವರಾವ್ ದೇಶಪಾಂಡೆ ಎಂಬುವರೂ ಅಲ್ಲಿ ಇದ್ದರು. ಇವರಿಗೂ ನನಗೂ ಗಾಢಮೈತ್ರಿಯಿದ್ದಿತು. ಇವರು ಬರೋಡಾ ಸಂಸ್ಥಾನದಲ್ಲಿ 'ಗಂಗಾನಾಥ ವಿದ್ಯಾಲಯ'ವನ್ನು ನಡೆಸುತ್ತಿದ್ದಾಗ ಅಲ್ಲಿ ಮನೆಯ ವಾತಾವರಣವನ್ನು ಕಲ್ಪಿಸಲೋಸುಗ ಶಿಕ್ಷಕರಿಗೆ ನೆಂಟತನದ ಹೆಸರುಗಳನ್ನು ಕೊಟ್ಟಿದ್ದರೆಂದು ನನಗೆ ಆಮೇಲೆ ತಿಳಿಯುಬಂದಿತು. ಅಲ್ಲಿಯೇ ಶಿಕ್ಷಕರಾಗಿದ್ದ ಶ್ರೀ ಕಾಳೇಲ್‌ಕರರಿಗೆ 'ಕಾಕಾ' (ಚಿಕ್ಕಪ್ಪ), ಫಾಡ್ಕೆಯವರಿಗೆ 'ಮಾಮಾ' (ಸೋದರಮಾವ), ಮತ್ತು ಹರಿಹರಶರ್ಮರಿಗೆ 'ಅಣ್ಣಾ' ಎಂಬ ಹೆಸರುಗಳು ರೂಢಿಗೆ ಬಂದುವು. ಇತರರೂ ಇದೇ ತೆರನಾದ ಹೆಸರುಗಳನ್ನು ಪಡೆದರು ಆನಂದಾನಂದರು (ಸ್ವಾಮೀ) ಕಾಕಾರವರ ಮಿತ್ರರಾಗಿಯೂ ಪಟವರ್ಧನರು (ಅಪ್ಪಾ) ಮಾಮಾರವರ ಸ್ನೇಹಿತರಾಗಿಯೂ ತದನಂತರ ಈ ಕುಟುಂಬವನ್ನು ಸೇರಿದರು. ಇವರೆಲ್ಲರೂ ಕಾಲಕ್ರಮೇಣ ಒಬ್ಬರಬಳಿಕೊಬ್ಬರು ನನ್ನ ಜೊತೆಯ ಕೆಲಸಗಾರರಾದರು. ಶ್ರೀ. ದೇಶಪಾಂಡೆಯವರನ್ನು 'ಸಾಹೇಬ್' ಎಂದು ಕರೆಯುತ್ತಿದ್ದರು. ವಿದ್ಯಾಲಯವನ್ನು ಮುಚ್ಚಬೇಕಾಗಿ ಬಂದಾಗ ಈ

ಕುಟುಂಬವೂ ಬದರಿತು ಆದರೆ ಇವರುಗಳು ತಮ್ಮ ಆಧ್ಯಾತ್ಮಿಕ ಸಂಬಂಧವನ್ನಾಗಲಿ ತಮ್ಮರೂಢಿಯ ಹೆಸರುಗಳನ್ನಾಗಲಿ ಬಿಟ್ಟುಬಿಡಲಿಲ್ಲ

ಕಾಕಾಸಾಹೇಬರು ಬೇರೆಬೇರೆ ಸಂಸ್ಥೆಗಳ ಅನುಭವವನ್ನು ಪಡೆಯುವುದಕ್ಕಾಗಿ ಹೊರಟರು ನಾನು ಶಾಂತಿನಿಕೇತನಕ್ಕೆ ಹೋದಾಗ ಅವರು ಅಲ್ಲಿ ಇದ್ದರು. ಅದೇ ಭ್ರಾತೃವರ್ಗಕ್ಕೆ ಸೇರಿದ ಚಿಂತಾಮಣಿ ಶಾಸ್ತ್ರಿಗಳೂ ಅಲ್ಲಿದ್ದರು ಇಬ್ಬರೂ ಅಲ್ಲಿ ಸಂಸ್ಕೃತ ಶಿಕ್ಷಣವನ್ನು ನಡೆಸುತ್ತಿದ್ದರು. ಶಾಂತಿನಿಕೇತನದಲ್ಲಿ ಫೀನಿಕ್ಸ್‌ಕುಟುಂಬಕ್ಕೆ ಇಳಿದುಕೊಳ್ಳಲು ಪ್ರತ್ಯೇಕ ಸ್ಥಳವನ್ನು ಕೊಟ್ಟಿದ್ದರು ಮಗನಲಾಲ ಗಾಂಧಿಯವರು ಈ ಕುಟುಂಬದ ಮುಖ್ಯಸ್ಥರಾಗಿದ್ದರು ಫೀನಿಕ್ಸ್ ಆಶ್ರಮದ ಸಕಲ ನಿಯಮಗಳನ್ನು ಸ್ವಲ್ಪವೂ ತಪ್ಪದೆ ಇಲ್ಲಿಯೂ ನಡೆಸುವಂತೆ ಅವರು ನೋಡಿಕೊಂಡಿದ್ದರು ಅವರು ತಮ್ಮ ಪ್ರೇಮ, ಜ್ಞಾನ, ತಾಳ್ಮೆ, ಶ್ರದ್ಧೆಗಳಿಂದ ತಮ್ಮ ನಿಜಸೌರಭವನ್ನು ಶಾಂತಿನಿಕೇತನದಲ್ಲೆಲ್ಲಾ ಬೀರಿದ್ದರೆಂಬುದನ್ನು ನಾನು ಕಂಡೆನು.

ಆಂಡ್ರೂಸರು ಅಲ್ಲಿದ್ದರು ಅಂತೆಯೇ ಪಿಯರ್ಸನರೂ ನಮಗೆ ತಕ್ಕಮಟ್ಟಿಗೆ ಗಾಢವಾದ ಪರಿಚಯವುಂಟಾದ ವಂಗಶಿಕ್ಷಕರಲ್ಲಿ ಜಗದಾನಂದಬಾಬು, ನೇಪಾಲಬಾಬು, ಸಂತೋಷಬಾಬು, ಕ್ಷಿತಿಮೋಹನಬಾಬು ನಾಗಿನಬಾಬು, ಶಾರದಬಾಬು ಮತ್ತು ಕಲಿಬಾಬುಗಳೂ ಇದ್ದರು

ನನ್ನ ಪದ್ಧತಿಯ ಪ್ರಕಾರ ನಾನು ಒಡನೆಯೇ ಶಿಕ್ಷಕರೊಡನೆಯೂ ಹುಡುಗರೊಡನೆಯೂ ಕಲೆತು ಸ್ವಾವಲಂಬನೆಯ ವಿಚಾರವಾಗಿ ಚರ್ಚಿಸಿದೆನು ಶಿಕ್ಷಕರೂ ಹುಡುಗರೂ ಸಂಬಳದ ಅಡಿಗೆಯವನನ್ನು ಬಿಟ್ಟು ತಮ್ಮ ಆಹಾರವನ್ನು ತಾವೇ ಸಿದ್ಧಪಡಿಸಿಕೊಳ್ಳುವುದಾದರೆ ಹುಡುಗರ ದೇಹಾರೋಗ್ಯದೃಷ್ಟಿಯಿಂದಲೂ ಆಧ್ಯಾತ್ಮಿಕದೃಷ್ಟಿಯಿಂದಲೂ ಆಹಾರನಿಯಮವನ್ನು ಸಾಧಿಸುವುದು ಶಿಕ್ಷಕರಿಗೆ ಶಕ್ಯವಾಗುವುದೆಂದೂ ಹುಡುಗರಿಗೆ ಇದು ಸ್ವಾವಲಂಬನೆಯ ವಸ್ತುಪಾಠವಾಗುವುದೆಂದೂ ನಾನು ಶಿಕ್ಷಕರಿಗೆ ಹೇಳಿದೆನು ಅವರಲ್ಲಿ ಕೆಲವರು ಈ ಸೂಚನೆಗೆ ತಮ್ಮ ಒಪ್ಪಿಗೆಯನ್ನು ಕೊಟ್ಟರು. ಹುಡುಗರು ಇನ್ನೇತಕ್ಕಲ್ಲ

ದಿದ್ದರೂ ಹೊಸ ಅನುಭವದಲ್ಲಿ ತಮಗೆ ಸ್ವಾಭಾವಿಕವಾಗಿರುವ ಕುತೂಹಲದಿಂದಲಾದರೂ ಈ ಸೂಚನೆಯನ್ನು ಆದರದಿಂದ ಸ್ವೀಕರಿಸಿದರು. ಹೀಗೆ ನಾವು ಪಾಕಪ್ರಯೋಗವನ್ನು ಆರಂಭಿಸಿದೆವು. ನಾನು ಕವಿಗಳ (ರವೀಂದ್ರನಾಥರ) ಅಭಿಪ್ರಾಯವನ್ನು ಕೇಳಿದಾಗ ಅವರು "ಶಿಕ್ಷಕರು ಒಪ್ಪುವುದೇ ಆದರೆ ನನ್ನ ಅಭ್ಯಂತರವೇನೂ ಇಲ್ಲ" ಎಂದು ಹೇಳಿದರು. ಹುಡುಗರಿಗೆ "ಸ್ವರಾಜ್ಯಸಾಧನೆಯ ಬೀಜವು ಈ ಪ್ರಯತ್ನದಲ್ಲಿಯೇ ಇದೆ" ಎಂದರವರು.

ಪಿಯರ್ಸನರು ಈ ಸಮಾರಂಭದ ವಿಜಯಕ್ಕಾಗಿ ತಮ್ಮ ದೇಹವನ್ನು ಸವೆಸತೊಡಗಿದರು. ಕಾಯಾ ವಾಚಾ ಮನಸಾ ಇದರಲ್ಲಿ ಆಸಕ್ತರಾದರು. ತರಕಾರಿಯನ್ನು ಹೆಚ್ಚುವುದಕ್ಕೊಂದು ಪಂಗಡ, ಕಾಳನ್ನು ತೊಳೆಯುವುದಕ್ಕೆ ಇನ್ನೊಂದು, ಇದೇ ರೀತಿಯಾಗಿ ಪಂಗಡಗಳು ಸೇರಿದುವು. ನಾಗಿನಬಾಬುವೂ ಇತರರೂ ಅಡಿಗೆಯ ಮನೆಯನ್ನೂ ಅದರ ಸುತ್ತಮುತ್ತಲಿನ ಸ್ಥಳವನ್ನೂ ಶುಚಿಯಾಗಿಟ್ಟಿರುವ ಭಾರವನ್ನು ಹೊತ್ತುಕೊಂಡರು. ಇವರುಗಳು ಕೈ ಮಣ್ಣು ಮಾಡಿಕೊಂಡು ಕೆಲಸಮಾಡುವುದನ್ನು ನೋಡಿ ನನಗೆ ಸಂತೋಷವಾಯಿತು

ಆದರೆ ನೂರಿಪ್ಪತ್ತೈದು ಜನ ಹುಡುಗರಿಗೂ ಅವರ ಶಿಕ್ಷಕರಿಗೂ ಈ ದೇಹಶ್ರಮಪೂರ್ಣವಾದ ಕೆಲಸವು ವಿಾನುಗಳಿಗೆ ನೀರು ಒಂಟು ವಂತೆ ಒಂಟುವುದೆಂದು ನಿರೀಕ್ಷಿಸಲಾಗುವುದೆ? ಈ ವಿಷಯವಾಗಿ ಪ್ರತಿನಿತ್ಯವೂ ಚರ್ಚೆಯಾಗುತ್ತಿದ್ದಿತು ಕೆಲವರು ಜಾಗ್ರತೆಯಾಗಿಯೇ ಆಯಾಸದ ಕುರುಹುಗಳನ್ನು ತೋರಿಸತೊಡಗಿದರು. ಆದರ ಪಿಯರ್ಸನರು ಬೇಸರಪಡುವ ಮನುಷ್ಯರಾಗಿರಲಿಲ್ಲ. ಯಾವಾಗ ನೋಡಿದರೂ ಅವರು ನಗುಮೊಗದಿಂದ ಪಾಕಶಾಲೆಯ ಆವರಣದಲ್ಲಿ ಏನಾದರೊಂದು ಕೆಲಸವನ್ನು ಮಾಡುತ್ತಾ ಇರುತ್ತಿದ್ದರು. ದೊಡ್ಡದೊಡ್ಡ ಪಾತ್ರೆಗಳನ್ನು ತೊಳೆಯುವ ಭಾರವನ್ನು ಅವರು ಹೊತ್ತುಕೊಂಡಿದ್ದರು ಈ ಕೆಲಸ ಮಾಡುತ್ತಿರುವ ಪಂಗಡದ ಬೇಸರವನ್ನು ಕಳೆಯಲು ಹುಡುಗರ ಮತ್ತೊಂದು ಪಂಗಡವು ಅವರ ಮುಂದೆ ಸಿತಾರವನ್ನು ಬಾರಿಸುತ್ತಿದ್ದಿತು.

ಎಲ್ಲರೂ ಒಂದೇ ಸಮನಾಗಿ ಉತ್ಸಾಹದಿಂದಲೂ ಶ್ರದ್ಧೆಯಿಂದಲೂ ಕೆಲಸ ಮಾಡತೊಡಗಿದರು. ಶಾಂತಿನಿಕೇತನವು ಕಾರ್ಯಶೀಲತೆಯಿಂದ ಜೇನು ಗೂಡಿನಂತೆ ಝೇಂಕರಿಸಿತು.

ಈ ರೀತಿಯ ಬದಲಾವಣೆಗಳು ಪ್ರಾರಂಭವಾಗುವುದೇ ತಡ, ಬೆಳ ಯುತ್ತಾ ಹೋಗುತ್ತವೆ. ಫೀನಿಕ್ಸ್ ಪಂಗಡದವರು ಅಡಿಗೆಯಮನೆಯ ಕೆಲ ಸವನ್ನೆಲ್ಲಾ ತಾವೇ ಮಾಡುತ್ತಿದ್ದರಲ್ಲದೆ ಅಡಿಗೆಯೂ ಕೇವಲ ಸಾಧಾರಣ ವಾಗಿರುತ್ತಿದ್ದಿತು ಮಸಾಲೆ ಪದಾರ್ಥವನ್ನು ಉಪಯೋಗಿಸುತ್ತಿರಲಿಲ್ಲ, ಅಕ್ಕಿ, ಬೇಳೆ, ಕಾಯಿಪಲ್ಯ—ಗೋದಿಯ ಹಿಟ್ಟನ್ನು ಕೂಡ—ಒಟ್ಟಿಗೇ ಆವಿ ಯಲ್ಲಿ ಬೇಯಿಸುತಿದ್ದರು ಶಾಂತಿನಿಕೇತನದ ಹುಡುಗರೂ ವಂಗ ಪಾಕ ಶಾಲೆಯಲ್ಲಿ ಇದೇ ಸುಧಾರಣೆಯನ್ನು ಆರಂಭಿಸುವ ಉದ್ದೇಶದಿಂದ ಹೊಸ ಅಡಿಗೆಯಮನೆಯನ್ನು ಹೂಡಿದರು ಒಬ್ಬರಿಬ್ಬರು ಶಿಕ್ಷಕರೂ ಕೆಲವರು ವಿದ್ಯಾರ್ಥಿಗಳೂ ಇದನ್ನು ನಡಸುತ್ತಿದ್ದರು

ಆದರ ಕಲವು ಕಾಲವಾದಮೇಲೆ ಈ ನೂತನ ಪದ್ಧತಿಯನ್ನು ನಿಲ್ಲಿಸಿ ದರು. ಸ್ವಲ್ಪಕಾಲ ಈ ಪಾಕಪ್ರಯೋಗವನ್ನು ನಡಸಿದುದರಿಂದ ಆ ಪ್ರಸಿದ್ಧ ಸಂಸ್ಥೆಗೆ ಯಾವ ನಷ್ಟವೂ ಉಂಟಾಗಲಿಲ್ಲವೆಂದು ನನ್ನ ಅಭಿ ಪ್ರಾಯ ಇದರಿಂದುಂಟಾದ ಅನುಭವವು ಉಪಾಧ್ಯಾಯರಿಗೆ ಲಾಭ ದಾಯಕವಾಗಿದ್ದೇ ಇದ್ದಿರಬೇಕು

ನಾನು ಶಾಂತಿನಿಕೇತನದಲ್ಲಿ ಕೆಲವು ದಿವಸ ಇರಬೇಕೆಂದಿದ್ದೆನು. ಆದರ ದೈವಸಂಕಲ್ಪವು ಬೇರೆಯಾಗಿದ್ದಿತು. ನಾನು ಅಲ್ಲಿಗೆ ಒಂದು ಒಂದು ವಾರವಾಗುವುದಕ್ಕಿಲ್ಲ, ಅಷ್ಟರಲ್ಲಿಯೇ ಗೋಖಲೆಯವರ ಮರಣದ ವಿಷ ಯವಾಗಿ ನನಗೆ ಪೂನಾದಿಂದ ತಾರು ಬಂದಿತು. ಶಾಂತಿನಿಕೇತನವು ಶೋಕದಲ್ಲಿ ಮುಳುಗಿತು. ಅಲ್ಲಿದ್ದವರೆಲ್ಲರೂ ಸಮಾಧಾನ ಹೇಳಲು ನನ್ನ ಬಳಿಗೆ ಬಂದರು. ದೇಶಕ್ಕೆ ಉಂಟಾದ ನಷ್ಟವನ್ನು ಕುರಿತು ದುಃಖ ವನ್ನು ಸೂಚಿಸಲು ಆಶ್ರಮದ ದೇವಾಲಯದಲ್ಲಿ ಸಭೆ ಸೇರಿತು. ಸಭಾ ಕಾರ್ಯವು ಗಂಭೀರವಾಗಿ ನೆರವೇರಿತು. ಅದೇ ದಿನವೇ ನಾನು ನನ್ನ ಹೆಂಡತಿಯೊಡನೆಯೂ ಮಗನಲಾಲರೊಡನೆಯೂ ಪೂನಾಕ್ಕೆ ಹೊರ ಟೆನು. ಉಳಿದವರೆಲ್ಲರೂ ಶಾಂತಿನಿಕೇತನದಲ್ಲಿ ನಿಂತರು.

ಆಂಡ್ರೂಸರು ನನ್ನೊಡನೆ ವರ್ಧಮಾನ (ಬರ್ದವಾನ್)ದ ವರೆಗೂ ಬಂದರು. "ಭಾರತದೇಶದಲ್ಲಿ ಸತ್ಯಾಗ್ರಹವನ್ನು ನಡೆಸುವ ಕಾಲ ಬರುತ್ತದೆಯೆ? ಬರುವುದಾದರೆ ಯಾವಾಗ ಎಂಬುದು ನಿಮಗೆ ಗೊತ್ತಿದೆಯೆ?" ಎಂದು ಅವರು ನನ್ನನ್ನು ಕೇಳಿದರು.

"ಏನು ಹೇಳುವುದೂ ಕಷ್ಟ. ಒಂದು ವರ್ಷದವರೆಗೆ ನಾನು ಏನನ್ನೂ ಮಾಡಕೂಡದು. ಏಕೆಂದರೆ ಅನುಭವ ಸಂಪಾದಿಸಲೋಸುಗ ನಾನು ಈ ದೇಶದಲ್ಲಿ ಸಂಚರಿಸಬೇಕೆಂದೂ ಈ ಕಾಲದಲ್ಲಿ ನಾನು ಸಾರ್ವಜನಿಕ ವಿಚಾರಗಳನ್ನು ಕುರಿತು ನನ್ನ ಅಭಿಪ್ರಾಯಗಳನ್ನು ವ್ಯಕ್ತಪಡಿಸಕೂಡದೆಂದೂ ಗೋಖಲೆಯವರು ಕೇಳಿದಪ್ರಕಾರ ನಾನು ಅವರಿಗೆ ಮಾತು ಕೊಟ್ಟಿದ್ದೇನೆ ಈ ವರ್ಷ ಕಳೆದಮೇಲೆ ಕೂಡ ಮಾತನಾಡುವುದಕ್ಕೂ ನನ್ನ ಅಭಿಪ್ರಾಯಗಳನ್ನು ಪ್ರಕಟಿಸುವುದಕ್ಕೂ ನಾನೇನೂ ಅವಸರಪಡುವುದಿಲ್ಲ. ಆದುದರಿಂದ ಇನ್ನು ಐದಾರು ವರ್ಷ ಸತ್ಯಾಗ್ರಹ ನಡೆಸುವ ಸಂದರ್ಭವೊದಗುವುದಿಲ್ಲವೆಂದು ಎನ್ನ ಎಣಿಕೆ" ಎಂದು ನಾನು ಉತ್ತರ ಕೊಟ್ಟೆನು

'ಹಿಂದ್ ಸ್ವರಾಜ್' ಎಂಬ ಪುಸ್ತಕದಲ್ಲಿ ಕಂಡುಬರುವ ನನ್ನ ಕೆಲವು ಅಭಿಪ್ರಾಯಗಳನ್ನು ನೋಡಿ ನಕ್ಕು ಗೋಖಲೆಯವರು "ನೀವು ಹಿಂದೂಸ್ಥಾನದಲ್ಲಿ ಒಂದು ವರ್ಷವಿದ್ದಮೇಲೆ ನಿಮ್ಮ ಅಭಿಪ್ರಾಯಗಳು ತಮ್ಮಷ್ಟಕ್ಕೆ ತಾವೇ ಸರಿಹೋಗುತ್ತವೆ" ಎಂದು ಹೇಳುತ್ತಿದ್ದರೆಂಬುದನ್ನು ಈ ಸಂದರ್ಭದಲ್ಲಿ ತಿಳಿಸಬಹುದು

೫

# ಮೂರನೆಯ ದರ್ಜೆಯ ಪ್ರಯಾಣಿಕರ ಸಂಕಟಗಳು

ಟಿಕೆಟನ್ನು ಕೊಂಡುಕೊಳ್ಳುವುದಗಲ್ಲಿ ಕೂಡ ಮೂರನೆಯ ತರಗತಿಯ ಪ್ರಯಾಣಿಕರಿಗೆ ಆಗುವ ತೊಂದರೆಯನ್ನು ನಾವು ವರ್ಧಮಾನ (ಬರ್ದವಾನ)ದಲ್ಲಿ ಸ್ವತಃ ಅನುಭವಿಸಿದೆವು "ಮೂರನೆಯ ತರಗತಿಯ ಟಿಕೆಟನ್ನು ಇಷ್ಟು ಜಾಗ್ರತೆ ಕೊಡುವುದಿಲ್ಲ" ಎಂದರು ನಮಗೆ ನಾನು ಸ್ಟೇಷನ್‌ಮಾಸ್ಟರ ಬಳಿಗೆ ಹೋದೆನು ಇದು ಕೂಡ ಕಷ್ಟದ ಕೆಲಸವಾಗಿದ್ದಿತು. ಯಾರೋ ಒಬ್ಬರು ಕೃಪೆಯಿಟ್ಟು ಅವರಿದ್ದ ಸ್ಥಳವನ್ನು ನಮಗೆ ತೋರಿಸಿದರು. ನಾನು ಅವರ ಬಳಿಗೆ ಹೋಗಿ ನಮ್ಮ ಕಷ್ಟವನ್ನು ಹೇಳಿಕೊಳ್ಳಲು ಅವರೂ ಅದೇ ಉತ್ತರವನ್ನು ಕೊಟ್ಟರು ಟಿಕೆಟನ್ನು ಕೊಡುವ ಕಿಟಕಿಯ ಬಾಗಿಲು ತೆಗೆದೊಡನೆಯೇ ನಾನು ಟಿಕೆಟನ್ನು ಕೊಳ್ಳಲು ಹೋದೆನು. ಆದರೆ ಅವುಗಳನ್ನು ತೆಗೆದುಕೊಳ್ಳುವುದೇನೂ ಸುಲಭದ ಮಾತಾಗಿರಲಿಲ್ಲ. ಅಲ್ಲಿ ಪಶುಬಲದ ಮುಂದೆ ಯಾವುದೂ ಇರಲಿಲ್ಲ. ಇತರರನ್ನು ಲಕ್ಷಿಸದೆ ಒಬ್ಬರಮುಂದೊಬ್ಬರು ನುಗ್ಗುತ್ತಿದ್ದ ಜನರು ನನ್ನನ್ನು ಹಿಂದಕ್ಕೆ ತಳ್ಳುತ್ತಾ ಬಂದರು. ಆದುದರಿಂದ ಮೊದಲು ಸೇರಿದ ಗುಂಪಿನಲ್ಲಿ ಟಿಕೆಟನ್ನು ತೆಗೆದುಕೊಳ್ಳಲು ಹೆಚ್ಚುಕಡಿಮೆ ನಾನೇ ಕಡೆಯವನಾಗಿದ್ದೆನು.

ಗಾಡಿ ಒಂದಿತು ಅದರೊಳಕ್ಕೆ ಹೋಗುವುದು ಇನ್ನೊಂದು ಗಂಡಾಂತರವಾಗಿದ್ದಿತು ಗಾಡಿಯೊಳಗಿದ್ದ ಜನರಿಗೂ ಒಳಕ್ಕೆ ಹೋಗಲು ಯತ್ನಿಸುತ್ತಿದ್ದ ಮಂದಿಗೂ ಮಧ್ಯೆ ತಡೆಯಿಲ್ಲದ ಬೈದಾಟವೂ ನೂಕಾಟವೂ ನಡೆಯುತ್ತಿದ್ದಿತು. ನಾವು ನಿಲ್ದಾಣದಲ್ಲಿ ಅಲ್ಲಿಂದಿಲ್ಲಿಗೆ ಓಡಾಡಿದೆವು. ಆದರೆ ಯಾವ ಗಾಡಿಯಲ್ಲೂ 'ಇಲ್ಲಿ ಜಾಗವಿಲ್ಲ' ಎಂಬ ಉತ್ತರವೇ. ನಾನು ಗಾರ್ಡಿನ ಬಳಿಗೆ ಹೋದೆನು ಆತನು "ಎಲ್ಲಿ ಆಗುತ್ತದೆಯೋ ಅಲ್ಲಿ ಹೋಗಿ

ಕುಳಿತುಕೊಳ್ಳಬೇಕು. ಇಲ್ಲದಿದ್ದರೆ ಮುಂದಿನ ಗಾಡಿಯಲ್ಲಿ ಬರಬೇಕು.'' ಎಂದು ಹೇಳಿದನು.

''ಆದರೆ ನನಗೆ ತ್ವರಿತದ ಕೆಲಸವಿದೆ '' ಎಂದು ನಾನು ನಮ್ರತೆಯಿಂದ ಹೇಳಿದೆನು. ಇದನ್ನು ಕೇಳಲು ಆತನಿಗೆ ಹೊತ್ತಿರಲಿಲ್ಲ. ನನಗೆ ದಿಕ್ಕುತೋಚದಂತಾಯಿತು. ಸಾಧ್ಯವಾದಕಡೆ ಹೋಗಿ ಕುಳಿತುಕೊಳ್ಳಬೇಕೆಂದು ಮಗನಲಾಲರಿಗೆ ಹೇಳಿ ನಾನು ನನ್ನ ಹೆಂಡತಿಯೊಡನೆ ಮಧ್ಯಮ ದರ್ಜೆಯ (ಇಂಟರ್‌ಕ್ಲಾಸ್) ಗಾಡಿಯೊಂದರಲ್ಲಿ ಕುಳಿತೆನು. ನಾವು ಕುಳಿತುಕೊಂಡುದನ್ನು ಗಾರ್ಡ್ ನೋಡಿದನು. ಆಸನ್‌ಸೋಲ್ ನಿಲ್ದಾಣದಲ್ಲಿ ಆತನು ನಮ್ಮಿಂದ ಹೆಚ್ಚು ಬಾಡಿಗೆಯನ್ನು ತೆಗೆದುಕೊಳ್ಳಲು ಬಂದನು. ಆತನಿಗೆ ನಾನು

''ನಮಗೆ ಜಾಗವನ್ನು ಒದಗಿಸಿಕೊಡುವುದು ನಿಮ್ಮ ಕರ್ತವ್ಯವಾಗಿದ್ದಿತು. ನಮಗೆ ಸ್ಥಳ ಸಿಕ್ಕದುದರಿಂದ ನಾವು ಇಲ್ಲಿ ಕುಳಿತುಕೊಂಡಿದ್ದೇವೆ. ನೀವು ಮೂರನೆಯ ದರ್ಜೆಯ ಗಾಡಿಯಲ್ಲಿ ಸ್ಥಳಕೊಟ್ಟರೆ ನಮಗೆ ಅಲ್ಲಿಗೆ ಹೋಗಲು ಸಂತೋಷವೆ.'' ಎಂದೆನು.

''ನನ್ನೊಡನೆ ಚರ್ಚಿಸಬೇಡಿ. ನಾನು ನಿಮಗೆ ಜಾಗವನ್ನು ಕೊಡಲಾರೆನು. ಹೆಚ್ಚಿನ ಬಾಡಿಗೆಯನ್ನು ಕೊಡಿ, ಇಲ್ಲದಿದ್ದರೆ ಇಳಿದು ಹೋಗಿ.'' ಎಂದು ಆತನು ಹೇಳಿದನು.

ನಾನು ಹೇಗಾದರೂ ಮಾಡಿ ಪೂನಾವನ್ನು ಸೇರಬೇಕಾಗಿದ್ದಿತು. ಆದುದರಿಂದ ನಾನು ಅಲ್ಲಿ ಗಾರ್ಡನೊಡನೆ ಹೊಡೆದಾಡಲು ಸಿದ್ಧನಾಗಿರಲಿಲ್ಲ. ಆತನು ಕೇಳಿದಂತೆ ಪೂನಾದವರೆಗೂ ಹೆಚ್ಚಿನ ಬಾಡಿಗೆಯನ್ನು ಕೊಟ್ಟೆನು. ಆದರೆ ಈ ಅನ್ಯಾಯವು ನನಗೆ ಸರಿಬೀಳಲಿಲ್ಲ.

ಬೆಳಿಗ್ಗೆ ನಾವು ಮೊಗಲಸರಾಯನ್ನು ಸೇರಿದೆವು. ಮಗನಲಾಲರು ಮೂರನೆಯ ತರಗತಿಯಲ್ಲಿ ಸ್ಥಳವನ್ನು ಸಂಪಾದಿಸಿದ್ದರು. ನಾವು ಈಗ ಆಗಾಡಿಗೆ ಹೋದೆವು. ಅಲ್ಲಿ ನಾನು ಟಿಕೆಟ್ ಪರೀಕ್ಷಕರಿಗೆ ಎಲ್ಲಾ ವಿಷಯಗಳನ್ನೂ ತಿಳಿಸಿ ನಾನು ಮೊಗಲಸರಾಯಿಯಲ್ಲಿ ಮೂರನೆಯ ತರ

ಗತಿಗೆ ಬದಲಾಯಿಸಿದುದಕ್ಕೆ ಸಾಕ್ಷೀಪತ್ರವನ್ನು ಬರೆದುಕೊಡಿರೆಂದು ಕೇಳಿದೆನು. ಇದಕ್ಕೆ ಆತನು ಒಪ್ಪಲಿಲ್ಲ ನಾನು ರೈಲ್ವೆ ಅಧಿಕಾರಿಗಳಿಗೆ ಈ ವಿಷಯವಾಗಿ ಬರೆಯಲು ಅವರಿಂದ "ಸಾಕ್ಷಿಪತ್ರವಿಲ್ಲದೆ ಹೆಚ್ಚಿನ ಬಾಡಿಗೆಯನ್ನು ಹಿಂದಕ್ಕೆ ಕೊಡುವ ಪದ್ಧತಿಯು ನಮ್ಮಲ್ಲಿಲ್ಲ. ನಿಮ್ಮ ವಿಷಯದಲ್ಲಿ ಮಟ್ಟಿಗೆ ಈ ಪದ್ಧತಿಯನ್ನು ಬಿಟ್ಟು ನಡೆಯುತ್ತೇವೆ. ಆದರೆ ವರ್ಧಮಾನದಿಂದ ಮೊಗಲಸರಾಯಿಯವರೆಗಿನ ಹೆಚ್ಚು ಬಾಡಿಗೆಯನ್ನು ಹಿಂದಕ್ಕೆ ಕೊಡಲಾಗುವುದಿಲ್ಲ." ಎಂದು ಉತ್ತರ ಬಂದಿತು.

ಇದಾದಮೇಲೆ ನನಗೆ ಮೂರನೆಯ ದರ್ಜೆಯ ಪಯಣದ ಅನುಭವಗಳೆಷ್ಟೋ ಆಗಿವೆ. ಅವುಗಳನ್ನೆಲ್ಲಾ ಉಲ್ಲೇಖಿಸಹೊರಟರೆ ಅದೇ ಒಂದು ಗ್ರಂಥವಾಗುವುದು ಈ ಪ್ರಕರಣಗಳಲ್ಲಿ ಅವುಗಳ ವಿಚಾರವಾಗಿ ಸಂದರ್ಭವೊದಗಿದಾಗ ಅಷ್ಟು ಇಷ್ಟು ಮಾತ್ರ ಬರೆಯುವುದು ಸಾಧ್ಯ. ನನ್ನ ಶಾರೀರಿಕ ದೌರ್ಬಲ್ಯದಿಂದ ನಾನು ಮೂರನೆಯ ತರಗತಿಯಲ್ಲಿ ಪ್ರಯಾಣಮಾಡುವುದು ಅಸಾಧ್ಯವಾಗಿರುವುದು ನನಗೆ ಅತ್ಯಂತ ವಿಷಾದಕ್ಕೆ ಕಾರಣವಾಗಿದೆ, ಸದಾ ಕಾರಣವಾಗಿಯೇ ಇರುತ್ತದೆ

ಮೂರನೆಯ ತರಗತಿಯ ಪ್ರಯಾಣಿಕರ ಸಂಕಟಗಳಿಗೆ ರೈಲ್ವೆ ಅಧಿಕಾರಿಗಳ ನಿರಂಕುಶವರ್ತನೆಯೇ ಕಾರಣವೆಂಬುದರಲ್ಲಿ ಸಂದೇಹವಿಲ್ಲ. ಆದರೆ ಪ್ರಯಾಣಿಕರ ಒರಟುತನವೂ ಕೊಳಕಿನ ಪದ್ಧತಿಗಳೂ ಸ್ವಾರ್ಥಪರತೆಯೂ ಅಜ್ಞಾನವೂ ಕಡಮೆಯಾದ ಕಾರಣಗಳೇನೂ ಅಲ್ಲ ಇದರಲ್ಲಿ ಖೇದಕ್ಕೆ ಕಾರಣವೇನೆಂದರೆ ತಾವು ಔದ್ಧತ್ಯದಿಂದಲೂ ಸ್ವಾರ್ಥಪರತೆಯಿಂದಲೂ ವರ್ತಿಸುತ್ತಿರುವರೆಂಬುದೂ ತಮ್ಮ ಪದ್ಧತಿಗಳು ಕೊಳಕಾಗಿರುವುವೆಂಬುದೂ ಅವರಿಗೇ ಗೊತ್ತಿರುವುದಿಲ್ಲ. ತಾವು ಮಾಡುವುದೆಲ್ಲಾ ಸ್ವಾಭಾವಿಕವೇ ಎಂದು ಅವರಿಗೆ ತೋರುತ್ತದೆ. ಇದೆಲ್ಲಕ್ಕೂ ಮೂಲ ಕಾರಣವು 'ಸುಶಿಕ್ಷಿತ'ರೆನಿಸಿಕೊಳ್ಳುವ ನಾವು ಅವರಲ್ಲಿ ತೋರಿಸುವ ಔದಾಸೀನ್ಯವೇ.

ನಾವು ಕಲ್ಯಾಣವನ್ನು ತಲಪಿದಾಗ ಬಳಲಿ ಬೇಸತ್ತಿದ್ದೆವು. ನಿಲ್ದಾಣದ ನಳ (ನಲ್ಲಿ) ದಿಂದ ನೀರನ್ನು ತೆಗೆದುಕೊಂಡು ಮಗನಲಾಲರೂ

ನಾನೂ ಸ್ನಾನಮಾಡಿದೆವು ನನ್ನ ಹೆಂಡತಿಯು ಸ್ನಾನಕ್ಕೆ ಏರ್ಪಡಿಸಲು ಹೋಗುತ್ತಿದ್ದಾಗ ಭಾರತಸೇವಾಸಂಘದ ಶ್ರೀ ಕೌಲರು ನಮ್ಮನ್ನು ಗುರುತುಹಿಡಿದು ನಮ್ಮ ಬಳಿಗೆ ಬಂದರು ಅವರೂ ಪೂನಾಕ್ಕೆ ಹೋಗುತ್ತಿದ್ದರು. ಅವರು ನನ್ನ ಹೆಂಡತಿಯನ್ನು ಎರಡನೆಯ ತರಗತಿಯ ಸ್ನಾನದ ಕೋಣೆಗೆ ಕರೆದುಕೊಂಡುಹೋಗಿ ಬಿಡುವನೆಂದು ಹೇಳಿದರು ಅವರು ಆದರಪೂರ್ವಕವಾಗಿ ಮಾಡಲೆಳಸಿದ ಈ ಸಹಾಯವನ್ನು ಸ್ವೀಕರಿಸಲು ನಾನು ಹಿಂದೆಗೆದೆನು ನನ್ನ ಹೆಂಡತಿಗೆ ಎರಡನೆಯ ತರಗತಿಯ ಸ್ನಾನದ ಕೋಣೆಯನ್ನು ಉಪಯೋಗಿಸುವ ಅಧಿಕಾರವಿರಲಿಲ್ಲವೆಂಬುದು ನನಗೆ ತಿಳಿದಿದ್ದಿತು. ಆದರ ಕಡೆಗೆ ನಾನು ಈ ಅನುಚಿತಕಾರ್ಯದಲ್ಲಿ ಭಾಗಿಯಾದೆನು. ಸತ್ಯೋಪಾಸಕನಿಗೆ ಇದು ಸರಿಯಲ್ಲವಂದು ನನಗೆ ಗೊತ್ತು. ಅಲ್ಲಿಹೋಗಿ ಸ್ನಾನಮಾಡಬೇಕೆಂದು ನನ್ನ ಹೆಂಡತಿಯು ಆತುರಳಾಗಿದ್ದಳೆಂದಲ್ಲ, ಆದರೆ ಗಂಡನಿಗೆ ಹೆಂಡತಿಯಲ್ಲಿರುವ ಪಕ್ಷಪಾತವು ಅವನ ಸತ್ಯಪಕ್ಷಪಾತವನ್ನು ಗೆದ್ದಿತು. ಸತ್ಯದ ಮುಖವು ಮಾಯೆಯ ಪೊನ್ನೆರೆಯ ಮರೆಯಲ್ಲಿರುವುದೆಂದು ಉಪನಿಷತ್ತು ಹೇಳುತ್ತದೆ



೬

# ಒಲಿಸಲು ಪ್ರಯತ್ನ

ಪೂನಾಕ್ಕೆ ಬಂದು ಶ್ರಾದ್ಧಕ್ರಿಯೆಗಳೆಲ್ಲಾ ಮುಗಿದಮೇಲೆ ನಾವೆಲ್ಲರೂ ಭಾರತಸೇವಾಸಂಘದ ಭವಿಷ್ಯತ್ತನ್ನೂ ನಾನು ಅದನ್ನು ಸೇರಬೇಕೇ ಬೇಡವೇ ಎಂಬುದನ್ನೂ ಚರ್ಚಿಸತೊಡಗಿದೆವು. ಈ ಪ್ರಶ್ನೆಯನ್ನು ನಿರ್ಧರಿಸುವುದು ನನಗೆ ಬಹು ಸೂಕ್ಷ್ಮವಾದ ಕೆಲಸವಾಗಿ ಪರಿಣಮಿಸಿತು. ಗೋಖಲೆಯವರಿರುವವರೆಗೂ ನಾನು ಸಂಘದ ಸದಸ್ಯನಾಗಿ ಸೇರಬೇಕಾದ ಅಗತ್ಯವೇ ಇರಲಿಲ್ಲ. ನಾನು ಕೇವಲ ಗೋಖಲೆಯವರ ಇಚ್ಛಾನುಸಾರವಾಗಿ ವರ್ತಿಸಿದರೆ ಸಾಕಾಗಿದ್ದಿತು. ಈ ಪರಿಸ್ಥಿತಿಯು ನನಗೆ ಸುಖದಾಯಕವಾಗಿದ್ದಿತು. ಬಿರುಗಾಳಿಯೆದ್ದ ಸಮುದ್ರದಲ್ಲಿ ಹಡಗನ್ನು ನಡೆಸಲು ಒಳ್ಳೆಯ ನಾವಿಕನು ಬೇಕಾಗಿರುವಂತೆ ಭರತಖಂಡದ ಸಾರ್ವಜನಿಕ ಜೀವನದಲ್ಲಿ ನನಗೆ ದಾರಿತೋರಿಸುವವರೊಬ್ಬರು ಬೇಕಾಗಿದ್ದಿತು. ಗೋಖಲೆಯವರು ನನಗೆ ಇಂತಹ ಮಾರ್ಗದರ್ಶಿಗಳಾಗಿದ್ದರು ಅವರ ಆಶ್ರಯದಲ್ಲಿ ನಾನು ಸುರಕ್ಷಿತವಾಗಿ ನಿರ್ಭಯದಿಂದಿದ್ದೆನು, ಈಗ ಅವರಿಲ್ಲದುದರಿಂದ ಆ ಭಾರವು ನನ್ನಮೇಲೆಯೇ ಬಿದ್ದಿತು. ಸಂಘಕ್ಕೆ ಸೇರಲು ಪ್ರಯತ್ನಪಡುವುದು ನನ್ನ ಕರ್ತವ್ಯವೆಂದು ನಾನು ಎಣಿಸಿದೆನು. ಏಕೆಂದರೆ ಗೋಖಲೆಯವರ ಆತ್ಮಕ್ಕೆ ಇದರಿಂದ ಸಂತೋಷವಾಗುವುದೆಂದು ನನಗೆ ತೋರಿತು. ಆದುದರಿಂದ ನಾನು ನಿಸ್ಸಂಕೋಚವಾಗಿ ದೃಢತಾಪೂರ್ವಕವಾಗಿ ಸಂಘವನ್ನು ಒಲಿಸಲು ಪ್ರಯತ್ನಪಡತೊಡಗಿದೆನು.

ಈ ಸಮಯದಲ್ಲಿ ಹೆಚ್ಚುಕಡಮೆ ಸಂಘದ ಸದಸ್ಯರೆಲ್ಲಾ ಪೂನಾದಲ್ಲಿದ್ದರು. ನಾನು ಅವರುಗಳ ಬಳಿಗೆ ಹೋಗಿ ಬಿನ್ನಯಿಸಿ ಅವರು ನನ್ನ ವಿಷಯದಲ್ಲಿಟ್ಟುಕೊಂಡಿದ್ದ ಸಂಶಯವನ್ನು ದೂರಮಾಡಲು ಹೊರಟೆನು. ಆದರೆ ಅವರಲ್ಲಿ ಭಿನ್ನಾಭಿಪ್ರಾಯವಿದ್ದುದು ಕಂಡುಬಂದಿತು. ಒಂದು

ಪಂಗಡವು ನನ್ನನ್ನು ಸೇರಿಸಿಕೊಳ್ಳಲು ಸಿದ್ಧವಾಗಿದ್ದಿತು. ಇನ್ನೊಂದು ಪಂಗಡದವರಿಗೆ ಇದು ಏನೇನೂ ಇಷ್ಟವಿರಲಿಲ್ಲ ಎರಡು ಪಂಗಡದವರೂ ನನ್ನಲ್ಲಿ ಒಂದೇ ತೆರನಾಗಿ ಅಧಿಕ ಪ್ರೇಮವಿಟ್ಟಿದ್ದರೆಂಬುದು ನನಗೆ ಗೊತ್ತಿದ್ದಿತು ಆದರ ಬಹುಶಃ ಅವರಿಗೆ ತಮ್ಮ ಸಂಘವಲ್ಲಿದ್ದ ಭಕ್ತಿಯು ಇನ್ನೂ ಹೆಚ್ಚಾಗಿದ್ದಿತು ಅದು ಹೇಗೇ ಇರಲಿ ನನ್ನಲ್ಲಿಟ್ಟಿದ್ದ ಪ್ರೇಮಕ್ಕಿಂತ ಕಡಮೆಯಾಗಿರಲಿಲ್ಲ

ಆದುದರಿಂದ ನಮ್ಮ ಚರ್ಚೆಯಲ್ಲೆಲ್ಲಾ ಯಾವ ರೀತಿಯ ಮನಃಕಷಾಯಕ್ಕೂ ಎಡೆಯಿರಲಿಲ್ಲ. ಅದು ಕೇವಲ ಮುಖ್ಯತತ್ವಗಳಿಗೆ ಸಂಬಂಧಿಸಿದುದಾಗಿದ್ದಿತು ನನ್ನ ವಿರುದ್ಧಪಕ್ಷದವರಿಗೆ ತಮ್ಮ ಮತ್ತು ನನ್ನ ಅಭಿಪ್ರಾಯಗಳು ಅನೇಕ ಮುಖ್ಯ ವಿಚಾರಗಳಲ್ಲಿ ಉತ್ತರ ದಕ್ಷಿಣ ಧ್ರುವಗಳಂತಿದ್ದುವೆಂದೂ ನಾನು ಸಂಘದ ಸದಸ್ಯನಾದರೆ ಸಂಘವನ್ನು ಸ್ಥಾಪಿಸಿದ ಮುಖ್ಯೋದ್ದೇಶಗಳಿಗೇ ಭಂಗವುಂಟಾಗುವ ಸಂಭವವುಂಟೆಂದೂ ತೋರುತ್ತಿದ್ದಿತು ಸ್ವಭಾವತಃ ಇದು ಅವರ ಸಹನೆಯನ್ನು ಮೀರಿದ್ದಿತು.

ಬಹುವಾಗಿ ಚರ್ಚಿಸಿದ ಮೇಲೆ ನಾವು ಬೇರೆಯಾದೆವು. ಅಂತಿಮ ನಿರ್ಣಯಕ್ಕಾಗಿ ಇನ್ನೊಮ್ಮೆ ಸೇರಬೇಕೆಂದು ಗೊತ್ತಾಯಿತು. ಮನೆಗೆ ಹೋಗುತ್ತಾ ನಾನು ಆಲೋಚನೆಯಲ್ಲಿ ಮುಳುಗಿದೆನು ಸಂಘದ ಸದಸ್ಯರಲ್ಲಿ ಹೆಚ್ಚು ಮಂದಿಯ ಅಭಿಮತದ ಬಲದಿಂದ ಸಂಘವನ್ನು ಸೇರುವುದು ಸರಿಯೆ? ಹೀಗೆ ಮಾಡಿದರ ಗೋಖಲೆಯವರಲ್ಲ ನಾನಿಟ್ಟಿದ್ದ ಗುರುಭಕ್ತಿಗೆ ಭಂಗವಾಗುವುದಿಲ್ಲವ? ನನ್ನನ್ನು ಸೇರಿಸಿಕೊಳ್ಳುವ ವಿಷಯವಾಗಿ ಸಂಘದ ಸದಸ್ಯರಲ್ಲಿ ಇಷ್ಟು ತೀಕ್ಷ್ಣವಾದ ಮತಭೇದವಿರುವಾಗ ಸಂಘಕ್ಕೆ ಸೇರುವ ಉದ್ದೇಶವನ್ನು ನಾನಾಗಿಯೇ ತ್ಯಜಿಸಿ ವಿರುದ್ಧಪಕ್ಷದವರನ್ನು ಉಭಯಸಂಕಟದಿಂದ ಪಾರುಮಾಡುವುದೇ ಅತ್ಯುತ್ತಮವಾದ ಮಾರ್ಗವೆಂದು ನನಗೆ ಸ್ಪಷ್ಟವಾಗಿ ತೋರಿತು. ಹೀಗೆ ಮಾಡುವುದರಿಂದಲೇ ಗೋಖಲೆಯವರ ವಿಷಯದಲ್ಲಿಯೂ ನನ ಧರ್ಮವನ್ನು ಪಾಲಿಸಬಹುದೆಂದು ಯೋಚಿಸಿದೆನು. ಈ ನಿರ್ಧಾರವು ನನ್ನ ಮನಸ್ಸಿಗೆ ಒಮ್ಮೆಯೇ ಹೊಳೆಯಿತು ಒಡನೆಯೇ ನಾನು ಶ್ರೀ. ಶ್ರೀನಿವಾಸ ಶಾಸ್ತ್ರಿಗಳಿಗೆ ನನ್ನನ್ನು ಸಂಘಕ್ಕೆ ಸೇರಿಸಿಕೊಳ್ಳುವ ಸಂಬಂಧವಾಗಿ ಸಭೆಗೂಡಬೇಕಾದುದು

ದೇ ಇಲ್ಲವೆಂದು ಬರೆದೆನು ವಿರುದ್ಧಪಕ್ಷದವರು ನನ್ನ ಈ ನಿಶ್ಚಯವನ್ನು ಬಹುವಾಗಿ ಮೆಚ್ಚಿದರು. ಇದು ಅವರನ್ನು ಧರ್ಮಸಂಕಟದಿಂದ ಪಾರು ಮಾಡಿತು ಇದರಿಂದ ನಮ್ಮ ಸ್ನೇಹಸಂಬಂಧವು ಇನ್ನೂ ಗಾಢವಾಯಿತು. ವಾಸ್ತವಿಕವಾಗಿ ನಾನು ಸಂಘದ ಸದಸ್ಯನಾದೆನು.

ನಾನು ನಿಯಮಪೂರ್ವಕವಾಗಿ ಸಂಘದ ಸದಸ್ಯನಾಗದಿದ್ದುದು ಒಳ್ಳೆಯದೇ ಆಯಿತೆಂದೂ ವಿರುದ್ಧ ಪಕ್ಷದವರು ನನ್ನನ್ನು ಇದಿರಿಸಿದುದು ನ್ಯಾಯವೆಂದೂ ಅನುಭವವು ನನಗೆ ಈಗ ಹೇಳುತ್ತದೆ. ನಮ್ಮ ಮುಖ್ಯ ತತ್ವಗಳ ವಿಚಾರದಲ್ಲಿ ನಮ್ಮ ಮಧ್ಯ ಬಹುಭೇದವಿದ್ದಿತೆಂಬುದನ್ನೂ ಅನುಭವವು ತೋರಿಸಿದೆ. ಆದರೆ ಈ ಮತಭೇದದಿಂದ ನಮ್ಮ ಮೈತ್ರಿಗ ಕುಂದಾಗಲಿ ನಮ್ಮ ಸಂಬಂಧದಲ್ಲಿ ಕಟುತ್ವವಾಗಲಿ ಉಂಟಾಗಿಲ್ಲ. ನಾವು ಅಂದಿನಿಂದ ಅಣ್ಣತಮ್ಮಂದಿರಂತಿದ್ದೇವೆ. ಪೂನಾದಲ್ಲಿರುವ ಸಂಘದ ಭವನವು ನನಗೆ ಸದಾ ಯಾತ್ರಾಸ್ಥಾನವಾಗಿದೆ.

ಕಟ್ಟಳೆಯ ದೃಷ್ಟಿಯಿಂದ ನೋಡಿದರ ನಾನು ಸಂಘದ ಸದಸ್ಯನಾಗಲಿಲ್ಲವೆಂಬುದೇನೋ ನಿಜ. ಆದರೆ ಅಂತಃಕರಣದಲ್ಲಿ ನಾನು ಸದಾ ಸದಸ್ಯನಾಗಿಯೇ ಇದ್ದೇನೆ. ಲೌಕಿಕ ಸಂಬಂಧಕ್ಕಿಂತ ಆಧ್ಯಾತ್ಮಿಕ ಸಂಬಂಧವು ಎಷ್ಟೋ ಬೆಲೆಯುಳ್ಳದು. ಆಧ್ಯಾತ್ಮಿಕ ಸಂಬಂಧವಿಲ್ಲದ ಲೌಕಿಕ ಸಂಬಂಧವು ಆತ್ಮಸಿಲ್ಲದ ದೇಹದಂತೆ.



# ೭

# ಕುಂಭ ಮೇಳ

ಡಾ. ಮೆಹತಾರವರನ್ನು ನೋಡಬೇಕೆಂಬ ಉದ್ದೇಶದಿಂದ ದಾರಿಯಲ್ಲಿ ನಾನು ಕಲಿಕತ್ತೆಯಲ್ಲಿ ನಿಲ್ಲಬೇಕಾಯಿತು. ನಾನು ಅಲ್ಲಿ ದಿವಂ. ಶ್ರೀ. ಭೂಪೇಂದ್ರನಾಥ ವಸುಗಳ ಮನೆಯಲ್ಲಿ ಇಳಿದೆನು. ವಂಗ ಅತಿಥಿಸತ್ಕಾರವು ಇಲ್ಲಿ ಚರಮಸೀಮೆಯನ್ನು ಮುಟ್ಟಿತು. ಆ ಕಾಲದಲ್ಲಿ ನಾನು ಕೇವಲ ಹಣ್ಣುಗಳನ್ನು ಮಾತ್ರ ಆಹಾರವಾಗಿ ತೆಗೆದುಕೊಳ್ಳುತ್ತಿದ್ದೆನು. ಆದುದರಿಂದ ಕಲಿಕತ್ತೆಯಲ್ಲಿ ದೊರಕುವ ಹಣ್ಣುಹಂಪಲುಗಳನ್ನೆಲ್ಲಾ ನನಗಾಗಿ ತರಿಸಿದ್ದರು. ಮನೆಯ ಹೆಂಗಸರು ರಾತ್ರಿಯೆಲ್ಲಾ ಎದ್ದು ಬಾದಾಮಿ ದ್ರಾಕ್ಷಿ ಮುಂತಾದುವುಗಳ ಸಿಪ್ಪೆಯನ್ನು ಸುಲಿಯುತ್ತಿದ್ದರು. ಈ ದೇಶದ ಪದ್ಧತಿಯಂತೆ ಹಣ್ಣುಗಳಿಂದ ರುಚಿಯ ಪದಾರ್ಥಗಳನ್ನು ಸಿದ್ಧಪಡಿಸಲು ಸಾಧ್ಯವಾದಷ್ಟು ಪ್ರಯತ್ನವನ್ನು ಮಾಡುತ್ತಿದ್ದರು. ನನ್ನ ಜೊತೆಯವರಿಗೆ ಒಗೆಬಗೆಯ ಭಕ್ಷ್ಯಗಳನ್ನು ಮಾಡಿಕೊಟ್ಟರು. ಇವರಲ್ಲಿ ನನ್ನ ಮಗನಾದ ರಾಮದಾಸನೂ ಇದ್ದನು. ಈ ಪ್ರೇಮಪೂರ್ವಕವಾದ ಆದರಸತ್ಕಾರವನ್ನು ನನ್ನ ಮನಸ್ಸು ಎಷ್ಟು ಮೆಚ್ಚಿದರೂ ಒಂದು ಸಂಸಾರವೆಲ್ಲಾ ಈರ್ವರು ಮೂವರು ಅತಿಥಿಗಳ ಸುಖವನ್ನು ನೋಡಿಕೊಳ್ಳಲು ಶ್ರಮಪಡುವುದು ನನಗೆ ಸಹನಾತೀತವಾಗಿದ್ದಿತು. ಆದರೆ ಈ ಸಂಕಟದಿಂದ ನನಗೆ ತಪ್ಪಿಸಿಕೊಳ್ಳಲು ಯಾವ ಉಪಾಯವೂ ತೋರಲಿಲ್ಲ.

ರಂಗೂನಿಗೆ ಹೋಗುವ ಹಡಗಿನಲ್ಲಿ ನಾನು ಡೆಕ್ಕಿನಮೇಲೆ (ಹಡಗಿನ ಅಂಗಳ—ಎಲ್ಲಕ್ಕಿಂತ ಕಡಮೆ ದರ್ಜೆ) ಪ್ರಯಾಣಮಾಡಿದೆನು. ಶ್ರೀ. ವಸುಗಳ ಮನೆಯಲ್ಲಿ ನಾವು ಬಹುಸತ್ಕಾರದಿಂದ ಸಂಕಟಕ್ಕೆ ಸಿಲುಕಿದರೆ ಇಲ್ಲಿ ಡೆಕ್ಕಿನ ಪ್ರಯಾಣಿಕರ ಸಾಮಾನ್ಯ ಸೌಕರ್ಯಗಳ ವಿಷಯ

ದಲ್ಲಿ ಕೂಡ ಅತ್ಯಂತ ಅನಾದರದ ಅನುಭವವು ನಮ್ಮ ಪಾಲಿಗೆ ಬಂದಿತು. ಹೆಸರಿಗೆ ಒಂದು ಸ್ನಾನದ ಕೋಠಡಿಯಿದ್ದಿತು. ಅದರ ಕೊಳಕು ಅಸಹ್ಯವಾಗಿದ್ದಿತು. ಕಕ್ಕಸಗಳು ನಾರುವ ಗುಣಿಗಳಾಗಿದ್ದುವು. ಅವುಗಳನ್ನು ಉಪಯೋಗಿಸಲು ಮಲಮೂತ್ರಗಳನ್ನು ತುಳಿದುಕೊಂಡೋ ದಾಟಿಕೊಂಡೋ ಹೋಗಬೇಕಾಗಿದ್ದಿತು.

ರಂಗೂನನ್ನು ಸೇರಿದಮೇಲೆ ಅಲ್ಲಿದ್ದ ಹಡಗಿನ ಮಾಲಿಕರ ಪ್ರತಿನಿಧಿಗೆ ಎಲ್ಲಾ ವಿಷಯಗಳನ್ನೂ ತಿಳಿಸಿ ಬರೆದೆನು. ಈ ಪತ್ರದ ಪರಿಣಾಮವಾಗಿಯೂ ಡಾ. ಮೆಹತಾರವರು ಈ ವಿಷಯದಲ್ಲಿ ಪಟ್ಟ ಶ್ರಮದ ಫಲವಾಗಿಯೂ ನನ್ನ ಮರುಪಯಣವು—ನಾನು ಡೆಕ್ಕಿನ ಪ್ರಯಾಣಿಕನಾಗಿಯೇ ಇದ್ದೆನಾದರೂ ಹಿಂದಿನದರಷ್ಟು ಕೇಡಾಗಿರಲಿಲ್ಲ

ರಂಗೂನಿನಲ್ಲಿಯೂ ನನ್ನ ಫಲಾಹಾರಪಥವು ಮನೆಯ ಯಜಮಾನರಿಗೆ ತೊಂದರೆಗೆ ಕಾರಣವಾಯಿತು. ಆದರೆ ಡಾ. ಮೆಹತಾರವರ ಮನೆಯಲ್ಲಿ ನನಗೆ ನನ್ನ ಮನೆಯಲ್ಲಿದ್ದಷ್ಟೇ ಸ್ವಾತಂತ್ರ್ಯವಿದ್ದುದರಿಂದ ನಾನು ಆಹಾರದ ದಂಡನ್ನು ತಕ್ಕಮಟ್ಟಿಗೆ ಅಂಕೆಯಲ್ಲಿಡಲು ಸಾಧ್ಯವಾಯಿತು. ನಾನು ತಿನ್ನಬಹುದಾದ ಪದಾರ್ಥಗಳ ವಿಷಯದಲ್ಲಿ ನಾನು ಯಾವ ಮಿತಿಯನ್ನೂ ನಿಯಮಿಸಿಕೊಂಡಿರಲಿಲ್ಲವಾದುದರಿಂದ ನನಗಾಗಿ ತರಿಸಿದ ಬಗೆಬಗೆಯ ಫಲಗಳ ಮೇಲಿನ ಮೋಹವನ್ನು ನನ್ನ ಕಣ್ಣೂ ನಾಲಿಗೆಯೂ ತ್ಯಜಿಸದೆ ಹೋದುವು. ಊಟಕ್ಕೆ ಗೊತ್ತಾದ ಹೊತ್ತಿರಲಿಲ್ಲ ನಾನೇನೋ ದಿನದ ಕಡೆಯ ಊಟವನ್ನು ಹೊತ್ತು ಮುಳುಗುವುದಕ್ಕೆ ಮುಂಚೆಯೇ ಮುಗಿಸುವ ಇಷ್ಟವುಳ್ಳವನಾಗಿದ್ದರೂ ಸಾಮಾನ್ಯವಾಗಿ ನಮ್ಮ ಊಟವು ರಾತ್ರಿ ಎಂಟೊಂಬತ್ತು ಘಂಟೆಗೆ ಮುಂಚೆ ಆಗುತ್ತಿರಲಿಲ್ಲ.

ಈ ವರ್ಷ, ಎಂದರೆ ೧೯೧೫ನೆಯ ಇಸವಿಯಲ್ಲಿ, ಕುಂಭಮೇಳವು ನಡೆಯುವದಿದ್ದಿತು. ಈ ಮೇಳವು ಹನ್ನೆರಡು ವರ್ಷಕ್ಕೊಮ್ಮೆ ಹರಿದ್ವಾರದಲ್ಲಿ ನಡೆಯುತ್ತದೆ. ಈ ಉತ್ಸವಕ್ಕೆ ಹೋಗಲು ನನಗೆ ತೀವ್ರವಾದ ಇಚ್ಛೆಯೇನೂ ಇರಲಿಲ್ಲ. ಆದರೆ ತಮ್ಮ ಗುರುಕುಲದಲ್ಲಿದ್ದ ಮಹಾತ್ಮಾ ಮುನ್ಷೀರಾಮಜಿ (ಸ್ವಾಮೀ ಶ್ರದ್ಧಾನಂದಜೀ) ಯವ

ರನ್ನು ನೋಡಲು ನಾನು ಆತುರನಾಗಿದ್ದೆನು. ಗೋಖಲೆಯವರ ಸಂಘವು ಕುಂಭಮೇಳದಲ್ಲಿ ಸೇವೆಗಾಗಿ ಸ್ವಯಂಸೇವಕರ ದೊಡ್ಡದೊಂದು ದಳವನ್ನು ಕಳುಹಿಸಿದ್ದಿತು. ಪಂಡಿತ್ ಹೃದಯನಾಥ ಕುಂಜರುಯವರು ಅದರ ಮುಖ್ಯಸ್ಥರಾಗಿಯೂ ದಿವಂ. ಡಾ. ದೇವರು ಅದರ ವೈದ್ಯಾಧಿಕಾರಿಗಳಾಗಿಯೂ ಇದ್ದರು ಫೀನಿಕ್ಸ್ ಪಂಗಡವನ್ನು ಇವರ ಸಹಾಯಕ್ಕೆ ಕಳುಹಿಸಬೇಕೆಂದು ನನಗೆ ಆಮಂತ್ರಣ ಬಂದಿತು. ಆದುದರಿಂದ ಮಗನಲಾಲಗಾಂಧಿಯವರು ನನಗಿಂತ ಮುಂಚೆಯೇ ಹೋಗಿದ್ದರು ರಂಗೂನಿನಿಂದ ಹಿಂದಕ್ಕೆ ಬರುತ್ತಾ ನಾನು ಪಂಗಡವನ್ನು ಸೇರಿದೆನು.

ಕಲಿಕತ್ತೆಯಿಂದ ಹರಿದ್ವಾರದವರೆಗಿನ ಪ್ರಯಾಣವು ಎಂದಿಗಿಂತ ಹೆಚ್ಚು ಕಿರುಕುಳದ್ದಾಯಿತು ಒಮ್ಮೊಮ್ಮೆ ಗಾಡಿಯಲ್ಲಿ ದೀಪವೇ ಇರುತ್ತಿರಲಿಲ್ಲ ಸಹಾರನ್ ಪುರದಲ್ಲಿ ನಮ್ಮನ್ನು ಸಾಮಾನಿನ ಗಾಡಿಗೋ ಅಥವಾ ದನದ ಗಾಡಿಗೋ ತುಂಬಿದರು ಇವಕ್ಕೆ ಮೇಲ್ಛಾವಣಿಯಿರಲಿಲ್ಲ ತಲೆಯಮೇಲೆ ನಡುಹಗಲಿನ ಉರಿಬಿಸಿಲು. ಕಾಲಕೆಳಗೆ ಸುಡುವ ಕಬ್ಬಿಣದ ನೆಲ ಇದರ ಮಧ್ಯೆ ನಾವು ಬೆಂದು ಬೆಂಡಾದೆವು. ಇಂತಹ ಪ್ರಯಾಣದಿಂದುಂಟಾದ ಬಾಯಾರಿಕೆಯು ಕೂಡ 'ನಿಷ್ಠ ಹಿಂದೂಜನರನ್ನು' ಮುಸಲ್ಮಾನೀ' ನೀರನ್ನು ಕುಡಿಯಲು ಒಗ್ಗಿಸಲಿಲ್ಲ. 'ಹಿಂದೂ' ನೀರು ದೊರಕುವವರೆಗೂ ಅವರು ಕಾದಿರುತ್ತಿದ್ದರು ಇದೇ ಹಿಂದೂಗಳೇ ತಾವು ಕಾಹಿಲೆಬಿದ್ದಾಗ ವೈದ್ಯರು ತಮಗೆ ಮದ್ಯವನ್ನು ಕೊಡಲಿ, ಗೋಮಾಂಸದ ಚಹವನ್ನು ಕುಡಿಯಹೇಳಲಿ, ಮುಸಲ್ಮಾನನೋ ಅಥವಾ ಈಸಾಯಿಯೋ ಔಷಧವನ್ನು ಬೆರಸಿಕೊಡಲಿ, ಹಿಂದು ಮುಂದು ನೋಡುವುದೂ ಇಲ್ಲ, ವಿಚಾರಿಸುವುದೂ ಇಲ್ಲ.

ಶಾಂತಿನಿಕೇತನದಲ್ಲಿ ನಮ್ಮ ಅನುಭವದಿಂದ ಝಾಡಮಾಲಿಯ ಕೆಲಸವೇ ಹಿಂದೂಸ್ಥಾನದಲ್ಲಿ ನಮ್ಮ ವಿಶೇಷಕಾರ್ಯವಾಗಿ ನಿಲ್ಲುವುದೆಂದು ನಮಗೆ ಗೊತ್ತಾಗಿದ್ದಿತು ಹರಿದ್ವಾರದಲ್ಲಿ ಸ್ವಯಂಸೇವಕರಿಗಾಗಿ ಧರ್ಮಶಾಲೆಯೊಂದರಲ್ಲಿ ಗುಡಾರವನ್ನು ಹಾಕಿದ್ದರು ಕಕ್ಕಸಕ್ಕಾಗಿ ಡಾ. ದೇವರು ಕೆಲವು ಗುಣಿಗಳನ್ನು ತೆಗೆಸಿದ್ದರು. ಇವುಗಳನ್ನು

ನೋಡಿಕೊಳ್ಳಲು ಅವರು ಕೆಲವು ಸಂಬಳದ ಝಾಡಮಾಲಿಗಳ ಮೇಲೆ ಭಾರವನ್ನು ಹಾಕಬೇಕಾಗಿದ್ದಿತು. ಇದೋ ಇಲ್ಲಿ ಫೀನಿಕ್ಸ್ ಪಂಗಡಕ್ಕೆ ಕೆಲಸವಿದ್ದಿತು. ಈ ಗುಣಿಗಳಲ್ಲಿನ ಮಲಗಮೇಲೆ ಮಣ್ಣು ಹಾಕಿ ಸಾಗಿಸಿ ಅವುಗಳನ್ನು ಶುಚಿಯಾಗಿಟ್ಟುಕೊಂಡಿರುವೆವೆಂದು ನಾವು ಹೇಳಿದೆವು. ಡಾ. ದೇವರು ಸಂತೋಷದಿಂದ ಒಪ್ಪಿದರು. ಹೀಗೆ ಸೇವೆ ಮಾಡುವೆವೆಂದು ಹೇಳಿದವನು ನಾನಾದರೂ ಕೆಲಸವನ್ನು ನಡೆಸುವವರು ಮಗನಲಾಲ ಗಾಂಧಿಯವರಾಗಿದ್ದರು. ನನ್ನ ಕೆಲಸವು ಮುಖ್ಯವಾಗಿ ಡೇರೆಯಲ್ಲಿ ಕುಳಿತುಕೊಂಡು ದರ್ಶನವೀಯುವುದು, ನನ್ನನ್ನು ನೋಡಲು ಬಂದ ಅನೇಕ ಯಾತ್ರಿಕರೊಡನೆ ಧರ್ಮಸಂಬಂಧವಾಗಿಯೂ ಇತರ ವಿಚಾರಗಳನ್ನು ಕುರಿತೂ ಚರ್ಚೆ ನಡೆಸುವುದು ಆಗಿದ್ದಿತು. ಇದರ ಮಧ್ಯೆ ನನಗೆ ಒಂದು ಕ್ಷಣದ ವಿರಾಮವೂ ದೊರಕುತ್ತಿರಲಿಲ್ಲ. ಸ್ನಾನ ಘಟ್ಟಕ್ಕೆ ಕೂಡ ಈ ದರ್ಶನಾರ್ಥಿಗಳು ನನ್ನನ್ನು ಹಿಂಬಾಲಿಸುತ್ತಿದ್ದರು, ಊಟ ಮಾಡುವಾಗ ಕೂಡ ನಾನೊಬ್ಬನೇ ಇರಲು ಅವಕಾಶ ಕೊಡುತ್ತಿರಲಿಲ್ಲ. ದಕ್ಷಿಣ ಆಫ್ರಿಕದಲ್ಲಿ ನಾನು ಮಾಡಿದ ಅಲ್ಪಸೇವೆಯಿಂದ ಭರತಖಂಡದಲ್ಲೆಲ್ಲಾ ಎಷ್ಟು ಗಂಭೀರವಾದ ಪರಿಣಾಮವುಂಟಾಗಿರುವುದೆಂಬುದನ್ನು ನಾನು ಈ ರೀತಿಯಾಗಿ ಹರಿದ್ವಾರದಲ್ಲಿ ಮನಗಂಡೆನು. ಆದರೆ ಈ ಸ್ಥಿತಿಯೇನೂ ನನಗೆ ಸಂತೋಷದಾಯಕವಾಗಿರಲಿಲ್ಲ. ನಾನು ಎರಡು ರೀತಿಯ ಸಂಕಟಗಳ ಮಧ್ಯೆ ಸಿಲುಕಿದ್ದೆನು. ನನ್ನನ್ನು ಯಾರೂ ಗುರುತಿಸದೆಡೆಯಲ್ಲಿ ಈ ದೇಶದಲ್ಲಿ ಲಕ್ಷಾಂತರ ಮಂದಿ ಅನುಭವಿಸಬೇಕಾದ ಕಷ್ಟನಿಷ್ಠೂರಗಳನ್ನು ನಾನು ಸಹಿಸಬೇಕಾಗಿದ್ದಿತು, ಉದಾ – ರೈಲಿನಲ್ಲಿ ಪ್ರಯಾಣಮಾಡುವಾಗ. ನನ್ನ ವಿಷಯವನ್ನು ತಿಳಿದವರ ಮಧ್ಯದಲ್ಲಿದ್ದಾಗ ನಾನು ಅವರ ದರ್ಶನಾಕಾಂಕ್ಷೆಯ ಹುಚ್ಚಿಗೆ ಈಡಾಗುತ್ತಿದ್ದೆನು. ಇವೆರಡರಲ್ಲಿ ಯಾವ ಪರಿಸ್ಥಿತಿಯು ಹೆಚ್ಚು ಕರುಣಾಜನಕವಾದುದೆಂಬುದನ್ನು ನಿರ್ಧರಿಸುವುದು ನನಗೆ ಎಷ್ಟೋಬಾರಿ ಕಷ್ಟವಾಗಿದೆ. ಇಷ್ಟಾದರೂ ನನಗೆ ಗೊತ್ತು, ದರ್ಶನಾರ್ಥಿಗಳ ಅಂಧ ಪ್ರೇಮದಿಂದ ನಾನು ಅನೇಕವೇಳೆ ಕೋಪಗೊಂಡಿದ್ದೇನೆ ಇನ್ನೂ ಹೆಚ್ಚುಬಾರಿ ಮನನೊಂದಿದ್ದೇನೆ. ಆದರೆ ಮೂರನೆಯ ತರಗತಿಯ ಪ್ರಯಾಣವು

ಎಷ್ಟೋಸಲ ಕಷ್ಟಕರವಾಗಿ ಪರಿಣಮಿಸಿದ್ದರೂ ನನ್ನ ಅಂತಃಕರಣಶುದ್ಧಿಗೆ ಕಾರಣವಾಗಿದೆಯೇ ಹೊರತು ಕೋಪೋದ್ರೇಕಕ್ಕೆ ಕಾರಣವಾಗಿಯೇ ಇಲ್ಲವೆಂದು ಹೇಳಬಹುದು.

ಆ ಕಾಲದಲ್ಲಿ ನನಗೆ ಬೇಕಾದಷ್ಟು ತಿರುಗಾಡಲು ತಕ್ಕ ಕಾಯಶಕ್ತಿಯಿದ್ದಿತು. ಇದೂ ಅಲ್ಲದೆ ಜನರು ನನ್ನನ್ನು ಬೀದಿಯಲ್ಲಿ ನೋಡಿದೊಡನೆಯೇ ಸಂಭ್ರಮವಾಗುವಷ್ಟು ಪ್ರಸಿದ್ಧಿಗೆ ನಾನಿನ್ನೂ ಬಂದಿರಲಿಲ್ಲ. ಈ ಓಡಾಟದಲ್ಲಿ ನನಗೆ ಯಾತ್ರಿಕರ ಧರ್ಮಭಾವನೆಗಿಂತ ಅವರ ಅಜಾಗರೂಕತೆ, ಕಾಪಟ್ಯ, ಸೋಮಾರಿತನ—ಇವೇ ಹೆಚ್ಚಾಗಿ ಕಂಡುಬಂದುವು. ಅಲ್ಲಿಗೆ ಸಾಧುಗಳ ತಂಡತಂಡವೇ ಹಾರಿಬಂದಿದ್ದಿತು. ಅವರನ್ನು ನೋಡಿದರೆ ಅವರು ಸವಿಯನ್ನುಂಡು ಸುಖಶಯ್ಯೆಯಲ್ಲಿ ಮಲಗಿ ಸಂವಿನೋದದಿಂದ ಜೀವನಪಥವನ್ನು ಸಾಗಿಸುವುದಕ್ಕಾಗಿಯೇ ಜನ್ಮವೆತ್ತಿದಂತೆ ಕಾಣುತ್ತಿದ್ದಿತು.

ಇಲ್ಲಿ ನಾನು ಐದುಕಾಲಿನ ಆಕಳನ್ನು ನೋಡಿದೆನು! ಇದರಿಂದ ನನಗೆ ಆಶ್ಚರ್ಯವಾಯಿತು. ಆದರೆ ಅನುಭವಿಗಳಾದ ಜನರು ನನಗೆ ನಿಜವಾದ ಸಂಗತಿಯನ್ನು ತಿಳಿಸಿದರು ಈ ಐದುಕಾಲಿನ ಬಡಹಸುವು, ಪಾಪ, ದುಷ್ಟರ ಲೋಭಕ್ಕೆ ಆಹುತಿಯಾಗಿದ್ದಿತು. ಜೀವವಿದ್ದ ಕರುವಿನ ಒಂದುಕಾಲನ್ನು ಕುಯ್ದು ಅದನ್ನು ಹಸುವಿನ ಭುಜಕ್ಕೆ ಅಂಟಿಸಿಉಂಟಾದುದೇ ಈ ಐದನೆಯಕಾಲೆಂದು ನನಗೆ ತಿಳಿಯಬಂದಿತು! ಎರಡು ಪ್ರಾಣಿಗಳಿಗೂ ಹಿಂಸೆಮಾಡಿದುದರಿಂದುಂಟಾದ ಈ ಫಲವನ್ನು ಅಜ್ಞಾನಿಗಳ ಹಣವನ್ನು ಸುಲಿಯುವುದಕ್ಕೆ ಉಪಯೋಗಿಸಿದ್ದರು. ಐದುಕಾಲಿನ ಆಕಳಿನ ದರ್ಶನವನ್ನು ಮಾಡಲೆಳಸದ ಹಿಂದುವು ಉಂಟೆ? ಇಂತಹ ಅದ್ಭುತವಾದ ಹಸುವಿಗೆ ಶಕ್ತ್ಯನುಸಾರ ದಾನ ಮಾಡದೆ ಇರಲಾಗುವುದೆ?

ಕುಂಭಮೇಳದ ದಿನವೊದಗಿತು. ಅದು ನನಗೆ ಚಿರಸ್ಮರಣೀಯವಾಗಿ ಪರಿಣಮಿಸಿತು. ನಾನು ಹರಿದ್ವಾರಕ್ಕೆ ಯಾತ್ರಾರ್ಥಿಯಾಗಿ ಹೋಗಿರಲಿಲ್ಲ. ಪವಿತ್ರತೆಯನ್ನರಸಿಕೊಂಡು ತೀರ್ಥಕ್ಷೇತ್ರಗಳಿಗೆ ಹೋಗಲು ನಾನು ಎಂದೂ ಬಯಸಿಲ್ಲ. ಅಲ್ಲಿಗೆ ಸುಮಾರು ಹದಿನೇಳು ಲಕ್ಷ ಜನರು ಬಂದಿದ್ದರೆಂದು ಊಹಿಸಿದ್ದರು. ಇವರೆಲ್ಲರೂ ಕೇವಲ ಕಪಟಿಗಳಾಗಲಿ

ನೋಟಕ್ಕೆ ಬಂದವರಾಗಲಿ ಎಂದು ಹೇಳಲು ಸಾಧ್ಯವೇ? ಇವರಲ್ಲಿ ಎಷ್ಟೋಜನರು ಪುಣ್ಯವನ್ನು ಗಳಿಸುವುದಕ್ಕೂ ಆತ್ಮಶುದ್ಧಿಗೂ ಬಂದಿದ್ದ ರೆಂಬುದರಲ್ಲಿ ನನಗೆ ಸಂಶಯವಿರಲಿಲ್ಲ ಈರೀತಿಯ ಶ್ರದ್ಧೆಯು ಆತ್ಮನ ಪುರೋವೃದ್ಧಿಗ ಸಹಾಯಕವಾಗುವುದೆಂಬುದನ್ನು ಹೇಳುವುದು ಅಸಾಧ್ಯವಲ್ಲದಿದ್ದರೂ ಕಷ್ಟಸಾಧ್ಯ.

ಆದುದರಿಂದ ನಾನು ಆ ರಾತ್ರಿಯೆಲ್ಲಾ ವಿಚಾರದಲ್ಲಿ ಮಗ್ನನಾಗಿ ಕಳೆದೆನು. ಎಲ್ಲಕಡೆಯೂ ಪಸರಿಸಿದಕಾಪಟ್ಯದಮಧ್ಯ ಆ ಪವಿತ್ರಾತ್ಮರು ಇದ್ದರು. ಭಗವಂತನ ದೃಷ್ಟಿಯಲ್ಲಿ ಅವರು ನಿಷ್ಕಲ್ಮಷರಾಗಿದ್ದರು ಹರಿದ್ವಾರಕ್ಕ ಯಾತ್ರೆಗಾಗಿ ಹೋಗುವುದೇ ಪಾಪಕಾರ್ಯವಾದರ ನಾನು ಜನರಿರಿಗೆ ಈ ಅಭಿಪ್ರಾಯವನ್ನು ಪ್ರಕಟಿಸಿ ಕುಂಭದ ದಿನವೇ ಹರಿದ್ವಾರ ವನ್ನು ಬಿಡಬೇಕು ಹರಿದ್ವಾರಕ್ಕೂ ಕುಂಭಮೇಳಕ್ಕೂ ಯಾತ್ರಾರ್ಥಿ ಯಾಗಿ ಹೋಗುವುದರಲ್ಲೇನೂ ಕಲ್ಮಷವಿಲ್ಲದಿದ್ದರ ಅಲ್ಲಿ ಹರಡಿದ್ದ ಪಾಪ ವೃತ್ತಿಗೆ ಪ್ರಾಯಶ್ಚಿತ್ತರೂಪವಾಗಿ ನಾನು ಯಾವದಾದರೊಂದು ತ್ಯಾಗ ವ್ರತವನ್ನು ಕೈಗೊಂಡು ಅಂತಃಶುದ್ಧಿಗೈಯಬೇಕು ಇದು ನನಗೆ ಕೇವಲ ಸಹಜವಾಗಿದ್ದಿತು ನನ್ನ ಜೀವನವು ನಿಯಮಪೂರ್ವಕ ವ್ರತಾ ಚರಣೆಯಮೇಲೆ ರಚಿಸಿದುದೇ ಆಗಿದೆ. ಅಷ್ಟು ಔದಾರ್ಯದಿಂದ ನನ್ನ ನ್ನು ಕಲಿಕತ್ತೆಯಲ್ಲಿಯೂ ರಂಗೂನಿನಲ್ಲಿಯೂ ಸತ್ಕರಿಸಿದ್ದ ಸದ್ಗೃಹ ಸ್ಥರಿಗೆ ನಾನು ಅನಾವಶ್ಯಕವಾಗಿ ಕೊಟ್ಟ ಕಷ್ಟವು ನನ್ನ ಸ್ಮರಣೆಗ ಬಂದಿ ತು ಆದುದರಿಂದ ನಾನು ನನ್ನ ಆಹಾರವಸ್ತುಗಳ ಸಂಖ್ಯೆಯು ಎಂತಿ ಯನ್ನು ನಿರ್ಧರಿಸಬೇಕಂದೂ ಹೊತ್ತುಮುಳುಗುವುದಕ್ಕೆ ಮುಂಚೆ ಊಟವನ್ನು ಮುಗಿಸಿಬಿಡಬೇಕೆಂದೂ ನಿಶ್ಚಯಿಸಿದೆನು. ಈ ನಿಯಮ ಗಳನ್ನು ನಾನು ಹೊತ್ತುಕೊಳ್ಳದಿದ್ದರೆ ಮುಂದೆ ನನ್ನನ್ನು ಸತ್ಕರಿಸುವ ಗೃಹಸ್ಥರಿಗೆ ನಾನು ಹೆಚ್ಚು ಅನಾನುಕೂಲಕ್ಕೆ ಕಾರಣನಾಗುವನೆಂದೂ ನಾನು ಸೇವೆಯಲ್ಲಿ ತೊಡಗಿರುವುದರ ಬದಲು ನನ್ನ ಸೇವಯಲ್ಲಿಯೇ ಅವರು ನಿರತರಾಗಿರಬೇಕೆಂಬುದಾಗಿಯೂ ನಾನು ಮನಗಂಡೆನು ಈ ಕಾರಣ ನಾನು ಹಿಂದೂದೇಶದಲ್ಲಿದ್ದಾಗ ಇಪ್ಪತ್ತುನಾಲ್ಕು ತಾಸಿನಲ್ಲಿ ಐದು ಪದಾರ್ಥಗಳಿಗಿಂತ ಹೆಚ್ಚಾಗಿ ತಿನ್ನುವುದಿಲ್ಲವೆಂದೂ ರಾತ್ರಿಹೊತ್ತು

ಊಟ ಮಾಡುವುದಿಲ್ಲವೆಂದೂ ವ್ರತ ಹಿಡಿದೆನು. ಇದರಿಂದ ನನಗೆ ಉಂಟಾಗಬಹುದಾದ ಕಷ್ಟಗಳನ್ನು ಕುರಿತು ನಾನು ಪೂರ್ಣವಾಗಿ ಆಲೋಚಿಸಿದೆನು. ಆದರೆ ನಾನು ತಪ್ಪಿಸಿಕೊಳ್ಳಲು ಎಳ್ಳಷ್ಟೂ ಅವಕಾಶ ಬಿಡಕೂಡದೆಂದು ನನಗೆ ಇಚ್ಛೆಯಿದ್ದಿತು. ನಾನು ಕಾಹಿಲೆಬಿದ್ದಾಗ ಔಷಧವನ್ನೂ ಐದು ಪದಾರ್ಥಗಳಲ್ಲಿ ಎಣಿಸುವುದರ ಪರಿಣಾಮವನ್ನು ಚಿಂತಿಸಿದೆನು. ಪಥ್ಯವಾಗಿ ತೆಗೆದುಕೊಳ್ಳುವ ಪದಾರ್ಥಗಳೂ ಎಣಿಕೆಗೆ ಸೇರಬೇಕೆಂದು ನಿರ್ಧರಿಸಿದೆನು. ಕಡೆಗೆ ಯಾವ ಕಾರಣಕ್ಕೂ ಈ ಕಟ್ಟನ್ನು ಮೀರಕೂಡದೆಂದು ನಿಶ್ಚಯಿಸಿದೆನು.

ಈ ವ್ರತಗಳನ್ನು ನಡೆಸತೊಡಗಿ ಈಗ ಹದಿಮೂರು ವರುಷವಾಯಿತು. ಇವು ನನ್ನನ್ನು ಕಠಿಣಪರೀಕ್ಷೆಗೆ ಗುರಿಮಾಡಿವೆ. ಇವು ನನ್ನನ್ನು ರಕ್ಷಿಸಿಯೂ ಇವೆಯೆಂದು ಹೇಳಬಲ್ಲೆನು. ಇವುಗಳಿಂದ ನನ್ನ ಜೀವಮಾನವು ನಾಲ್ಕಾರು ವರ್ಷ ಹೆಚ್ಚಿದೆಯೆಂದೂ ಅನೇಕ ಜಾಡ್ಯಗಳು ದೂರವಾಗಿವೆಯೆಂದೂ ನನ್ನ ಅಭಿಪ್ರಾಯ.

---

# ೮

# ಲಕ್ಷ್ಮಣಸೇತು

ಗುರುಕುಲವನ್ನು ಸೇರಿ ಭೀಮಕಾಯರಾದ ಮಹಾತ್ಮಾ ಮುನ್ಷೀರಾಮ (ಸ್ವಾಮಿ ಶ್ರದ್ಧಾನಂದ) ರನ್ನು ನೋಡಿದಾಗ ನಾನು ಶಾಂತಚಿತ್ತನಾದೆನು. ಹರಿದ್ವಾರದ ಗಲಿಬಿಲಿಗೂ ಗುರುಕುಲದ ಶಾಂತಿಗೂ ಮಧ್ಯೆ ಇದ್ದ ಮಹದಂತರವು ನನಗೆ ಒಡನೆಯೇ ಹೊಳೆಯಿತು

ಮಹಾತ್ಮರು ನನ್ನನ್ನು ತಮ್ಮ ಪ್ರೇಮದಲ್ಲಿ ಮುಳುಗಿಸಿದರು. ಬ್ರಹ್ಮಚಾರಿಗಳು ನನ್ನ ಶುಶ್ರೂಷೆಯಲ್ಲಿ ನಿರತರಾದರು ಇಲ್ಲಿಯೇ ನನಗೆ ಮೊಟ್ಟಮೊದಲು ಆಚಾರ್ಯ ರಾಮದೇವಜಿಯವರ ಪರಿಚಯವಾದುದು. ಅವರು ಎಂತಹ ಮಹಾನುಭಾವರೆಂಬುದು ತಕ್ಷಣವೇ ನನ್ನ ಗೋಚರಕ್ಕೆ ಬಂದಿತು. ಕೆಲವು ವಿಷಯಗಳಲ್ಲಿ ನಾವು ಭಿನ್ನಮತವುಳ್ಳವರಾಗಿದ್ದರೂ ನಮ್ಮ ಸಂಬಂಧವು ಶೀಘ್ರದಲ್ಲಿಯೇ ಮೈತ್ರಿಯಾಗಿ ಬೆಳೆಯಿತು.

ಗುರುಕುಲದಲ್ಲಿ ಔದ್ಯೋಗಿಕ ಶಿಕ್ಷಣವನ್ನು ಆರಂಭಿಸುವ ವಿಚಾರವನ್ನು ಕುರಿತು ನಾನು ಆಚಾರ್ಯ ರಾಮದೇವಜಿಯವರೊಡನೆಯೂ ಇತರ ಅಧ್ಯಾಪಕರೊಡನೆಯೂ ದೀರ್ಘವಾಗಿ ಚರ್ಚಿಸಿದೆನು. ಅಲ್ಲಿಂದ ಹೊರಡಬೇಕಾದ ಸಮಯವೊದಗಿದಾಗ ನನಗೆ ದುಃಖವುಂಟಾಯಿತು.

ನಾನು ಲಕ್ಷ್ಮಣ ಝೂಲ(ಸೇತುವ)ದ ಪ್ರಶಂಸೆಯನ್ನು ಬಹುವಾಗಿ ಕೇಳಿದ್ದೆನು. ಇದು ಹೃಷೀಕೇಶಕ್ಕೆ ಸ್ವಲ್ಪದೂರದಲ್ಲಿರುವ ತೂಗುಸೇತುವೆಯಾಗಿದ್ದಿತು. ನಾನು ಈ ಸೇತುವೆಯನ್ನು ನೋಡದೆ ಹರಿದ್ವಾರದಿಂದ ಹಿಂತಿರುಗಕೂಡದೆಂದು ಬಹುಮಂದಿ ಮಿತ್ರರು ನನಗೆ ಆಗ್ರಹಪೂರ್ವಕವಾಗಿ ಹೇಳಿದರು. ನಾನು ಈ ಯಾತ್ರೆಯನ್ನು ಕಾಲುನಡೆಯಲ್ಲಿ ಮಾಡಲಿಚ್ಛಿಸಿ ಇದನ್ನು ಎರಡು ಪಯಣದಲ್ಲಿ ಮುಗಿಸಿದೆನು—ಹೃಷಿಕೇಶಕ್ಕೊಂದು, ಅಲ್ಲಿಂದ ಲಕ್ಷ್ಮಣಸೇತುವಿಗೊಂದು.

ಹೃಷೀಕೇಶದಲ್ಲಿ ಅನೇಕ ಸನ್ಯಾಸಿಗಳು ನನ್ನನ್ನು ನೋಡುವುದಕ್ಕೆ ಬಂದರು ಅವರಲ್ಲಿ ಒಬ್ಬರು ನನ್ನಿಂದ ವಿಶೇಷವಾಗಿ ಆಕರ್ಷಿತರಾದರು. ಫೀನಿಕ್ಸ್ ಪಂಗಡವು ಅಲ್ಲಿದ್ದಿತು. ಅದರ ವಿಷಯವಾಗಿ ಆ ಸ್ವಾಮಿಗಳು ಅನೇಕ ಪ್ರಶ್ನೆಗಳನ್ನು ಕೇಳಿದರು.

ನಮ್ಮ ಮಧ್ಯೆ ಧರ್ಮಸಂಬಂಧವಾಗಿ ಚರ್ಚೆಯಾಯಿತು. ಧಾರ್ಮಿಕ ವಿಷಯಗಳಲ್ಲಿ ನನಗೆ ಬಹು ಶ್ರದ್ಧೆಯಿದ್ದಿತೆಂಬುದು ಅವರಿಗೆ ಗೊತ್ತಾಯಿತು. ಗಂಗಾಸ್ನಾನಮಾಡಿ ತಲೆಯಮೇಲೂ ಬೆನ್ನಿನಮೇಲೂ ಏನೂ ಇಲ್ಲದೆ ನಾನು ಬರುತ್ತಿದ್ದುದನ್ನು ಅವರು ಕಂಡರು ನನ್ನ ತಲೆಯಲ್ಲಿ ಶಿಖೆ (ಜುಟ್ಟು) ಯೂ ಮೈಮೇಲೆ ಯಜ್ಞೋಪವೀತವೂ ಇಲ್ಲದುದನ್ನು ಕಂಡು ಅವರು ಖೇದಗೊಂಡು "ಆಸ್ತಿಕ ಹಿಂದುಗಳಾದ ನೀವು ಜುಟ್ಟು ಜನಿವಾರವಿಲ್ಲದೆ ಇರುವುದನ್ನು ನೋಡಿ ನನಗೆ ದುಃಖವಾಗುತ್ತದೆ. ಇವರಡೂ ಹಿಂದೂಧರ್ಮದ ಬಾಹ್ಯ ಚಿಹ್ನೆಗಳು ಪ್ರತಿಯೊಬ್ಬ ಹಿಂದುವೂ ಇವೆರಡನ್ನೂ ಇಟ್ಟುಕೊಂಡೇ ಇರಬೇಕು." ಎಂದು ಹೇಳಿದರು

ಇವೆರಡನ್ನೂ ನಾನು ಬಿಟ್ಟುಬಿಟ್ಟುದು ಒಂದು ಕತೆ. ನಾನು ಹತ್ತುವರ್ಷದ ಹುಡಗನಾಗಿದ್ದಾಗ ಪೋರಬಂದರದ ಬ್ರಾಹ್ಮಣ ಹುಡುಗರು ತಮ್ಮ ಜನಿವಾರಕ್ಕೆ ಬೀಗದಕೈಸರವನ್ನು ಹಾಕಿಕೊಂಡು 'ಝುಣ್' ಝುಣ್' ಎನಿಸುತ್ತಿದ್ದುದನ್ನು ನೋಡಿ ನನಗೂ ಹಾಗೆ ಮಾಡಲು ಆಸೆಯಾಯಿತು. ಆ ಕಾಲದಲ್ಲಿ ಕಾಠ್ಯವಾಡದ ವೈಶ್ಯರಲ್ಲಿ ಯಜ್ಞೋಪವೀತವನ್ನು ಧರಿಸುವ ವಾಡಿಕೆಯು ರೂಢಿಗೆ ಬಂದಿರಲಿಲ್ಲ. ಆದರೆ ಮೊದಲ ಮೂರು ವರ್ಣದವರು ಜನಿವಾರವನ್ನು ಹಾಕಿಕೊಳ್ಳಲೇಬೇಕೆಂಬ ಚಳವಳಿಯು ಆಗ ತಾನೆ ಆರಂಭವಾಗಿದ್ದಿತು. ಇದರ ಫಲವಾಗಿ ಗಾಂಧೀಮನೆತನಕ್ಕೆ ಸೇರಿದ ಕೆಲವರು ಯಜ್ಞೋಪವೀತವನ್ನು ಧರಿಸತೊಡಗಿದರು. ನಾವಿಬ್ಬರು ಮೂವರು ಹುಡುಗರಿಗೆ ರಾಮರಕ್ಷೆಯನ್ನು ಹೇಳಿಕೊಡುತ್ತಿದ್ದ ಬ್ರಾಹ್ಮಣರು ನಮಗೆ ಯಜ್ಞೋಪವೀತಧಾರಣೆಯನ್ನು ಮಾಡಿಸಿದರು. ನನಗೆ ಬೀಗದಕೈಸರದ ಅಗತ್ಯವೇನೂ ಇರದಿದ್ದರೂ ಒಂದನ್ನು ತೆಗೆದುಕೊಂಡು ಅದನ್ನು ಜನಿವಾರಕ್ಕೆ ಹಾಕಿ ಆಡಿಸತೊಡಗಿದೆನು. ಆಮೇಲೆ ಆ ಜನಿವಾರವು ಹರಿದುಹೋದಾಗ ನನಗೆ ಅದರ ಮೋಹವು ಇನ್ನೂ

ಕಳೆದಿದ್ದಿತೋ ಇಲ್ಲವೋ ನೆನಪಿಲ್ಲ; ಆದರೆನಾನು ಹೊಸ ಜನಿವಾರವನ್ನು ಹಾಕಿಕೊಳ್ಳಲಿಲ್ಲವೆಂದು ಗೊತ್ತು.

ನನಗೆ ವಯಸ್ಸು ಬಂದಮೇಲೆ ಪುನಃ ಜನಿವಾರವನ್ನು ತೊಡಿಸಲು ಹಿಂದೂಸ್ಥಾನದಲ್ಲೂ ದಕ್ಷಿಣ ಆಫ್ರಿಕದಲ್ಲೂ ಕೆಲವು ಸದುದ್ದೇಶಪೂರ್ವಕವಾದ ಪ್ರಯತ್ನಗಳು ನಡೆದುವು. ಆದರೆ ಅವು ಫಲಿಸಲಿಲ್ಲ. ಶೂದ್ರರು ಜನಿವಾರವನ್ನು ಧರಿಸಕೂಡದಾದರೆ ಇತರ ವರ್ಣಗಳಿಗೆ ಇರುವ ಅಧಿಕಾರವೇನು ಎಂದು ನಾನು ವಾದಿಸಿದೆನು ಮತ್ತು ನನಗೆ ಅನಾವಶ್ಯಕವಾಗಿ ತೋರಿದ ಪದ್ಧತಿಯನ್ನು ಅನುಸರಿಸಲು ಸಾಕಾದ ಯಾವ ಕಾರಣವೂ ನನಗೆ ಕಂಡುಬರಲಿಲ್ಲ. ಸುಮ್ಮನೆ ಬ್ರಹ್ಮೋಪವೀತವನ್ನು ಹಾಕಿಕೊಳ್ಳಲು ನನಗೆ ಅಡ್ಡಿಯಿರಲಿಲ್ಲ. ಆದರೆ ಅದನ್ನು ತೊಡಲು ಕಾರಣವೇ ಇರಲಿಲ್ಲ

ನಾನು ವೈಷ್ಣವನಾದುದರಿಂದ ಸಹಜವಾಗಿ ಕೊರಳಿನಲ್ಲಿ ಕಂಠಿಯನ್ನು ಧರಿಸಿದ್ದೆನು. ಶಿಖೆಯಂತೂ ಇರಲೇಬೇಕೆಂದು ನಮ್ಮ ಹಿರಿಯರು ಎಣಿಸಿದ್ದರು ಆದರೆ ನಾನು ಇಂಗ್ಲೆಂಡಿಗೆ ಹೊರಡಲಿರುವಾಗ ಜುಟ್ಟನ್ನು ತೆಗೆಸಿದೆನು—ತಲೆಯಮೇಲೆ ಏನೂ ಇಲ್ಲದಿದ್ದಾಗ ಇದು ಜನರ ಕಣ್ಣಿಗೆ ಬಿದ್ದು ನಾನು ನಗೆಗೀಡಾಗಿ ಆಂಗ್ಲರು ನನ್ನನ್ನು (ಆಗ ನನ್ನ ಎಣಿಕೆಯಂತೆ) ಅನಾಗರಿಕನೆಂದು ಎಲ್ಲಿ ಎಣಿಸುವರೋ ಎಂದು. ಅಷ್ಟೇಕೆ, ಈ ನನ್ನ ಹೇಡಿತನವು ಎಷ್ಟುದೂರ ಹೋಯಿತೆಂದರೆ, ಶ್ರದ್ಧಾಭಾವದಿಂದ ಶಿಖೆಯನ್ನು ಇಟ್ಟುಕೊಂಡಿದ್ದ ನಮ್ಮಣ್ಣನ ಮಕ್ಕಳಾದ ಛಗನಲಾಲ ಗಾಂಧಿಯವರು ತಮ್ಮ ಜುಟ್ಟನ್ನು ತೆಗೆಸುವಂತೆ ಮಾಡಿದೆನು. ಶಿಖೆಯನ್ನಿಟ್ಟುಕೊಂಡಿದ್ದರೆ ಅದು ಅವರ ಸಾರ್ವಜನಿಕ ಕಾರ್ಯಕ್ಕೆ ಅಡ್ಡಬರಬಹುದೆಂಬ ಹೆದರಿಕೆಯು ನನಗಿದ್ದುದರಿಂದ ಅವರ ಮನಸ್ಸಿಗೆ ಖೇದವಾದರೂ ಚಿಂತೆಯಿಲ್ಲವೆಂದೆಣಿಸಿ ಅವರು ಅದನ್ನು ತೆಗೆಸುವಂತೆ ಮಾಡಿದೆನು

ಆದುದರಿಂದ ನಾನು ಈ ಎಲ್ಲಾ ವಿಷಯವನ್ನೂ ಆ ಸ್ವಾಮಿಗಳಿಗೆ ತಿಳಿಸಿ " ನಾನು ಯಜ್ಞೋಪವೀತವನ್ನು ಧರಿಸುವುದಿಲ್ಲ. ಏಕೆಂದರೆ ಲೆಕ್ಕವಿಲ್ಲದಷ್ಟುಮಂದಿ ಹಿಂದುಗಳು ಅದನ್ನು ಹಾಕಿಕೊಳ್ಳದೆ ಇದ್ದರೂ ಹಿಂದುಗಳಾಗಿರುವಾಗ ನಾನು ಹಾಕಿಕೊಳ್ಳುವ ಅಗತ್ಯವೇನೂ ನನಗೆ ತೋರು

ವುದಿಲ್ಲ. ಅದೂ ಅಲ್ಲದೆ ಯಜ್ಞೋಪವೀತವು ಆಧ್ಯಾತ್ಮಿಕ ಪುನರ್ಜನ್ಮದ ಚಿಹ್ನೆಯಾಗಿರಬೇಕು. ಇಂತಹ ಪುನರ್ಜನ್ಮಕ್ಕೆ ಯಜ್ಞೋಪವೀತಧಾರಿಯು ಉಚ್ಚತರವಾದ ವಿಶುದ್ಧತರವಾದ ಜೀವನವನ್ನು ನಡೆಸಲು ಇಚ್ಛಾಪೂರ್ವಕವಾಗಿ ಯತ್ನವೆಸಗುವುದು ಆವಶ್ಯಕ ಭಾರತದೇಶದ ಮತ್ತು ಹಿಂದೂಧರ್ಮದ ಇಂದಿನ ಸ್ಥಿತಿಯಲ್ಲಿ ಹಿಂದುಗಳು ಇಂತಹ ಗೂಢಾರ್ಥವುಳ್ಳ ಜನಿವಾರವನ್ನು ಧರಿಸಲು ತಮ್ಮ ಅಧಿಕಾರವನ್ನು ಸಾರ್ಥಕಗೊಳಿಸುವುದು ನನಗೇನೋ ಸಂಶಯಾಸ್ಪದವಾಗಿದೆ. ಹಿಂದೂಧರ್ಮವು ಅಸ್ಪೃಶ್ಯತೆಯನ್ನು ನೀಗಿ ಉಚ್ಚನೀಚರೆಂಬ ಭೇದವೆಲ್ಲವನ್ನೂ ಕಳೆದು ಹೀಗೆಯೇ ಮೇರೆ ಮೀರಿ ಬೆಳೆದಿರುವ ಇತರ ಅನೇಕ ದೋಷಗಳನ್ನೂ ನಟನೆಗಳನ್ನೂ ತೊಲಗಿಸಿದ ಮೇಲೆಯೇ ಈ ಅಧಿಕಾರವನ್ನು ಸಂಪಾದಿಸಲು ಸಾಧ್ಯ. ಆದುದರಿಂದ ಜನಿವಾರವನ್ನು ತೊಡಲು ನನ್ನ ಮನಸ್ಸು ಒಪ್ಪುವುದಿಲ್ಲ. ಆದರೆ ತಾವು ಶಿಖಾಧಾರಣೆಯ ವಿಷಯದಲ್ಲಿ ಸೂಚಿಸಿರುದುದು ವಿಚಾರಯೋಗ್ಯವೆಂಬುದರಲ್ಲಿ ಸಂದೇಹವಿಲ್ಲ ಒಂದು ಕಾಲದಲ್ಲಿ ನಾನು ಶಿಖೆಯನ್ನು ಇಟ್ಟುಕೊಂಡಿದ್ದೆನು ಸುಳ್ಳು ನಾಚಿಕೆಯಿಂದ ಅದನ್ನು ತೆಗೆದುಬಿಟ್ಟೆನು. ಆದುದರಿಂದ ಅದನ್ನು ಪುನಃ ಬೆಳೆಸಬೇಕೆಂದು ನನಗೆ ತೋರುತ್ತದೆ ಈ ವಿಷಯವನ್ನು ನನ್ನ ಸಂಗಡಿಗರೊಡನೆ ಚರ್ಚಿಸುವೆನು.'' ಎಂದು ಹೇಳಿದೆನು

ಯಜ್ಞೋಪವೀತದ ವಿಷಯವಾಗಿ ನಾನು ಹೇಳಿದುದು ಸ್ವಾಮಿಗಳ ಒಪ್ಪಿಗೆಗೆ ಬರಲಿಲ್ಲ ಅದನ್ನು ಹಾಕಿಕೊಳ್ಳದಿರುವುದಕ್ಕೆ ಯಾವುವು ಕಾರಗಳೆಂದು ನನಗೆ ತೋರಿದುವೋ ಅವೇ ಅವರಿಗೆ ಹಾಕಿಕೊಳ್ಳುವುದರ ಆವಶ್ಯಕತೆಯನ್ನು ಸಿದ್ಧಗೊಳಿಸುವಂತೆ ಕಂಡುವು ಇಂದು ಕೂಡ ಈ ವಿಷಯದಲ್ಲಿ ನನ್ನ ಅಭಿಪ್ರಾಯವು ಹಚ್ಚುಕಡಮೆ ಹೃಷೀಕೇಶದಲ್ಲಿದ್ದಂತೆಯೇ 'ಇದೆ ಬೇರೆ ಬೇರೆ ಧರ್ಮಗಳಿರುವವರಗೂ ಪ್ರತಿಯೊಂದಕ್ಕೂ ಯಾವುದಾದರೊಂದು ಬಾಹ್ಯ ಚಿಹ್ನೆಯು ಬೇಕಾಗಿರಬಹುದು ಆದರೆ ಆ ಚಿಹ್ನೆಯನ್ನೇ ಆರಾಧ್ಯದೇವತೆಯೆಂದೆಣಿಸಿ ಅದರ ಮೂಲಕ ತನ್ನ ಧರ್ಮವು ಇತರ ಧರ್ಮಗಳಿಗಿಂತ ಶ್ರೇಷ್ಠವಾದುದೆಂದು ಪ್ರತಿಪಾದಿಸತೊಡಗಿದರೆ ಆಗ ಆ ಚಿಹ್ನೆಯನ್ನು ಬಿಸುಡಬೇಕು ಇಂದು ಯಜ್ಞೋಪವೀತವು

ಹಿಂದೂಧರ್ಮವನ್ನು ಉತ್ತಮಗೊಳಿಸುವ ಸಾಧನವಾಗಿ ನನಗೆ ತೋರುವುದಿಲ್ಲ. ಆದುದರಿಂದ ನಾನು ಆದರ ವಿಷಯದಲ್ಲಿ ತಟಸ್ಥನಾಗಿದ್ದೇನೆ.

ಆದರೆ ಜುಟ್ಟನ್ನು ತೆಗೆದುಹಾಕುವುದಕ್ಕೆ ನನ್ನ ನಾಚಿಕೆಯೇ ಕಾರಣವಾಗಿದ್ದುದರಿಂದ ಮಿತ್ರರ ಸಲಹೆಯನ್ನು ತೆಗೆದುಕೊಂಡಮೇಲೆ ಅದನ್ನು ಪುನಃ ಬೆಳೆಯಿಸಲು ನಿಶ್ಚಯಿಸಿದೆನು

ಹೃಷೀಕೇಶದ ಮತ್ತು ಲಕ್ಷ್ಮಣಸೇತುವಿನ ಸುತ್ತಮುತ್ತಲಿನ ಪ್ರಕೃತಿಸೌಂದರ್ಯವನ್ನು ನೋಡಿ ನಾನು ಮುಗ್ಧನಾದೆನು ನಮ್ಮ ಪೂರ್ವಿಕರ ಸೌಂದರ್ಯೋಪಾಸನೆಗೂ ಪ್ರಕೃತಿಯ ಸೊಬಗಿಗೆ ಧಾರ್ಮಿಕ ಭಾವವನ್ನಿತ್ತ ಅವರ ಪ್ರತಿಭೆಗೂ ನಾನು ಭಕ್ತಿಯಿಂದ ಮಣಿದೆನು.

ಆದರೆ ಈ ಸುಂದರಸನ್ನಿವೇಶಗಳನ್ನು ಜನರು ಉಪಯೋಗಿಸುತ್ತಿದ್ದ ರೀತಿಯನ್ನು ಕಂಡು ನನಗೆ ಸಂಕಟವಾಯಿತು. ಹರಿದ್ವಾರದಂತೆಯೇ ಹೃಷೀಕೇಶದಲ್ಲಿಯೂ ಜನರು ಬೀದಿಗಳನ್ನೂ ಗಂಗಾನದಿಯ ದಡವನ್ನೂ ಹೊಲಸುಮಾಡುತ್ತಿದ್ದರು ಗಂಗೆಯ ಪವಿತ್ರಜಲವನ್ನು ಕೆಡಿಸುವುದಕ್ಕೆ ಕೂಡ ಅವರು ಹೇಸುತ್ತಿರಲಿಲ್ಲ. ಜನರು ಓಡಾಡುವ ಸ್ಥಳವನ್ನು ಬಿಟ್ಟು ಸ್ವಲ್ಪ ದೂರಹೋಗಲು ಕಷ್ಟವೇನೂ ಆಗುತ್ತಿರಲಿಲ್ಲವಾದರೂ ಬೀದಿಗಳಲ್ಲೂ ನದಿಯ ದಡದಲ್ಲೂ ಜನರು ಮಲಮೂತ್ರವಿಸರ್ಜನೆಯನ್ನು ಮಾಡುವುದನ್ನು ಕಂಡು ನನ್ನ ಹೃದಯವು ಖೇದದಿಂದ ತಲ್ಲಣಿಸಿತು.

ಲಕ್ಷ್ಮಣಸೇತುವೆಂದರೆ ಗಂಗಾನದಿಯ ಮೇಲೆ ಕಟ್ಟಿದ್ದ ಕಬ್ಬಿಣದ ತೂಗುಸೇತುವೆಯಲ್ಲದೆ ಬೇರೆ ಏನೂ ಅಲ್ಲವೆಂಬುದನ್ನು ಕಂಡೆನು ಮೊದಲು ಅಲ್ಲಿ ಸೊಗಸಾದ ಹಗ್ಗದ ಸೇತುವೆಯೊಂದಿದ್ದಿತೆಂದು ನನಗೆ ಹೇಳಿದರು. ಉದಾರಬುದ್ಧಿಯ ಮಾರ್ವಾಡಿಯೊಬ್ಬನು ಈ ಹಗ್ಗದ ಸೇತುವೆಯನ್ನು ಕೀಳಿಸಿ ಹೆಚ್ಚು ಹಣವನ್ನು ವೆಚ್ಚಮಾಡಿ ಕಬ್ಬಿಣದ ಸೇತುವೆಯನ್ನು ಕಟ್ಟಿಸಿ ಬೀಗದ ಕೈಯನ್ನು ಸರಕಾರದ ವಶಕ್ಕೆ ಕೊಟ್ಟನಂತೆ! ಹಗ್ಗದ ಸೇತುವೆಯನ್ನು ನಾನು ನೋಡಿಯೇ ಇರಲಿಲ್ಲವಾದುದರಿಂದ ಅದರ ವಿಷಯವಾಗಿ ಏನೂ ಹೇಳಲಾರೆನು ಆದರೆ ಆ ಕಬ್ಬಿಣದ ಸೇತುವೆಯು ಅಂತಹ ಸನ್ನಿವೇಶದಲ್ಲಿ ಕೇವಲ ಅನುಚಿತವಾಗಿದ್ದು ಅಲ್ಲಿಯ ಸೊಬಗನ್ನು

ಹಾಳುಮಾಡುತ್ತದೆ ಈ ಯಾತ್ರಿಕರ ಸೇತುವೆಯ ಬೀಗದ ಕೈಯನ್ನು ಸರಕಾರದ ವಶಕ್ಕೆ ಕೊಟ್ಟುದು ನನ್ನ ಆಗಿನ ರಾಜನಿಷ್ಠೆಯ ಸಹನೆಯನ್ನು ಕೂಡ ಮೀರಿದ್ದಿತು

ಸೇತುವೆಯನ್ನು ದಾಟಿದಮೇಲೆ ಸಿಕ್ಕುವ 'ಸ್ವರ್ಗಾಶ್ರಮ' ವು ಶೋಚನೀಯವಾದ ಸ್ಥಿತಿಯಲ್ಲಿದ್ದಿತು. ಕೆಲವು ಹರಕುಮುರಕು ತಗಡಿನ ಗುಡಿಸಲುಗಳನ್ನು ಬಿಟ್ಟರೆ ಅಲ್ಲಿ ಇನ್ನೇನೂ ಇರಲಿಲ್ಲ. ಇವುಗಳನ್ನು ಸಾಧಕರಿಗಾಗಿ ಕಟ್ಟಿದ್ದರೆಂದು ನಾನು ಕೇಳಿದೆನು. ಆಗ ಅಲ್ಲಿ ಹೆಚ್ಚು ಜನ ಸಾಧಕರು ಇರಲಿಲ್ಲ ಮುಖ್ಯ ಕಟ್ಟಡದಲ್ಲಿದ್ದ ಒಬ್ಬಿಬ್ಬರನ್ನು ನೋಡಿ ನನಗೇನೂ ಸಂತೋಷವಾಗಲಿಲ್ಲ

ಆದರೆ ಹರಿದ್ವಾರದಲ್ಲಿ ನನಗುಂಟಾದ ಅನುಭವಗಳು ಅಮೂಲ್ಯವಾಗಿ ಪರಿಣಮಿಸಿದುವು ನಾನು ಎಲ್ಲಿರಬೇಕು, ಏನುಮಾಡಬೇಕು, ಎಂಬುದನ್ನು ನಿರ್ಧರಿಸಲು ನನಗ ಅವುಗಳಿಂದ ಬಹು ಸಹಾಯವಾಯಿತು.



೬

# ಆಶ್ರಮ ಸ್ಥಾಪನೆ

ಕುಂಭಮೇಳಕ್ಕೆ ಹೋಗುವುದಕ್ಕಿಂತ ಮುಂಚೆ ನಾನು ಇನ್ನೊಮ್ಮೆ ಹರಿದ್ವಾರಕ್ಕೆ ಹೋಗಿದ್ದೆನು

ಸತ್ಯಾಗ್ರಹಾಶ್ರಮವು ೧೯೧೫ನೆಯ ಇಸವಿ ಮೇ ೨೫ರಲ್ಲಿ ಸ್ಥಾಪಿತವಾಯಿತು ನಾನು ಹರಿದ್ವಾರದಲ್ಲಿ ನೆಲೆಸಬೇಕೆಂದು ಶ್ರದ್ಧಾನಂದಜಿಯವರಿಗೆ ಇಷ್ಟವಿದ್ದಿತು ಕಲ್ಕತ್ತೆಯಲ್ಲಿದ್ದ ನನ್ನ ಮಿತ್ರರಲ್ಲಿ ಕೆಲವರು ನಾನು ವೈದ್ಯನಾಥ ಧಾಮದಲ್ಲಿ ನಿಲ್ಲಬೇಕೆಂದು ಸೂಚಿಸಿದರು ನಾನು ರಾಜಕೋಟೆಯನ್ನು ಆರಿಸಬೇಕೆಂದು ಇತರರು ಆಗ್ರಹಪೂರ್ವಕವಾಗಿ ಸಲಹೆ ಕೊಟ್ಟರು. ಆದರೆ ನಾನು ಅಹಮದಾಬಾದಿನ ಮೇಲೆ ಪ್ರಯಾಣ ಮಾಡುತ್ತಿದ್ದಾಗ ಅನೇಕ ಮಿತ್ರರು ನಾನು ಅಲ್ಲಿಯೇ ನೆಲಸಬೇಕೆಂದು ಒತ್ತಾಯ ಮಾಡಿ ಆಶ್ರಮದ ವೆಚ್ಚವನ್ನು ತಾವು ಕೂಡಿಸಿಕೊಡುವುದಲ್ಲದೆ ಇರಲು ಮನೆಯನ್ನೂ ಕೊಡಿಸುವೆವೆಂದು ಹೇಳಿದರು

ನನಗೂ ಅಹಮದಾಬಾದಿನ ಮೇಲೆಯೇ ಇಷ್ಟವಿದ್ದಿತು. ನಾನು ಗುಜರಾತಿಯಾದುದರಿಂದ ಗುಜರಾತಿ ಭಾಷೆಯ ಮೂಲಕವೇ ದೇಶಕ್ಕೆ ಹೆಚ್ಚು ಸೇವೆಯನ್ನು ಮಾಡಲು ನನಗೆ ಸಾಧ್ಯವೆಂದು ನಾನು ಎಣಿಸಿದ್ದೆನು. ಇದಲ್ಲದೆ ಅಹಮದಾಬಾದು ಕೈಮಗ್ಗದ ಕೈಗಾರಿಕೆಯ ಪುರಾತನ ಕೇಂದ್ರವಾದುದರಿಂದ ಮನೆಕೈಗಾರಿಕೆಯ ಮತ್ತು ಕೈನೂಲಿಗೆಯ ಪುನರುಜ್ಜೀವನಕ್ಕೆ ಅದೇ ಅತ್ಯನುಕೂಲವಾದ ಕ್ಷೇತ್ರವಾಗಬಹುದೆಂಬ ನಿರೀಕ್ಷಣೆಯಿದ್ದಿತು. ಇದೂ ಅಲ್ಲದೆ ಆ ಪಟ್ಟಣವು ಗುಜರಾತಿನ ರಾಜಧಾನಿಯಾದುದರಿಂದ ಧನಿಕ ಪ್ರಜೆಗಳ ಸಹಾಯವು ಇತರ ಸ್ಥಳಗಳಿಗಿಂತ ಇಲ್ಲಿ ಹೆಚ್ಚಾಗಿ ದೊರಕುವುದೆಂಬ ಆಸೆಯಿದ್ದಿತು.

ಅಹಮದಾಬಾದಿನ ಮಿತ್ರರೊಡನೆ ಚರ್ಚಿಸಿದ ವಿಷಯಗಳಲ್ಲಿ ಅಸ್ಪೃಶ್ಯತೆಯೂ ಸಹಜವಾಗಿ ಬಂದಾಗಿದ್ದಿತು ಅವಕಾಶ ದೊರತೊಡನೆಯೇ ಯಾವನಾದರೂ ಯೋಗ್ಯನಾದ ಅಂತ್ಯಜನನ್ನು ಆಶ್ರಮಕ್ಕೆ ಸೇರಿಸುವನೆಂದು ಅವರಿಗೆ ಸ್ಪಷ್ಟವಾಗಿ ತಿಳಿಸಿದೆನು

"ನಿಮ್ಮ ನಿಯಮಗಳನ್ನು ಪಾಲಿಸುವ ಅಂತ್ಯಜನು ದೊರೆಯುವುದೆಲ್ಲಿ?" ಎಂದೊಬ್ಬರು ವೈಷ್ಣವ ಮಿತ್ರರು ಆತ್ಮವಿಶ್ವಾಸದಿಂದ ಕೇಳಿದರು.

ಕಟ್ಟಕಡೆಗೆ ನಾನು ಆಶ್ರಮವನ್ನು ಅಹಮದಾಬಾದಿನಲ್ಲಿ ಸ್ಥಾಪಿಸಲು ನಿಶ್ಚಯಿಸಿದೆನು.

ವಾಸಸ್ಥಳವು ದೊರಕುವ ವಿಷಯದಲ್ಲಿ ಅಹಮದಾಬಾದಿನಲ್ಲಿದ್ದ ಬ್ಯಾರಿಸ್ಟರರಾದ ಶ್ರೀ. ಜೀವನಲಾಲ ಮಹತಾರವರು ಎಲ್ಲರಿಗಿಂತಲೂ ಹೆಚ್ಚಾಗಿ ನೆರವಿತ್ತರು. ಅವರು ಕೋಚರಬಿ (ಅಹಮದಾಬಾದಿನ ಒಂದು ಭಾಗ)ನಲ್ಲಿದ್ದ ತಮ್ಮ ಬಂಗಲೆಯನ್ನು ಬಾಡಿಗೆಗೆ ಕೊಡಲು ಒಪ್ಪಿದರು. ನಾವು ಅದನ್ನು ತೆಗೆದುಕೊಳ್ಳಲು ನಿಶ್ಚಯಿಸಿದೆವು

ನಾವು ಮೊಟ್ಟಮೊದಲು ನಿರ್ಧರಿಸಬೇಕಾದ ವಿಷಯವು ಆಶ್ರಮಕ್ಕೆ ಇಡಬೇಕಾದ ಹೆಸರಾಗಿದ್ದಿತು. ನಾನು ನನ್ನ ಮಿತ್ರರ ಸಲಹೆಯನ್ನು ಕೇಳಿದೆನು ಅವರು ಸೂಚಿಸಿದ ಹೆಸರುಗಳಲ್ಲಿ 'ಸೇವಾಶ್ರಮ', 'ತಪೋವನ' ಮುಂತಾದುವು ಇದ್ದುವು 'ಸೇವಾಶ್ರಮ' ಎಂಬ ಹೆಸರೇನೋ ನನ್ನ ಇಷ್ಟಕ್ಕೆ ಬಂದಿತು ಆದರೆ ಅದರಿಂದ ಯಾವ ವಿಧದ ಸೇವೆಯೆಂಬುದು ಸ್ಪಷ್ಟವಾಗುತ್ತಿರಲಿಲ್ಲ 'ತಪೋವನ' ಎಂಬ ಹೆಸರು ಆಡಂಬರವುಳ್ಳದಾಗಿ ತೋರಿತು ಏಕೆಂದರೆ ತಪಸ್ಸು ನಮಗೆ ಪ್ರಿಯವಾಗಿದ್ದರೂ ನಾವು ತಪಸ್ವಿಗಳೆಂದು ಹೇಳಿಕೊಳ್ಳುವಂತಿರಲಿಲ್ಲ ಸತ್ಯೋಪಾಸನೆಯೇ ನಮ್ಮ ಮತವಾಗಿದ್ದಿತು. ಸತ್ಯಶೋಧನೆಯೂ ಸತ್ಯಸಾಧನೆಯೂ ನಮ್ಮ ಉದ್ಯೋಗವಾಗಿದ್ದಿತು. ದಕ್ಷಿಣ ಆಫ್ರಿಕದಲ್ಲಿ ನಾನು ಪ್ರಯೋಗಿಸಿದ ಪದ್ಧತಿಯನ್ನು ಭರತಖಂಡಕ್ಕೆ ಪರಿಚಯಮಾಡಿಕೊಡಲೆಳಸಿದೆನು. ಅದನ್ನು ನಡೆಸುವುದು ಎಷ್ಟು ದೂರ ಸಾಧ್ಯವೆಂಬುದನ್ನು ಭರತಖಂಡದಲ್ಲಿ ಪರೀಕ್ಷಿಸಬೇಕೆಂಬ ಇಚ್ಛೆಯು ನಮಗಿದ್ದಿತು. ಆದುದರಿಂದ ನನ್ನ ಸಂಗಡಿಗರೂ ನಾನೂ 'ಸತ್ಯಾಗ್ರಹಾಶ್ರಮ' ಎಂಬ

ಹೆಸರನ್ನು ಆರಿಸಿದೆವು. ಏಕೆಂದರೆ ಆ ಪದದಲ್ಲಿ ನಮ್ಮ ಧ್ಯೇಯವೂ ಸೇವಾ ಪದ್ಧತಿಯೂ ಅಡಕವಾಗಿದ್ದುವು.

ಆಶ್ರಮದ ಆಡಳಿತಕ್ಕೆ ನಿಯಮನಿಬಂಧಾವಳಿಯೊಂದು ಅವಶ್ಯಕವಾಗಿದ್ದಿತು. ಆದುದರಿಂದ ಅವುಗಳನ್ನು ಸಿದ್ಧಪಡಿಸಿ ಮಿತ್ರರ ಅಭಿಪ್ರಾಯಕ್ಕಾಗಿ ಕಳುಹಿಸಿಕೊಟ್ಟುದಾಯಿತು. ನನಗೆ ತಲುಪಿದ ಅನೇಕ ಅಭಿಪ್ರಾಯಗಳಲ್ಲಿ ಸರ್ ಗುರುದಾಸ ಬನರ್ಜಿಯವರು ಕೊಟ್ಟುದು ಇನ್ನೂ ನನ್ನ ನೆನಪಿನಲ್ಲಿದೆ. ಅವರು ನಿಯಮಗಳನ್ನೇನೋ ಒಪ್ಪಿದರು. ಆದರೆ ವ್ರತಗಳಲ್ಲಿ ನಮ್ರತೆಗೂ ಸ್ಥಾನ ಕೊಡಬೇಕೆಂದು ಸೂಚಿಸಿದರು. ಏಕೆಂದರೆ ಅಂದಿನ ಕಿರಿಯರಲ್ಲಿ ನಮ್ರತೆಯು ಇರಲೇ ಇಲ್ಲವೆಂದು ಅವರು ತಿಳಿದುಕೊಂಡಿದ್ದರು. ಈ ಕುಂದು ನನ್ನ ಗೋಚರಕ್ಕೆ ಬಂದಿದ್ದಿತಾದರೂ ನಮ್ರತೆಯನ್ನು ಒಂದು ವ್ರತವಾಗಿ ಮಾಡಿದರೆ ಅದು ನಮ್ರತೆಯಾಗಿ ನಿಲ್ಲದೆಂದು ನಾನು ಶಂಕಿಸಿದೆನು. ನಮ್ರತೆಯ ನಿಜವಾದ ಅರ್ಥವೇನೆಂದರೆ ನಿರಹಂಕಾರ. ಅಹಂಕಾರನಾಶವೆಂದರೆ ಮೋಕ್ಷ. ಮೋಕ್ಷವೇ ಒಂದು ವ್ರತವಾಗಿರಲು ಸಾಧ್ಯವಲ್ಲ. ಆದರೆ ಅದರ ಸಾಧನೆಗಾಗಿ ಇತರ ವ್ರತಗಳು ಅವಶ್ಯಕವಿರಬಹುದು. ಮುಮುಕ್ಷುವಿನ ಅಥವಾ ಸೇವಕನ ಕಾರ್ಯಗಳಲ್ಲಿ ನಮ್ರತೆಯು ಅಥವಾ ನಿರಭಿಮಾನವು ಇರದಿದ್ದರೆ ಅವನಿಗೆ ಮೋಕ್ಷದ ಆಸೆಯಿಲ್ಲ, ಸೇವೆ ಮಾಡಬೇಕೆಂಬ ಇಚ್ಛೆಯಿಲ್ಲ. ನಮ್ರತೆಯಿಲ್ಲದ ಸೇವೆಯು ಸ್ವಾರ್ಥಪರತೆ, ಅಹಂಕಾರ.

ಈ ಸಮಯದಲ್ಲಿ ನಮ್ಮ ಪಂಗಡದಲ್ಲಿ ಹದಿಮೂರು ಜನ ತಮಿಳರಿದ್ದರು. ಐದುಮಂದಿ ತಮಿಳ ಹುಡುಗರು ದಕ್ಷಿಣ ಆಫ್ರಿಕದಿಂದ ನನ್ನೊಡನೆ ಬಂದಿದ್ದರು. ಮಿಕ್ಕವರು ನಾಡಿನ ಬೇರೆ ಬೇರೆ ಕಡೆಯಿಂದ ಬಂದು ಸೇರಿದ್ದರು. ಒಟ್ಟು ನಾವು, ಗಂಡಸರೂ ಹೆಂಗಸರೂ, ಸುಮಾರು ಇಪ್ಪತ್ತೈದು ಮಂದಿ ಇದ್ದೆವು.

ಆಶ್ರಮಸ್ಥಾಪನೆಯಾದುದು ಇಂತು. ಎಲ್ಲರೂ ಒಂದೇ ಅಡಿಗೆ ಮನೆಯಲ್ಲಿ ಊಟಮಾಡುತ್ತಿದ್ದೆವು. ಎಲ್ಲರೂ ಒಂದು ಕುಟುಂಬದಂತಿರಲು ಯತ್ನಿಸುತ್ತಿದ್ದೆವು.

# ೧೦

# ಒರೆಗಲ್ಲು

ಆಶ್ರಮವು ಸ್ಥಾಪಿತವಾದ ಕೆಲವು ತಿಂಗಳು ಕಳೆಯುವುದರೊಳಗಾಗಿಯೇ ನಮಗೊಂದು ಪರೀಕ್ಷೆಯೊದಗಿತು. ಈ ತೆರನಾದ ಪರೀಕ್ಷೆಯನ್ನು ನಾನು ನಿರೀಕ್ಷಿಸಿಯೇ ಇರಲಿಲ್ಲ. ಶ್ರೀ ಅಮೃತಲಾಲ ಠಕ್ಕರರಿಂದ "ಬಡವರಾದ ಪ್ರಾಮಾಣಿಕರಾದ ಅಸ್ಪೃಶ್ಯರ ಕುಟುಂಬವೊಂದು ಆಶ್ರಮವನ್ನು ಸೇರಲೆಳಸುತ್ತದೆ. ಅವರನ್ನು ಸೇರಿಸುವಿರಾ?" ಎಂಬದಾಗಿ ಪತ್ರ ಬಂದಿತು.

ನನಗೆ ಗಾಬರಿಯಾಯಿತು. ಅಂತ್ಯಜರ ಕುಟುಂಬವೊಂದು—ಅದರಲ್ಲೂ 'ಠಕ್ಕರ್‌ಬಾಪಾ' ರವರಂತಹರ ಮಧ್ಯಸ್ಥಿಕೆಯಿಂದ—ಆಶ್ರಮವನ್ನು ಸೇರಲು ಅಷ್ಟು ಬೇಗ ಬರುವುದೆಂದು ನಾನು ಎಣಿಸಿಯೇ ಇರಲಿಲ್ಲ. ಪತ್ರವನ್ನು ನನ್ನ ಸಂಗಡಿಗರಿಗೆಲ್ಲಾ ಓದಿದೆನು. ಅವರು ಅದರಲ್ಲಿನ ಬಿನ್ನಹಕ್ಕೆ ಆದರದಿಂದ ಸಮ್ಮತಿಸಿದರು.

ಆ ಕುಟುಂಬದವರೆಲ್ಲರೂ ಆಶ್ರಮದ ನಿಯಮಗಳನ್ನು ಪಾಲಿಸಲು ಸಿದ್ಧರಾಗಿದ್ದರೆ ಅವರನ್ನು ಸೇರಿಸಿಕೊಳ್ಳಲು ನಮ್ಮ ಒಪ್ಪಿಗೆಯನ್ನು ವ್ಯಕ್ತಪಡಿಸಿ ನಾನು ಶ್ರೀ ಅಮೃತಲಾಲ ಠಕ್ಕರರಿಗೆ ಕಾಗದ ಬರೆದೆನು.

ದುಧಾಭಾಯೀ, ಅವರ ಹೆಂಡತಿಯಾದ ದಾನೀಬಹೆನ್ ಮತ್ತು ಆಗತಾನೆ ಓಡಾಡುವುದನ್ನು ಕಲಿತಿದ್ದ ಅವರ ಮಗು ಲಕ್ಷ್ಮೀ—ಇವರೇ ಈ ಕುಟುಂಬಕ್ಕೆ ಸೇರಿದವರು. ದುಧಾಭಾಯಿಯು ಇದಕ್ಕೆ ಮುಂಚೆ ಮುಂಬಯಿಯಲ್ಲಿ ಉಪಾಧ್ಯಾಯರಾಗಿದ್ದರು. ಅವರೆಲ್ಲರೂ ಆಶ್ರಮದ ನಿಯಮಗಳಂತೆ ನಡೆಯಲು ಒಪ್ಪಿದರು. ಅವರನ್ನು ಸೇರಿಸಿಕೊಂಡುದಾಯಿತು.

ಆದರೆ ಅವರನ್ನು ಸ್ವೀಕರಿಸಿದುದರಿಂದ ಆಶ್ರಮಕ್ಕೆ ನೆರವೀಯುತ್ತಿದ್ದ ಮಿತ್ರರಲ್ಲಿ ಗಲಿಬಿಲಿಗೆ ಪ್ರಾರಂಭವಾಯಿತು ಬಾವಿಯ ಉಪಯೋಗದ ವಿಚಾರವಾಗಿಯೇ ಮೊಟ್ಟಮೊದಲು ಕಷ್ಟವೊದಗಿತು. ಈ ಬಾವಿಯು ಬಂಗಲೆಯ ಯಜಮಾನರ ಸ್ವಾಧೀನದಲ್ಲಿಯೂ ಇದ್ದಿತು. ನಮ್ಮ ಕೊಡದ ನೀರು ತೊಟ್ಟಿಕ್ಕುವುದರಿಂದ ತನಗೆ ಮೈಲಿಗೆಯಾಗುವುದೆಂದು ಕಪಿಲೆಯ ಆಳು ಆಕ್ಷೇಪಣೆ ತೆಗೆದನು ಆದುದರಿಂದ ಅವನು ನಮ್ಮನ್ನು ಬೈಯುವುದಕ್ಕೂ ದುಧಾಭಾಯಿಯನ್ನು ಪೀಡಿಸುವುದಕ್ಕೂ ಮೊದಲು ಮಾಡಿದನು. ಬೈಗಳನ್ನು ಸಹಿಸಕೊಂಡಿರಬೇಕೆಂದೂ ನೀರು ಸೇದುವುದನ್ನು ಏನೇ ಆಗಲಿ ಬಿಡಕೂಡದೆಂದೂ ನಾನು ಪ್ರತಿಯೊಬ್ಬರಿಗೂ ಹೇಳಿದೆನು. ನಾವು ಬೈಗಳನ್ನು ಕೇಳಿ ಸುಮ್ಮನಿದ್ದುದನ್ನು ನೋಡಿ ಅವನು ನಾಚಿಕೆಗೊಂಡು ನಮ್ಮ ತಂಟೆಗೆ ಬರುವುದನ್ನು ಬಿಟ್ಟನು

ಆದರೆ ಧನಸಹಾಯವಷ್ಟೂ ನಿಂತುಹೋಯಿತು ಆಶ್ರಮದ ನಿಬಂಧನೆಗಳನ್ನನುಸರಿಸಲು ಯೋಗ್ಯನಾದ ಅಸ್ಪೃಶ್ಯನ ವಿಚಾರವಾಗಿ ಪ್ರಶ್ನೆ ಮಾಡಿದ ಮಿತ್ರರು ಅಂತಹರಾರೂ ಬರುವರೆಂದು ನಿರೀಕ್ಷಿಸಿರಲಿಲ್ಲ.

ಹಣದ ಒತ್ತಾಸೆಯು ನಿಲ್ಲುತ್ತಲೇ ನಮಗೆ ಬಹಿಷ್ಕಾರ ಹಾಕುವ ವದಂತಿಯೂ ಕೇಳಬಂದಿತು ನಾವು ಇದೆಲ್ಲಕ್ಕೂ ಸಿದ್ಧರಾಗಿದ್ದೆವು. ನಮಗೆ ಬಹಿಷ್ಕಾರ ಹಾಕಿ ಸಾಮಾನ್ಯಸೌಕರ್ಯಗಳನ್ನು ತಪ್ಪಿಸಿದರೂ ನಾವು ಅಹಮದಾಬಾದನ್ನು ಬಿಡುವುದಿಲ್ಲವೆಂದೂ ಹಾಗೆ ಮಾಡುವುದಕ್ಕೆ ಪ್ರತಿಯಾಗಿ ನಾವು ಹೊಲೆಗೇರಿಗೆ ಹೋಗಿ ಮೈದುಡಿತದಿಂದ ಬಂದ ಅಷ್ಟು ಇಷ್ಟರಲ್ಲಿಯೇ ಜೀವನ ನಡೆಸುವೆವೆಂದೂ ನಾನು ನನ್ನ ಸಂಗಡಿಗರಿಗೆ ಹೇಳಿದ್ದೆನು.

ನಮ್ಮ ಪರಿಸ್ಥಿತಿಯು ಎಷ್ಟಕ್ಕೆ ಬಂದಿತೆಂದರೆ ಒಂದು ದಿನ ಮಗನಲಾಲ ಗಾಂಧಿಯವರು "ಮುಂದಿನ ತಿಂಗಳ ವೆಚ್ಚಕ್ಕೆ ನಮ್ಮ ಬಳಿ ಹಣವಿಲ್ಲ." ಎಂದು ಹೇಳಿದರು

ನಾನು ಸಮಾಧಾನವಾಗಿ "ಹಾಗಾದರೆ ನಾವು ಹೊಲೆಗೇರಿಗೆ ಹೋಗೋಣ" ಎಂದನು

ಈ ರೀತಿಯ ಪರೀಕ್ಷೆಗೆ ಸಿಕ್ಕಲು ಇದೇ ನನಗೆ ಮೊದಲನೆಯ ಸಲವಾಗಿರಲಿಲ್ಲ. ಇಂತಹ ಸಂದರ್ಭಗಳಲ್ಲೆಲ್ಲಾ ದೇವರು ನನಗೆ ಕಡೆಯ ಘಳಿಗೆಯಲ್ಲಿ ಸಹಾಯವನ್ನು ಕಳುಹಿಸಿದ್ದಾನೆ. ಮಗನಲಾಲರು ನಮ್ಮ ಬೊಕ್ಕಸವು ಬರಿದಾಗಿದೆಯೆಂದು ಎಚ್ಚರಿಕೆಕೊಟ್ಟ ಕೆಲವು ದಿನದಮೇಲೆ ಒಂದು ದಿವಸ ಬೆಳಿಗ್ಗೆ ಒಬ್ಬ ಹುಡುಗನು ನನ್ನಬಳಿಗೆ ಬಂದು ಯಾರೋ ಸೇಠರೊಬ್ಬರು ಹೊರಗಡೆ ಮೋಟಾರ್ ಗಾಡಿಯಲ್ಲಿ ನನಗಾಗಿ ಕಾದಿರುವರೆಂದು ಹೇಳಿದನು. ನಾನು ಅವರನ್ನು ನೋಡಲು ಹೋದೆನು. "ನಾನು ಆಶ್ರಮಕ್ಕೆ ಸ್ವಲ್ಪ ಸಹಾಯವನ್ನೀಯಲು ಇಚ್ಛಿಸುತ್ತೇನೆ ಅದನ್ನು ನೀವು ಸ್ವೀಕರಿಸುವಿರಾ?" ಎಂದು ಅವರು ಕೇಳಿದರು.

"ಅಗತ್ಯವಾಗಿ. ಮತ್ತು ಈಗ ನನಗೆ ಹಣದ ಅಭಾವದಿಂದ ದಾರಿಯೇ ತೋರದಂತಾಗಿದೆಯೆಂದು ಒಪ್ಪಿಕೊಳ್ಳಬೇಕು." ಎಂದೆನು ನಾನು.

ಅವರು "ನಾಳೆ ಬೆಳಿಗ್ಗೆ ಇಷ್ಟುಹೊತ್ತಿಗೆ ಇಲ್ಲಿಗೆ ಬರುತ್ತೇನೆ ನೀವು ಇಲ್ಲಿ ಇರುವಿರಾ?" ಎಂದು ಕೇಳಿದರು

"ಆಗಲಿ." ಎಂದು ನಾನು ಹೇಳಲು ಅವರು ಹೊರಟುಹೋದರು.

ಮರುದಿನ ಗೊತ್ತಾದ ಹೊತ್ತಿಗೆ ಸರಿಯಾಗಿ ಗಾಡಿಯು ಆಶ್ರಮದ ಬಳಿ ಬಂದು ನಿಂತಿತು. ಗಾಡಿಯ ಕೊಂಬಿನ ಸದ್ದಾಯಿತು. ಹುಡುಗರು ಈ ಸುದ್ದಿಯೊಡನೆ ನನ್ನಬಳಿಗೆ ಬಂದರು. ಸೇಠರು ಒಳಕ್ಕೆ ಬರಲಿಲ್ಲ. ನಾನೇ ಹೋಗಿ ಅವರನ್ನು ಕಂಡೆನು ಅವರು ಹದಿಮೂರು ಸಾವಿರ ರೂಪಾಯಿನ ನೋಟುಗಳನ್ನು ನನ್ನಕೈಯಲ್ಲಿಟ್ಟು ಹೊರಟು ಹೋದರು.

ನಾನು ಈ ಒತ್ತಾಸೆಯೊದಗುವುದನ್ನು ನಿರೀಕ್ಷಿಸಿಯೇ ಇರಲಿಲ್ಲ. ಮತ್ತು ಸಹಾಯಮಾಡುವ ರೀತಿಯೊ! ಆ ಸದ್ಗೃಹಸ್ಥರು ಇದಕ್ಕೆ ಮುಂಚೆ ಆಶ್ರಮದಲ್ಲಿ ಹೆಜ್ಜೆಯನ್ನೇ ಇಟ್ಟಿರಲಿಲ್ಲ ನನಗೆ ನೆನಪಿರುವ ಮಟ್ಟಿಗೆ ನಾನು ಅವರನ್ನು ಒಂದು ಬಾರಿ ಮಾತ್ರ ನೋಡಿದ್ದೆನು ಆಶ್ರಮವನ್ನು ನೋಡಿಕೊಂಡು ಹೋದುದಿಲ್ಲ, ವಿಚಾರ ಮಾಡಿದುದಿಲ್ಲ; ಸುಮ್ಮನೆ ಹಣ ಕೊಟ್ಟು ತೆರಳುವುದು! ಇದು ನನಗೆ ಅತ್ಯಂತ ಅಸಾಧಾ

ರಣವಾದ ಅನುಭವವಾಗಿದ್ದಿತು. ಈ ಸಹಾಯದಿಂದ ನಾವು ಹೊಲೆಗೇರಿಗೆ ಹೋಗುವುದು ಅಂದಿಗೆ ನಿಂತಿತು. ಒಂದು ವರ್ಷ ನಾವು ನಿರಾಂತಕವಾಗಿರಲು ನಮಗೆ ಸೌಕರ್ಯವೊದಗಿತು

ಹೊರಗಡೆ ಚಂಡಮಾರುತವೆದ್ದಂತೆಯೇ ಆಶ್ರಮದೊಳಗಡೆಯೂ ಬಿರುಗಾಳಿ ಬೀಸಿತು. ದಕ್ಷಿಣ ಆಫ್ರಿಕದಲ್ಲಿ ಅಸ್ಪೃಶ್ಯಮಿತ್ರರು ನನ್ನ ಮನೆಗೆ ಬಂದು ನನ್ನೊಡನೆ ಊಟಮಾಡುತ್ತಿದ್ದರಾದರೂ ಆಶ್ರಮಕ್ಕೆ ಅಸ್ಪೃಶ್ಯರನ್ನು ಸೇರಿಸಿಕೊಳ್ಳುವುದು ನನ್ನ ಹೆಂಡತಿಗೂ ಇತರ ಹೆಂಗಸರಿಗೂ ಅಷ್ಟು ಇಷ್ಟ ಬಂದಂತೆ ಕಾಣಲಿಲ್ಲ ದಾನೀ ಬಹಿನಿನ ವಿಷಯದಲ್ಲಿ ಇವರ ಅಪ್ರೀತಿಯುಲ್ಲದಿದ್ದರ, ಇವರ ಔದಾಸೀನ್ಯವು ನನ್ನ ಸೂಕ್ಷ್ಮ ದೃಷ್ಟಿಗೆ ಬೀಳದಿರಲಿಲ್ಲ ನನ್ನ ಚುರುಕು ಕಿವಿಗಳಿಗೆ ಕೇಳದಿರಲಿಲ್ಲ ಹಣದ ತೊಂದರೆಯಿಂದ ನನಗ ಯಾವ ಚಿಂತೆಯೂ ಒದಗಿರಲಿಲ್ಲ. ಆದರೆ ಆಶ್ರಮದೊಳಗಿನ ಈ ಮನಃಕಷಾಯವು ನನ್ನ ಸಹನೆಯನ್ನು ಮೀರಿದ್ದಿತು ದಾನೀಬಹಿನು ಸಾಧಾರಣ ಸ್ತ್ರೀಯಾಗಿದ್ದಳು ದುಧಾಭಾಯಿಯು ಅಲ್ಪಶಿಕ್ಷಣವನ್ನು ಪಡೆದವರಾಗಿದ್ದರೂ ಬುದ್ಧಿವಂತರಾಗಿದ್ದರು. ಅವರ ತಾಳ್ಮೆಯನ್ನು ಕಂಡು ನನಗೆ ಸಂತೋಷವಾಯಿತು. ಒಂದೊಂದು ಸಲವೇನೋ ಅವರು ರೇಗುತಿದ್ದರು ಆದರೂ ಅವರ ಸೈರಣೆಯು ವಿಶೇಷವಾಗಿದ್ದಿತೆಂಬುದು ನನ್ನ ಲಕ್ಷ್ಯಕ್ಕೆ ಬಂದಿತು ಸಣ್ಣ ಪುಟ್ಟ ಅಪಮಾನಗಳನ್ನು ಸಹಿಸಬೇಕೆಂದು ನಾನು ಅವರಲ್ಲಿ ಕೇಳಿಕೊಂಡೆನು ಅವರು ಇದಕ್ಕೆ ಒಪ್ಪಿದುದಷ್ಟೇ ಅಲ್ಲದ ತಮ್ಮ ಹೆಂಡತಿಯೂ ಹಾಗೆ ಮಾಡುವಂತೆ ಪ್ರೇರಿಸಿದರು

ಈ ಕುಟುಂಬವನ್ನು ಸೇರಿಸಿದುದರಿಂದ ಆಶ್ರಮಕ್ಕೆ ಲಾಭದಾಯಕವಾದ ಶಿಕ್ಷಣವು ದೊರೆಯಿತು ಆಶ್ರಮದಲ್ಲಿ ಅಸ್ಪೃಶ್ಯತೆಗೆ ಎಡೆಯಿಲ್ಲವೆಂದು ನಾವು ಮೊಟ್ಟಮೊದಲೇ ಪ್ರಪಂಚಕ್ಕೆ ಸಾರಿದೆವು. ಆಶ್ರಮಕ್ಕೆ ನೆರವೀಯಬಿಚ್ಛೆಯುಳ್ಳವರಿಗೆ ಈ ರೀತಿಯಾಗಿ ಎಚ್ಚರಿಕೆ ಕೊಟ್ಟಂತಾಯಿತು ಇದರಿಂದ ಈ ವಿಷಯವನ್ನು ಕುರಿತ ಆಶ್ರಮದ ಕಾರ್ಯವು ಬಹುಮಟ್ಟಿಗೆ ಸರಳವಾಯಿತು. ದಿನವೂ ಏರುತ್ತಿರುವ ಆಶ್ರಮದ ವೆಚ್ಚವನ್ನು ವಹಿಸುವವರಲ್ಲಿ ಹೆಚ್ಚುಮಂದಿ ಪೂರ್ವಾಚಾರನಿಷ್ಠರಾದ

ಹಿಂದೂಗಳೆಂಬುದು ಅಸ್ಪೃಶ್ಯತೆಯ ಅಸ್ತಿಭಾರವೇ ಅಲುಗಿರುವುದನ್ನು ಸ್ಪಷ್ಟವಾಗಿ ವ್ಯಕ್ತಗೊಳಿಸುತ್ತದೆ. ವಾಸ್ತವಿಕವಾಗಿ ಈ ವಿಷಯವನ್ನು ಸಿದ್ಧಗೊಳಿಸುವ ಇತರ ಪ್ರಮಾಣಗಳೂ ಅನೇಕವಾಗಿವೆ. ಆದರೂ ಅಸ್ಪೃಶ್ಯರೊಡನೆ ಸಹಪಂಗ್ತಿಭೋಜನ ಮಾಡುವಷ್ಟು ದೂರ ಹೋಗುವ ಉತ್ಸಾಹಕ್ಕೆ ಸದ್ಯಕ್ಕೆ ಸನಾತನಿ ಹಿಂದುಗಳು ಹಿಂಜರಿಯುವುದಿಲ್ಲ ವೆಂಬುದು ಅಲ್ಪಪ್ರಮಾಣವೇನೂ ಅಲ್ಲ.

ಈ ಪ್ರಧಾನಸಮಸ್ಯೆಯಿಂದ ಉದ್ಭವಿಸಿದ ಕೆಲವು ನಾಜೂಕಾದ ಸಮಸ್ಯೆಗಳನ್ನು ಹೇಗೆ ಪೂರ್ಣಮಾಡಿದೆವು, ಅನಿರೀಕ್ಷಿತವಾದ ಕಲವು ಕಷ್ಟಗಳನ್ನು ಹೇಗೆ ಇದಿರಿಸಿದೆವು, ಇವೇ ಮುಂತಾದ ಸತ್ಯಶೋಧನೆಯ ವರ್ಣನೆಗೆ ಪ್ರಕೃತವಾದ ಮತ್ತು ಈ ಅಧ್ಯಾಯದ ವಿಷಯಕ್ಕೆ ಸಂಬಂಧ ಪಟ್ಟ ಎಷ್ಟೋ ವಿಚಾರಗಳನ್ನು ನಾನು ಬಿಟ್ಟು ಬಿಡಬೇಕು. ಇದರಿಂದ ನನಗೆ ವಿಷಾದವಾಗುತ್ತದೆ. ಮುಂದೆ ಬರಲಿರುವ ಅಧ್ಯಾಯಗಳಲ್ಲಿ ಈ ಕುಂದು ಕಂಡುಬರುವುದು. ನಾನು ಕೆಲವು ಮುಖ್ಯವಾದ ವಿವರಗಳನ್ನು ಬಿಟ್ಟು ಬಿಡಬೇಕಾಗುವುದು. ಏಕೆಂದರೆ ಈ ನಾಟಕದಲ್ಲಿನ ಪಾತ್ರಗಳಲ್ಲಿ ಹೆಚ್ಚು ಮಂದಿ ಜೀವಂತರಾಗಿದ್ದಾರೆ. ಅವರಿಗೆ ಸಂಬಂಧಪಟ್ಟ ಘಟನೆಗಳ ವರ್ಣನೆಯಲ್ಲಿ ಅವರ ಹೆಸರುಗಳನ್ನು ಅಪ್ಪಣೆಯಿಲ್ಲದೆ ಉಪಯೋಗಿಸುವುದು ಯುಕ್ತವಲ್ಲ. ಅವರ ಒಪ್ಪಿಗೆಯನ್ನು ಪಡೆಯುವುದು ಅಥವಾ ತಮಗೆ ಸಂಬಂಧಿಸಿದ ಅಧ್ಯಾಯಗಳನ್ನು ಪರಿಶೋಧಿಸುವುದಕ್ಕಾಗಿ ಹಗಲೆಲ್ಲಾ ಅವರನ್ನು ಕರೆಸುವುದು ನಡೆಯುವ ಮಾತಲ್ಲ. ಇದೂ ಅಲ್ಲದೆ ಇಂತಹ ಕ್ರಮವು ಈ ಆತ್ಮವೃತ್ತದ ಪರಿಮಿತಿಯಲ್ಲಿಲ್ಲ. ಆದುದರಿಂದ ಮುಂದಿನ ಕತೆಯನ್ನು ಅದು ನನ್ನ ಅಭಿಪ್ರಾಯದಲ್ಲಿ ಸತ್ಯಶೋಧಕರಿಗೆ ಲಾಭದಾಯಕವಾಗಿದ್ದರೂ ಅನಿವಾರ್ಯವಾದ ಅಸಂಪೂರ್ಣತೆಯಿಂದ ಹೇಳಬೇಕಾಗುವುದೆಂದು ಶಂಕಿಸುತ್ತೇನೆ. ಅದು ಹೇಗಾದರೂ ಇರಲಿ. ಈ ಇತಿಹಾಸವನ್ನು ಅಸಹಯೋಗಯುಗದವರೆಗೂ ತರಬೇಕೆಂದು ನನ್ನ ಇಚ್ಛೆ ಮತ್ತು ಆಸೆ. ಇವು ಕೈಗೂಡುವುದು ದೇವರ ಚಿತ್ತ.

---

# ೧೧

# ಗಿರಮಿಟಿಯರ ವಿದೇಶಯಾತ್ರೆಯನ್ನು ನಿಲ್ಲಿಸಿದುದು

ಈ ರೀತಿಯಾಗಿ ಆಶ್ರಮವು ಮೊಟ್ಟಮೊದಲನಲ್ಲಿಯೇ ಆಂತರಿಕ ಮತ್ತು ಬಾಹ್ಯ ವಿಪ್ಲವಗಳನ್ನು ತಡೆಯಬೇಕಾಯಿತು. ಇದನ್ನು ಒಂದು ಕ್ಷಣ ಬಿಟ್ಟು ಆ ಸಮಯದಲ್ಲಿ ನನ್ನ ಗಮನಕ್ಕೆ ಬಂದ ಒಂದು ವಿಷಯವನ್ನು ಸಂಕ್ಷೇಪವಾಗಿ ವಿವರಿಸುತ್ತೇನೆ.

ಕರಾರುಕೂಲಿಗಾರರೆಂದರೆ ಐದು ವರ್ಷ ಅಥವಾ ಕಡಮೆ ಕಾಲ ಕೆಲಸಮಾಡುವೆವೆಂದು ಒಪ್ಪಿ ಭರತಖಂಡದಿಂದ ಹೋದವರು. ೧೯೧೪ನೆಯ ಇಸವಿಯಲ್ಲಿ ಆದ ಸ್ಮಟ್ಸ್-ಗಾಂಧೀ ಒಪ್ಪಂದದ ಪ್ರಕಾರ ಕರಾರುಕೂಲಿಗಾಗಿ ನೇಟಾಲನ್ನು ಪ್ರವೇಶಿಸಿದವರ ಮೇಲಿನ ಮೂರು ಪೌಂಡು ತೆರಿಗೆಯು ತೆಗೆದುಹಾಕಲ್ಪಟ್ಟಿದ್ದಿತಾದರೂ ಭರತಖಂಡದಿಂದ ವಿದೇಶಕ್ಕೆ ಜೀವನಕ್ಕಾಗಿ ಹೋಗಿ ನೆಲಸುವವರ ವಿಷಯವಾಗಿ ತಿದ್ದುಪಾಟು ಆವಶ್ಯಕವಾಗಿದ್ದಿತು. ೧೯೧೬ನೆಯ ಮಾರ್ಚಿಯಲ್ಲಿ ಭಾರತಭೂಷಣ ಪಂಡಿತ ಮದನಮೋಹನ ಮಾಳವೀಯರವರು ಕರಾರುಕೂಲಿತನವನ್ನು ತೆಗೆದುಹಾಕಿಬಿಡಬೇಕೆಂಬುದಾಗಿ ಕೇಂದ್ರ ಕಾಯಿದೆ ಮಂಡಲಿಯಲ್ಲಿ ಗೊತ್ತುವಳಿಯನ್ನು ತಂದರು. ಲಾರ್ಡ್ ಹಾರ್ಡಿಂಜರು ಇದನ್ನು ಸ್ವೀಕರಿಸುತ್ತಾ ಈ ಪದ್ಧತಿಯನ್ನು "ಕಾಲಕ್ರಮೇಣ ನಿರ್ಮೂಲಮಾಡಲು ಸಾರ್ವಭೌಮ ಸರಕಾರದವರು ಮಾತುಕೊಟ್ಟಿದ್ದಾರೆ." ಎಂದು ತಿಳಿಸಿದರು. ಈರೀತಿಯ ಅಸ್ಪಷ್ಟವಾದ ಭರವಸೆಯ ಮಾತಿನಿಂದ ಭರತಖಂಡವು ತೃಪ್ತಿಪಟ್ಟುಕೊಳ್ಳಕೂಡದೆಂದೂ ಕರಾರುಕೂಲಿತನವನ್ನು ಒಡನೆಯೇ ತೆಗೆದುಹಾಕಲು ಚಳವಳಿ ನಡೆಸಬೇಕೆಂದೂ ನನಗೆ ತೋರಿತು. ಭರತಖಂಡವು ಕೇವಲ ಔದಾಸೀನ್ಯದಿಂದ ಈ ಪದ್ಧತಿಯನ್ನು ಇರಗೊಟ್ಟಿದ್ದಿತು. ಈ ಮದ್ದಿಗಾಗಿ ಜನರು ಚಳವಳಿ ನಡೆಸಿ ಸಫಲರಾಗುವ ಕಾಲವು ಬಂದಿತೆಂದು ನಾನು

ಅರಿತನು ಮುಂದಾಳುಗಳಲ್ಲಿ ಕಲವರನ್ನು ನಾನು ಬೆಟ್ಟಿಮಾಡಿದೆನು. ಈ ಪದ್ಧತಿಯನ್ನು ಒಡನೆಯೇ ತೆಗದುಹಾಕಬೇಕೆಂದು ಪ್ರಬಲವಾದ ಲೋಕವ ತವಿದ್ದಿತೆಂಬುದನ್ನು ನಾನು ಕಂಡೆನು ಇದು ಸತ್ಯಾಗ್ರಹಕ್ಕೆ ತಕ್ಕ ವಿಷಯವಾಗಿರಬಹುದೇ? ಅಹುದೆಂಬುದರಲ್ಲಿ ನನಗೆ ಸಂಶಯವಿರಲಿಲ್ಲ. ಆದರೆ ನಡೆಸುವ ರೀತಿಯು ನನಗೆ ಗೊತ್ತಿರಲಿಲ್ಲ

ಇದರ ಮಧ್ಯೆ ವೈಸ್‌ರಾಯರು 'ಕಾಲಕ್ರಮೇಣ ನಿರ್ಮೂಲ ಮಾಡುವುದು' ಎಂಬುದರ ಅರ್ಥವನ್ನು ವಿಶದಪಡಿಸಿದ್ದರು ''ಬೇರ ಏರ್ಪಾಟನ್ನು ಮಾಡಲು ಬೇಕಾದಷ್ಟು ಕಾಲವು ಕಳೆದ ಮೇಲೆ ಈ ಪದ್ಧತಿಯನ್ನು ತೆಗೆದು ಹಾಕುವುದು'' ಎಂಬುದೇ ಇದರ ಅರ್ಥವಾಗಿದ್ದಿತು.

ಆದುದರಿಂದ ೧೯೧೭ನೆಯ ಫೆಬ್ರುವರಿಯಲ್ಲಿ ಪಂಡಿತ ಮಾಳವೀಯರು ಈ ಪದ್ಧತಿಯನ್ನು ಒಡನಯೇ ಕಿತ್ತುಹಾಕಬೇಕೆಂಬುದಾಗಿ ಕಾಯಿದೆಯನ್ನು ತರಲು ಅಪ್ಪಣೆಯನ್ನು ಕೇಳಿದರು ಲಾರ್ಡ್ ಚೆಮ್ಸ್‌ಫರ್ಡರು ಅಪ್ಪಣೆಯನ್ನು ಕೊಡಲಿಲ್ಲ. ಆದುದರಿಂದ ಅಖಿಲಭಾರತದಲ್ಲಿ ಚಳವಳಿಯನ್ನು ಹೂಡುವುದಕ್ಕಾಗಿ ಪಯಣ ಬೆಳಸಲು ನನಗೆ ಸಮಯ ವೊದಗಿತು.

ಇದನ್ನು ಆರಂಭಿಸುವುದಕ್ಕಿಂತ ಮುಂಚೆ ವೈಸ್‌ರಾಯರನ್ನು ಕಾಣುವುದು ಉಚಿತವೆಂದೆಣಿಸಿ ಅವರಿಗೆ ನನ್ನ ಆಶಯವನ್ನು ತಿಳಿಸಲು ಅವರು ಒಪ್ಪಿದರು ಮಿ (ಈಗ ಸರ್) ಜಾನ್ ಮ್ಯಾಫಿಯವರು ಅವರ ಆಪ್ತಕಾರ್ಯದರ್ಶಿಗಳಾಗಿದ್ದರು ನಮ್ಮಿಬ್ಬರಿಗೂ ಗಾಢಸಂಬಂಧವುಂಟಾಯಿತು ಲಾರ್ಡ್ ಚೆಮ್ಸ್‌ಫರ್ಡರೊಡನೆ ನಡೆದ ಸಂಭಾಷಣೆಯು ತೃಪ್ತಿಕರವಾಗಿದ್ದಿತು ಅವರು ನಿಶ್ಚಯಪೂರ್ವಕವಾಗಿ ಏನನ್ನೂ ಹೇಳದಿದ್ದರೂ ಸಹಾಯಮಾಡುವೆನೆಂದು ಮಾತುಕೊಟ್ಟರು.

ನಾನು ನನ್ನ ಪಯಣವನ್ನು ಮುಂಬಯಿಯಿಂದ ಪ್ರಾರಂಭಿಸಿದೆನು. ಮಿ. ಜಹಾಂಗೀರ್ ಪಟಿಟರು 'ಇಂಪೀರಿಯಲ್ ಸಿಟಿಜನ್‌ಷಿಪ್ ಅಸೋಸಿಯೇಷನ್' (ಅಧಿರಾಜ್ಯಪ್ರಜಾಮಂಡಲಿ)ನ ಹೆಸರಿನಲ್ಲಿ ಸಭೆಗೂಡಿಸುವ ಭಾರವನ್ನು ಹೊತ್ತರು. ಆ ಸಂಸ್ಥೆಯ ಕಾರ್ಯಕಾರಿಣೀಸಮಿತಿಯು

ಸಭೆಯು ಮುಂಡಿಡಬೇಕಾದ ಪ್ರಸ್ತಾವಗಳನ್ನು ನಿರ್ಧರಿಸುವುದಕ್ಕಾಗಿ ಮಾಡಲು ಸೇರಿತು. ಡಾ (ಈಗ ಸರ್) ಸ್ಟ್ಯಾನ್ಲಿ ರೀಡ್, ಶ್ರೀ (ಈಗ ಸರ್) ಲಲ್ಲೂಭಾಯಿ ಶ್ಯಾಮಲದಾಸ್, ಶ್ರೀ ನಟರಾಜನ್, ಮಿ ಪಟಿಟ್ ಇವರು ಸಮಿತಿಯ ಕೂಟದಲ್ಲಿದ್ದರು ಸರಕಾರದವರು ಎಷ್ಟು ದಿನಗಳೊಳಗಾಗಿ ಕರಾರುಕೂಲಿಯ ಪದ್ಧತಿಯನ್ನು ನಿಲ್ಲಿಸಬೇಕೆಂಬ ವಿಚಾರವಾಗಿ ಚರ್ಚೆಯು ಪ್ರಬಲವಾಗಿ ನಡೆಯಿತು. ಈ ಸಂಬಂಧವಾಗಿ ಮೂರು ಸೂಚನೆಗಳಿದ್ದುವು 'ಆದಷ್ಟು ಜಾಗ್ರತೆಯಾಗಿ' ನಿರ್ಮೂಲಮಾಡಬೇಕು, 'ಜುಲೈ ೩೧ ರೊಳಗಾಗಿ' ನಿರ್ಮೂಲಮಾಡಬೇಕು, ಮತ್ತು 'ಒಡನೆಯೇ' ಕಿತ್ತುಹಾಕಬೇಕು, ಎಂದು. ನಿಶ್ಚಿತವಾದ ತಾರೀಖಿನೊಳಗಾಗಿ ನಿರ್ಮೂಲಮಾಡಬೇಕೆಂಬ ಸೂಚನೆಯು ಪರವಾಗಿ ನನ್ನ ಅಭಿಮತವಿದ್ದಿತು. ಏಕೆಂದರೆ ಆ ದಿನದೊಳಗಾಗಿ ಸರಕಾರದವರು ನಮ್ಮ ಕೋರಿಕೆಯನ್ನು ನೆರವೇರಿಸದಿದ್ದರೆ ನಾವು ಮುಂದೆ ಮಾಡಬೇಕಾದುದೇನೆಂಬುದನ್ನು ನಿರ್ಧರಿಸಬಹುದಾಗಿದ್ದಿತು ಸರ್ ಲಲ್ಲೂಭಾಯಿಯವರು 'ಒಡನೆಯೇ' ನಿರ್ಮೂಲಮಾಡಬೇಕೆಂಬ ಸೂಚನೆಯನ್ನು ಅನುಮೋದಿಸಿದರು ಒಡನೆಯೇ ಎಂದರೆ ಜುಲೈ ೩೧ಕ್ಕಿಂತ ಮುಂಚೆಯಾಗುವುದೆಂದು ಅವರು ಹೇಳಿದರು "ಜನಸಾಮಾನ್ಯಕ್ಕೆ 'ಒಡನೆಯೇ' ಎಂದರೆ ಸ್ಪಷ್ಟವಾಗಿ ಅರ್ಥವಾಗುವುದಿಲ್ಲ. ಅವರಿಂದ ಏನಾದರೂ ಕೆಲಸವಾಗಬೇಕಾದರೆ ಇನ್ನೂ ಸ್ಪಷ್ಟವಾದ ಅರ್ಥವುಳ್ಳ ಪದವನ್ನು ಉಪಯೋಗಿಸಬೇಕು 'ಒಡನೆಯೇ' ಎಂಬುದನ್ನು ಪ್ರತಿಯೊಬ್ಬರೂ ತಮತಮಗೆ ತೋರಿದಂತೆ– ಸರಕಾರದವರು ಒಂದು ರೀತಿಯಲ್ಲಿ, ಜನರು ಒಂದು ರೀತಿಯಲ್ಲಿ—ಅರ್ಥಮಾಡುವರು 'ಜುಲೈ ೩೧' ಎಂಬುದಕ್ಕೆ ಎರಡು ಅರ್ಥಮಾಡಲಾಗುವುದಿಲ್ಲ. ಆ ದಿನದೊಳಗಾಗಿ ಏನೂ ಆಗದಿದ್ದರೆ ನಾವು ಮುಂದಿನ ಕ್ರಮವನ್ನು ಜರುಗಿಸಬಹುದು." ಎಂದು ನಾನು ವಿವರಿಸಿದೆನು. ಈ ವಾದದ ಔಚಿತ್ಯವನ್ನು ಡಾ. ರೀಡರು ಕಂಡರು. ಕಡೆಗೆ ಸರ್ ಲಲ್ಲೂಭಾಯಿಯವರೂ ಒಪ್ಪಿದರು ಕರಾರುಕೂಲಿ ಪದ್ಧತಿಯನ್ನು ತೆಗೆದುಹಾಕಿದುದನ್ನು ಜುಲೈ ೩೧ನೆಯ ತಾರೀಖಿನೊಳಗಾಗಿ ಸರಕಾರದವರು ಪ್ರಕಟಿಸಬೇಕೆಂದು ನಾವು ನಿರ್ಧರಿಸಿದೆವು. ಸಾರ್ವಜನಿಕ ಸಭೆಯಲ್ಲಿ

ಈ ಗೊತ್ತುವಳಿಗೆ ಒಪ್ಪಿಗೆಯು ದೊರಕಿತು. ಭರತಖಂಡದಲ್ಲೆಲ್ಲಾ ಇದೇ ಅರ್ಥದ ಗೊತ್ತುವಳಿಗಳನ್ನು ಸಭೆಗಳು ಅಂಗೀಕರಿಸಿದುವು

ಶ್ರೀಮತೀ ಜಾಯಜೀ ಪೆಟಿಟರು ವೈಸ್‌ರಾಯರನ್ನು ಬೆಟ್ಟಿಮಾಡಲು ಒಂದು ಸ್ತ್ರೀಮಂಡಲಿಯನ್ನೇರ್ಪಡಿಸುವುದರಲ್ಲಿ ತಮ್ಮ ಸರ್ವ ಪ್ರಯತ್ನವನ್ನೂ ವಿನಿಯೋಗಿಸಿದರು ಈ ಮಂಡಲಿಯಲ್ಲಿದ್ದ ಮುಂಬಯಿಯ ಮಹಿಳೆಯರಲ್ಲಿ ನನಗೆ ಲೇಡಿ ತಾತಾ ಮತ್ತು ದಿವಂ ದಿಲ್‌ಷಾದ್ ಬೇಗಂ ಇವರ ಹೆಸರು ಜ್ಞಾಪಕವಿದೆ ಈ ಮಂಡಲಿಯು ವೈಸ್‌ರಾಯರನ್ನು ನೋಡಿದುದು ಸಫಲವಾಯಿತು. ವೈಸರಾಯರು ಇವರಿಗೆ ಆಶಾಜನಕವಾದ ಉತ್ತರವನ್ನು ಕೊಟ್ಟರು.

ನಾನು ಕರಾಚಿ, ಕಲ್ಕತ್ತೆ ಮುಂತಾದ ಅನೇಕ ಸ್ಥಳಗಳಿಗೆ ಹೋದೆನು. ಎಲ್ಲಾ ಕಡೆಯೂ ದೊಡ್ಡ ಸಭೆಗಳು ಕೂಡಿದುವು. ಎಲ್ಲೆಡೆಯಲ್ಲಿಯೂ ಉತ್ಸಾಹವು ತುಂಬಿ ತುಳುಕಾಡುತ್ತಿದ್ದಿತು ಚಳವಳಿಯು ಪ್ರಾರಂಭವಾದಾಗ ನಾನು ಇಷ್ಟೆಲ್ಲವನ್ನೂ ನಿರೀಕ್ಷಿಸಿರಲಿಲ್ಲ

ಆ ಕಾಲದಲ್ಲಿ ನಾನು ಒಬ್ಬೊಂಟಿಗನಾಗಿ ಪ್ರಯಾಣಮಾಡುತ್ತಿದ್ದೆನು ಇದರಿಂದ ನನಗೆ ಅಪೂರ್ವ ಅನುಭವಗಳು ಒದಗುತ್ತಿದ್ದುವು ಸರಕಾರದ ಗುಪ್ತಚಾರರು ನನ್ನನ್ನು ಸದಾ ಹಿಂಬಾಲಿಸುತ್ತಿದ್ದರು ನಾನು ಅವರಿಂದ ಮುಚ್ಚಿಟ್ಟುಕೊಳ್ಳಬೇಕಾದುದೇನೂ ಇರದಿದ್ದುದರಿಂದ ಅವರು ನನ್ನನ್ನು ಪೀಡಿಸುತ್ತಿರಲಿಲ್ಲ ನಾನು ಅವರನ್ನು ತೊಂದರೆಪಡಿಸುತ್ತಿರಲಿಲ್ಲ. ಸೌಭಾಗ್ಯವಶಾತ್ ಆಗ ನನಗೆ ಇನ್ನೂ 'ಮಹಾತ್ಮ'ಗಿರಿಯು ಬಂದಿರಲಿಲ್ಲ ಆದರ ನನ್ನ ಗುರುತಿದ್ದೆಡೆಯಲ್ಲಿ ಈ ಕೂಗು ಕೇವಲ ಸಾಮಾನ್ಯವಾಗಿದ್ದಿತು.

ಒಂದುಸಲ ಗೂಢಚಾರರು ಅನೇಕ ನಿಲ್ದಾಣಗಳಲ್ಲಿ ನನ್ನ ಟಿಕೆಟನ್ನು ಕೇಳಿ ಅದರ ಸಂಖ್ಯೆಯನ್ನು ಬರೆದುಕೊಂಡರು ನಾನಂತು ಅವರು ಕೇಳಿದ ಪ್ರಶ್ನೆಗಳಿಗೆಲ್ಲಾ ಸಿದ್ಧವಾಗಿ ಉತ್ತರಕೊಟ್ಟೆನು ನನ್ನೊಡನೆ ಪಯಣಮಾಡುತ್ತಿದ್ದವರು ನಾನೊಬ್ಬ ಸಾಧುವೋ ಫಕೀರನೋ ಎಂದು ಎಣಿಸಿದ್ದರು ನನ್ನನ್ನು ಪ್ರತಿ ನಿಲ್ದಾಣದಲ್ಲಿಯೂ ತೊಂದರೆಪಡಿಸುತ್ತಿದ್ದುದನ್ನು

ನೋಡಿ ಅವರು ಕಡುಕೋಪಗೊಂಡು ಗೂಢಚಾರರನ್ನು ಬೈದು "ನೀವು ಸುಮ್ಮನೆ ಈ ಸಾಧುವನ್ನು, ಪಾಪ, ಏಕೆ ಗೋಳಾಡಿಸುತ್ತಿರುವಿರಿ?" ಎಂದು ಕೇಳಿದರು. ನನಗೆ "ನೀವು ಈ ದುಷ್ಟರಿಗೆ ಟಿಕೆಟನ್ನು ತೋರಿಸ ಬೇಡಿ." ಎಂದರು.

ನಾನು ಅವರಿಗೆ ವಿನಯವಾಗಿ "ಅವರಿಗೆ ನನ್ನ ಟಿಕೆಟನ್ನು ತೋರಿಸಲು ನನಗೆ ಏನೂ ತೊಂದರೆಯಾಗುವುದಿಲ್ಲ ಅವರು ತಮ್ಮ ಕರ್ತವ್ಯವನ್ನು ಮಾಡುತ್ತಿದ್ದಾರೆ" ಎಂದೆನು ಆದರೆ ಅವರಿಗೆ ಇದರಿಂದ ಸಮಾಧಾನವಾಗಲಿಲ್ಲ ಅವರು ನನ್ನ ಪಕ್ಷವನ್ನು ಮೊದಲಿಗಿಂತ ಹೆಚ್ಚಾಗಿ ವಹಿಸಿ ಈ ರೀತಿಯಾಗಿ ನಿರ್ದೋಷಿಗಳನ್ನು ಪೀಡಿಸುವುದನ್ನು ಖಂಡಿಸಿದರು.

ಈ ಗೂಢಚಾರರಿಂದುಂಟಾದ ತೊಂದರೆಯು ಲೆಕ್ಕಕ್ಕೇ ಬರುವಂತಿರಲಿಲ್ಲ ಮೂರನೆಯ ವರ್ಗದಲ್ಲಿ ಪ್ರಯಾಣ ಮಾಡುವುದೇ ನನಗೆ ನಿಜವಾದ ತೊಂದರೆಯಾಗಿದ್ದಿತು ಲಾಹೋರಿನಿಂದ ದಿಲ್ಲಿಗೆ ಹೋಗುವಾಗ ನನ್ನ ಅನುಭವಗಳು ಎಲ್ಲಕ್ಕಿಂತ ಕಠಿಣವಾಗಿಯೂ ಕಟುವಾಗಿಯೂ ಇದ್ದುವು ನಾನು ಕರಾಚಿಯಿಂದ ಕಲ್ಕತ್ತೆಗೆ ಲಾಹೋರಿನ ಮೂಲಕ ಹೋಗುತ್ತಿದ್ದೆನು. ಲಾಹೋರಿನಲ್ಲಿ ನಾನು ಗಾಡಿಯನ್ನು ಬದಲಾಯಿಸಬೇಕಾಗಿದ್ದಿತು ರೈಲಿನಲ್ಲಿ ಸ್ಥಳ ಸಿಕ್ಕುವುದೇ ಅಸಾಧ್ಯವಾಯಿತು ಗಾಡಿಗಳು ತುಂಬಿಬಿಟ್ಟಿದ್ದುವು ಒಳಕ್ಕೆ ಹೋಗುವವರು ಕೇವಲ ತಮ್ಮ ದೇಹಬಲವನ್ನು ಉಪಯೋಗಿಸಿ ನುಗ್ಗುತ್ತಿದ್ದರು ಬಾಗಿಲು ಬೀಗ ಹಾಕಿದ್ದರೆ ಕಿಟಕಿಯಲ್ಲಿ ನುಸುಕುತ್ತಿದ್ದರು ಸಭೆಗೂಡುವುದೆಂದು ಗೊತ್ತಾದ ದಿನ ಸರಿಯಾಗಿ ನಾನು ಕಲ್ಕತ್ತೆಗೆ ಹೋಗಬೇಕಾಗಿದ್ದಿತು. ಈ ಗಾಡಿಯು ತಪ್ಪಿದರೆ ನಾನು ಅಲ್ಲಿಗೆ ಹೊತ್ತಿಗೆ ಸರಿಯಾಗಿ ಹೋಗುವುದಕ್ಕಾಗುತ್ತಿರಲಿಲ್ಲ ನನಗೆ ಗಾಡಿಯಲ್ಲಿ ಸ್ಥಳ ಸಿಕ್ಕುವ ಆಸೆಯನ್ನು ಇನ್ನೇನು ಬಿಟ್ಟಿದ್ದೆನೆಂದು ಹೇಳಬಹುದು ನನಗೆ ಯಾರೂ ಸ್ಥಳವನ್ನು ಕೊಡಲೊಲ್ಲರು. ಅಷ್ಟುಹೊತ್ತಿಗೆ ಸರಿಯಾಗಿ ಒಬ್ಬ ಕೂಲಿಯವನು ನನ್ನ ಪರಿಸ್ಥಿತಿಯನ್ನು ನೋಡಿ ನನ್ನ ಬಳಿಗೆ ಬಂದು "ನನಗೆ ಹನ್ನೆ

ರಡಾಣೆ ಕೊಡಿ ನಾನು ನಿಮಗೆ ಜಾಗ ಮಾಡಿಕೊಡುತ್ತೇನೆ" ಎಂದನು "ನೀನು ನನಗೆ ಸ್ಥಳವನ್ನು ಕೊಡಿಸುವುದೇ ಆದರೆ ನಿನಗೆ ಅಗತ್ಯವಾಗಿ ಹನ್ನೆರಡಾಣೆ ಕೊಡುತ್ತೇನೆ" ಎಂದು ನಾನು ಅವನಿಗೆ ಹೇಳಿದೆನು. ಆ ಯುವಕನು ಪ್ರಯಾಣಿಕರನ್ನು ಸ್ಥಳಕ್ಕಾಗಿ ಬೇಡುತ್ತ ಗಾಡಿಯಿಂದ ಗಾಡಿಗೆ ಹೋದನು ಆದರೆ ಯಾರೂ ಅವನ ಮಾತನ್ನು ಕಿವಿಗೆ ಹಾಕಿ ಕೊಳ್ಳಲಿಲ್ಲ ಗಾಡಿಯು ಹೊರಟಿತೆಂಬಷ್ಟರಲ್ಲಿ ಕೆಲವರು ಪ್ರಯಾಣಿಕರು "ಇಲ್ಲಿ ಜಾಗವಿಲ್ಲ. ಆದರೂ ನೀನು ಇಷ್ಟಪಟ್ಟರೆ ಅವರನ್ನು ಇದರೊಳಕ್ಕೆ ತುರುಕಬಹುದು ಅವರು ನಿಂತುಕೊಳ್ಳಬೇಕಾಗುತ್ತದೆ" ಎಂದರು ಕೂಲೀಯುವಕನು "ಏನು ಹೇಳುತ್ತೀರಿ" ಎಂದು ನನ್ನನ್ನು ಕೇಳಿದನು ನಾನು ಒಡನೆಯೇ ಒಪ್ಪಲು ಅವನು ನನ್ನನ್ನು ಕಿಟಕಿಯೊಳಗೆ ನೂಕಿದನು. ಹೀಗೆ ನಾನು ಗಾಡಿಯೊಳಕ್ಕೆ ಹೋದೆನು ಕೂಲಿಯವನು ಹನ್ನೆರಡಾಣೆಯನ್ನು ಸಂಪಾದಿಸಿದನು

ಆ ರಾತ್ರಿಯು ಗಂಡಾಂತರವಾಗಿದ್ದಿತು ಇತರ ಪ್ರಯಾಣಿಕರು ಹಾಗೂ ಹೀಗೂ ಕುಳಿತಿದ್ದರು ನಾನು ಮೇಲಿನ ಹಲಗೆಯನ್ನು ಹಿಡಿದುಕೊಂಡು ಎರಡು ತಾಸು ನಿಂತಿದ್ದೆನು ಈ ಮಧ್ಯೆ ಪ್ರಯಾಣಿಕರಲ್ಲಿ ಕೆಲವರು ನನ್ನನ್ನು ಸದಾ ಪೀಡಿಸುತ್ತಿದ್ದರು "ನೀವು ಇನ್ನೂ ಏತಕ್ಕೆ ಕುಳಿತುಕೊಂಡಿಲ್ಲ?" ಎಂದು ಕೇಳಿದರವರು ಸ್ಥಳವಿಲ್ಲವೆಂದು ಅವರಿಗೆ ತಿಳಿಯಹೇಳಲು ನಾನು ಪ್ರಯತ್ನಪಟ್ಟೆನು ಅವರು ಮೇಲಿನ ಹಲಗೆಯಲ್ಲಿ ಕಾಲು ಚಾಚಿಕೊಂಡು ಮಲಗಿದ್ದರೂ ನಾನು ನಿಂತಿರುವುದನ್ನು ಸಹಿಸಲೊಲ್ಲರು ನನ್ನನ್ನು ಪೀಡಿಸಿ ಅವರು ಬೇಸರಪಡಲಿಲ್ಲ ಅವರಿಗೆ ವಿನಯವಾಗಿ ಉತ್ತರಕೊಡಲು ನಾನೂ ಬೇಸರಗೊಳಲಿಲ್ಲ ಇದರಿಂದ ಅವರು ಕಟ್ಟಕಡೆಗೆ ಶಾಂತರಾದರು ಅವರಲ್ಲಿ ಕೆಲವರು ನನ್ನ ಹೆಸರನ್ನು ಕೇಳಿದರು ನಾನು ಹೇಳಲು ಅವರು ನಾಚಿಕೆಗೊಂಡರು ನನ್ನ ಕ್ಷಮಾಪಣೆಯನ್ನು ಬೇಡಿ ನನಗೆ ಸ್ಥಳವನ್ನು ಬಿಟ್ಟುಕೊಟ್ಟರು ಹೀಗೆ ತಾಳ್ಮೆಯು ಸಫಲವಾಯಿತು ನನಗೆ ಅತ್ಯಂತ ಆಯಾಸವಾಗಿದ್ದಿತು, ತಲೆತಿರುಗುತ್ತಿದ್ದಿತು ನನಗೆ ಸಹಾಯವು ಅತ್ಯಗತ್ಯವಾಗಿದ್ದಾಗ ಸರಿಯಾಗಿ ದೇವರು ನನಗೆ ನೆರವಿತ್ತನು

## ೧೨

# ನೀಲಿಯ ಕರೆ

ಚಂಪಾರಣ್ಯವು ಜನಕರಾಯನ ನಾಡು. ಅದು ಈಗ ಮಾವಿನ ತೋಪುಗಳಿಂದ ತುಂಬಿರುವಂತೆಯೇ ೧೯೧೭ರ ವರೆಗೂ ನೀಲಿಯ ತೋಟಗಳಿಂದ ಇಟ್ಟಣಿಸಿದ್ದಿತು ಚಂಪಾರಣ್ಯದ ರೈತನು ತನ್ನ ಜಮೀನ್ದಾರನಿಗಾಗಿ ಭೂಮಿಯ ಸೇಕಡ ೧೫ ಭಾಗದಲ್ಲಿ ನೀಲಿಯನ್ನು ಬೆಳೆಯಲೇಬೇಕೆಂದು ಕಾನೂನು ವಿಧಿಸಿದ್ದಿತು ಇದಕ್ಕೆ ತಿನ್‌ಕಠಿಯಾ ಪದ್ಧತಿಯೆಂದು ಹೆಸರು ಏಕೆಂದರೆ ಇಪ್ಪತ್ತು ಕಟ್ಠ (ಎಂದರೆ ಒಂದು ಎಕರ) ಗಳಲ್ಲಿ ಮೂರರಲ್ಲಿ ನೀಲಿಯನ್ನು ಬೆಳೆಯಬೇಕಾಗಿದ್ದಿತು

ಆ ಸಮಯದಲ್ಲಿ ನನಗೆ ಚಂಪಾರಣ್ಯವಿರುವ ಸ್ಥಳವು ಹಾಗಿರಲಿ, ಅದರ ಹೆಸರೇ ಗೊತ್ತಿರಲಿಲ್ಲ. ನೀಲಿಯ ತೋಟಗಳು ಹೇಗಿರುವುವೆಂಬುದು ಕೂಡ ನನಗೆ ತಿಳಿದಿರಲಿಲ್ಲ ನೀಲಿಯ ಕಟ್ಟುಗಳನ್ನೇನೋ ನೋಡಿದ್ದೆನು ಆದರೆ ಅವು ಚಂಪಾರಣ್ಯದಲ್ಲಿ ಸಿದ್ಧವಾಗುತ್ತಿದ್ದುವೆಂದೂ ಅದರಿಂದ ಸಾವಿರಾರು ರೈತರಿಗೆ ಕಷ್ಟವಾಗುತ್ತಿದ್ದಿತೆಂದೂ ನಾನು ಕನಸಿನಲ್ಲಿಯೂ ಕಂಡಿರಲಿಲ್ಲ

ರಾಜಕುಮಾರ ಶುಕ್ಲರು ಹೀಗೆ ಕಷ್ಟಕ್ಕೆ ಸಿಲುಕಿದ್ದ ರೈತಲ್ಲಿ ಒಬ್ಬರಾಗಿದ್ದರು ತಮ್ಮಂತೆಯೇ ದುಃಖಿಗಳಾಗಿದ್ದ ಸಾವಿರಾರು ಜನರ ಮೇಲಿದ್ದ ನೀಲಿಯ ಕರೆಯನ್ನು ತೊಡೆದುಹಾಕಿಬಿಡಬೇಕೆಂಬ ಆವೇಶದಿಂದ ಅವರು ತುಂಬಿದ್ದರು.

ನಾನು ೧೯೧೬ರ ಮಹಾಸಭೆಗಾಗಿ ಲಖನವಿಗೆ ಹೋಗಿದ್ದಾಗ ಅಲ್ಲಿ ಅವರು ನನ್ನನ್ನು ಹಿಡಿದು “ವಕೀಲಬಾಬುಗಳು ನಮ್ಮ ಸಂಕಟದ ವಿಷಯವನ್ನೆಲ್ಲಾ ನಿಮಗೆ ತಿಳಿಸುತ್ತಾರೆ” ಎಂದುಹೇಳಿ ಚಂಪಾರಣ್ಯಕ್ಕೆ ಹೋಗಲು ನನ್ನನ್ನು ಒತ್ತಾಯಪಡಿಸಿದರು. ‘ವಕೀಲಬಾಬು’ಗಳೆಂದರೆ

ಇನ್ನಾರೂ ಇಲ್ಲ. ಚಂಪಾರಣ್ಯ ಪ್ರಕರಣದಲ್ಲಿ ನನ್ನ ಸಮಾನ ಪರ ಸಹಯೋಗಿಗಳಾಗಿದ್ದ, ಬಿಹಾರದಲ್ಲಿ ಸಾರ್ವಜನಿಕ ಜೀವನದ ಪ್ರಾಣರಾದ, ಬಾಬು ಬ್ರಜಕಿಶೋರ ಪ್ರಸಾದರು ರಾಜಕುಮಾರ ಶುಕ್ಲರು ಅವರನ್ನು ನನ್ನ ಬಳಿಗೆ ಕರೆದುಕೊಂಡು ಬಂದರು. ಅವರು ಕರಿಯ ಅಲ್ಪಾಕಾ ತುಪ್ಪಟದ ನಿಲುವಂಗಿಯನ್ನೂ ಪಾಜಾಮೆಯನ್ನೂ ಹಾಕಿಕೊಂಡಿದ್ದರು. ಅವರನ್ನು ನೋಡಿ ಆಗ ನನ್ನ ಮನಸ್ಸಿನಲ್ಲಿ ಅವರ ವಿಷಯವಾಗಿ ಅಸಾಧಾರಣ ಗೌರವವೇನೂ ಹುಟ್ಟಲಿಲ್ಲ. ಏನೂ ಅರಿಯದ ರೈತರನ್ನು ಲೂಟಿಮಾಡುವ ವಕೀಲರಲ್ಲಿ ಇವರೂ ಒಬ್ಬರಿರಬೇಕೆಂದು ನಾನು ತಿಳಿದುಕೊಂಡೆನು. ಅವರು ಚಂಪಾರಣ್ಯದ ವಿಷಯವಾಗಿ ಹೇಳಿದುದನ್ನು ಸ್ವಲ್ಪ ಕೇಳಿ ನಾನು ನನ್ನ ಪದ್ಧತಿಯ ಪ್ರಕಾರ "ನಾನು ನನ್ನ ಕಣ್ಣಿಂದ ಅಲ್ಲಿನ ಸ್ಥಿತಿಯನ್ನು ನೋಡಿದ ಹೊರತು ಯಾವ ಅಭಿಪ್ರಾಯವನ್ನೂ ಕೊಡಲಾರೆನು. ನೀವು ಮಹಾಸಭೆಯಲ್ಲಿ ಈ ವಿಷಯವಾಗಿ ಗೊತ್ತುವಳಿಯನ್ನು ತನ್ನಿ. ಆದರೆ ಸದ್ಯಕ್ಕೆ ನನ್ನ ಪಾಡಿಗೆ ನನ್ನನ್ನು ಬಿಡಿ" ಎಂದು ಉತ್ತರ ಕೊಟ್ಟೆನು. ರಾಜಕುಮಾರ ಶುಕ್ಲರಿಗೇನೋ ಮಹಾಸಭೆಯ ಸಹಾಯವು ಬೇಕಾಗಿದ್ದಿತು. ಬಾಬು ಬ್ರಜಕಿಶೋರ ಪ್ರಸಾದರು ಚಂಪಾರಣ್ಯದ ಜನರೊಡನೆ ಸಹಾನುಭೂತಿಯನ್ನು ಸೂಚಿಸುವ ಪ್ರಸ್ತಾಪವನ್ನು ಮಹಾಸಭೆಯಲ್ಲಿ ತಂದರು. ಅದು ಸರ್ವಸಮ್ಮತಿಯಿಂದ ಅಂಗೀಕೃತವಾಯಿತು.

ಇದರಿಂದ ರಾಜಕುಮಾರ ಶುಕ್ಲರು ಸಂತೋಷಪಟ್ಟರೂ ಅವರು ಇಷ್ಟಕ್ಕೇ ತೃಪ್ತಿಪಡಲಿಲ್ಲ. ನಾನೇ ಸ್ವತಃ ಚಂಪಾರಣ್ಯಕ್ಕೆ ಹೋಗಿ ಅಲ್ಲಿನ ರೈತರು ಪಾಡು ಪಡುವುದನ್ನು ನೋಡಬೇಕೆಂದು ಅವರು ಇಷ್ಟಪಟ್ಟರು. ನಾನು ದೇಶಾಟನ ಮಾಡಬೇಕೆಂದಿರುವೆನೆಂದೂ ಅದರ ಮಧ್ಯ ಚಂಪಾರಣ್ಯದಲ್ಲಿಯೂ ಒಂದೆರಡು ದಿನ ಕಳೆಯುವೆನೆಂದೂ ಹೇಳಿದೆನು. "ಒಂದು ದಿನ ಸಾಕು. ನೀವೇ ಅಲ್ಲಿನ ಸ್ಥಿತಿಯನ್ನು ಕಣ್ಣಿಂದ ನೋಡುವಿರಿ." ಎಂದರವರು.

ಲಖನವಿನಿಂದ ನಾನು ಕಾನಪುರಕ್ಕೆ ಹೋದೆನು. ರಾಜಕುಮಾರ ಶುಕ್ಲರು ನನ್ನನ್ನು ಅಲ್ಲಿಗೆ ಹಿಂಬಾಲಿಸಿದರು. "ಚಂಪಾರಣ್ಯವು ಇಲ್ಲಿಗೆ

ಬಹು ಸಮೀಪದಲ್ಲಿದೆ ಒಂದು ದಿವಸವನ್ನು ಕೊಡಿ" ಎಂದು ಒತ್ತಾಯ ಮಾಡಿದರು. "ಈ ಸಲ ನನ್ನನ್ನು ಕ್ಷಮಿಸಿರಿ. ನಾನು ಅಲ್ಲಿಗೆ ಬರುವೆನೆಂದು ಮಾತುಕೊಡುತ್ತೇನೆ" ಎಂದು ಹೇಳಿ ನಾನು ಇನ್ನೂ ಬಲವಾಗಿ ಬಂಧಿತನಾದೆನು.

ನಾನು ಆಶ್ರಮಕ್ಕೆ ಹಿಂತಿರುಗಿದೆನು. ಸರ್ವವ್ಯಾಪಿಗಳಾದ ರಾಜಕುಮಾರರು ಅಲ್ಲಿಯೂ ಇದ್ದರು. "ಎಂದು ಬರುವಿರೆಂಬುದನ್ನು ನಿಶ್ಚಯ ಮಾಡಿ ಈಗ ಹೇಳಿ" ಎಂದರವರು. "ಒಳ್ಳೆಯದು, ನಾನು ಇಂತಹ ದಿನ ಕಲ್ಕತ್ತೆಯಲ್ಲಿರಬೇಕು. ಆಗ ಬಂದು ನನ್ನನ್ನು ಕಂಡು ಅಲ್ಲಿಂದ ಕರೆದುಕೊಂಡು ಹೋಗಿ." ಎಂದು ನಾನು ಹೇಳಿದೆನು. ಹೋಗುವುದೆಲ್ಲಿಗೆ, ಏನುಮಾಡುವುದಕ್ಕೆ, ಏನುನೋಡುವುದಕ್ಕೆ—ಇದೊಂದೂ ನನಗೆ ತಿಳಿದಿರಲಿಲ್ಲ.

ನಾನು ಕಲ್ಕತ್ತೆಯಲ್ಲಿ ಭೂಪೇಂದ್ರಬಾಬುವಿನ ಮನೆಗೆ ಹೋಗುವುದಕ್ಕೆ ಮುಂಚೆಯೇ ರಾಜಕುಮಾರ ಶುಕ್ಲರು ಅಲ್ಲಿ ಹೋಗಿ ನೆಲೆಸಿದ್ದರು. ಹೀಗೆ ಓದುಬರಹವಿಲ್ಲದ, ನಾಗರಿಕತೆಯಿಲ್ಲದ, ಆದರೂ ದೃಢಪ್ರತಿಜ್ಞರಾದ, ಈ ರೈತರು ನನ್ನ ಮನಸ್ಸನ್ನು ಸೆರೆಹಿಡಿದರು.

ಈ ರೀತಿಯಾಗಿ ನಾವು ೧೯೧೭ ರ ಪ್ರಾರಂಭದಲ್ಲಿ ಕಲ್ಕತ್ತೆಯಿಂದ ಚಂಪಾರಣ್ಯಕ್ಕೆ ಹೊರಟೆವು. ಇಬ್ಬರೂ ಹಳ್ಳಿಯ ಗೌಡರಂತೆ ಕಾಣುತ್ತಿದ್ದೆವು. ನನಗೆ ಯಾವ ಸ್ಥಳಕ್ಕೆ ಹೋಗಬೇಕೆಂಬುದು ಕೂಡ ಗೊತ್ತಿರಲಿಲ್ಲ. ಅವರು ನನ್ನನ್ನು ಅಲ್ಲಿಗೆ ಕರೆದುಕೊಂಡು ಹೋದರು. ನಾವಿಬ್ಬರೂ ಜೊತೆಗೆ ಪ್ರಯಾಣಮಾಡಿ ಬೆಳಿಗ್ಗೆ ಪಾಟ್ನಾ (ಪಾಟಲೀಪುತ್ರ)ವನ್ನು ಸೇರಿದೆವು.

ಇದೇ ನಾನು ಪಾಟ್ನಾಕ್ಕೆ ಹೋಗಲು ಮೊದಲನೆಯ ಸಲ. ಅಲ್ಲಿ ನಾನು ಯಾರ ಮನೆಯಲ್ಲಾದರೂ ಇಳಿಯಬೇಕೆಂದರೆ ಮಿತ್ರರಾಗಲೀ ಪರಿಚಯಸ್ಥರಾಗಲೀ ಯಾರೂ ಇರಲಿಲ್ಲ. ರಾಜಕುಮಾರ ಶುಕ್ಲರು ಏನೂ ಅರಿಯದ ರೈತರಾದರೂ ಪಾಟ್ನಾದಲ್ಲಿ ಅವರಿಗೆ ಗುರುತು ಪರಿಚಯದವರಾರಾದರೂ ಇರಲೇಬೇಕೆಂದು ನಾನು ಎಣಿಸಿದ್ದೆನು. ಪ್ರಯಾಣದಲ್ಲಿ

ನನಗ ಅವರ ಪರಿಚಯವು ಇನ್ನೂ ಸ್ವಲ್ಪ ಚೆನ್ನಾಗಿ ಆಗಿದ್ದಿತು ಪಾಟ್ನಾವನ್ನು ತಲಪಿದಮೇಲೆ ಅವರ ವಿಷಯದಲ್ಲಿ ನನ್ನ ತಪ್ಪು ಅಭಿಪ್ರಾಯಗಳಾವುವೂ ಉಳಿದಿರಲಿಲ್ಲ ಅವರಿಗ ಯಾವ ವಿಷಯದ ಅರಿವೂ ಇರಲಿಲ್ಲ ತಮ್ಮ ಮಿತ್ರರೆಂದು ಅವರು ಎಣಿಸಿದ ವಕೀಲರು ಅಂತಹ ಮಿತ್ರರಾಗಿ ಏನೂ ಇರಲಿಲ್ಲ ಅವರ ಕಣ್ಣಿನಲ್ಲಿ ರಾಜಕುಮಾರ ಶುಕ್ಲರು, ಪಾಪ, ಆಳಿನಂತಿದ್ದರು ಹೀಗೆ ಕಕ್ಷಿಗಾರರಾದ ರೈತರಿಗೂ ಅವರ ವಕೀಲರಿಗೂ ಮಧ್ಯೆ ನೆರೆಯೇರಿರುವ ಗಂಗೆಯಷ್ಟು ಅಂತರವುಂಟು

ರಾಜಕುಮಾರ ಶುಕ್ಲರು ನನ್ನನ್ನು ಪಾಟ್ನಾದಲ್ಲಿ ರಾಜೇಂದ್ರಬಾಬುಗಳ ಮನೆಗೆ ಕರೆದೊಯ್ದರು ರಾಜೇಂದ್ರಬಾಬುಗಳು ಊರಿನಲ್ಲಿರಲಿಲ್ಲ ಪುರಿ (ಜಗನ್ನಾಥ)ಗೆ ಹೋಗಿದ್ದರೋ ಅಥವಾ ಇನ್ನೆಲ್ಲಿಗೆ ಹೋಗಿದ್ದರೋ ನನಗೆ ಈಗ ನೆನಪಿಲ್ಲ ಬಂಗಲೆಯಲ್ಲಿ ಒಬ್ಬರಿಬ್ಬರು ಆಳುಗಳಿದ್ದರು ಅವರು ನಮ್ಮನ್ನು ಲಕ್ಷ್ಯಕ್ಕೇ ತರಲಿಲ್ಲ ನನ್ನ ಬಳಿ ಸ್ವಲ್ಪ ಆಹಾರಪದಾರ್ಥವಿದ್ದಿತು ನನಗೆ ಖರ್ಜೂರವು ಬೇಕಾಗಿದ್ದಿತು ನನ್ನ ಜೊತೆಗಾರರು ಅದನ್ನು ಪೇಟೆಯಿಂದ ತಂದುಕೊಟ್ಟರು.

ವಿಹಾರದಲ್ಲಿ ಕಟ್ಟುನಿಟ್ಟಿನ ಅಸ್ಪೃಶ್ಯತೆಯಿದ್ದಿತು ನಾನು ಯಾವ ಜಾತಿಯವನೆಂಬುದು ಆಳುಗಳಿಗೆ ಗೊತ್ತಿರಲಿಲ್ಲವಾದುದರಿಂದ ಅವರು ಬಾವಿಯ ನೀರನ್ನು ಉಪಯೋಗಿಸುತ್ತಿರುವಾಗ ನಾನು ತೊಟ್ಟಿಯಲ್ಲಿ ನೀರೆತ್ತಕೂಡದಾಗಿದ್ದಿತು — ತೊಟ್ಟಿಯಿಂದ ಬೀಳುವ ನೀರಿನ ತೊಟ್ಟುಗಳು ಅವರಿಗೆ ತಗಲಿ ಮೈಲಿಗೆಯಾಗುವುದೆಂಬ ಹೆದರಿಕೆಯಿಂದ ರಾಜಕುಮಾರರು ನನಗೆ ಮನೆಯೊಳಗಿನ ಕಕ್ಕಸವನ್ನು ತೋರಿಸಿದರು, ಆಳು ಒಡನೆಯೇ ಹೊರಗಿನದನ್ನು ತೋರಿಸಿದನು ಇದೆಲ್ಲದರಿಂದ ನನಗೆ ಆಶ್ಚರ್ಯವಾಗಲಿ ಕೋಪವಾಗಲಿ ಉಂಟಾಗಲಿಲ್ಲ ಏಕೆಂದರೆ ನನಗೆ ಇದು ಅಭ್ಯಾಸವಾಗಿಹೋಗಿದ್ದಿತು ಆಳುಗಳು ತಮ್ಮ ಕರ್ತವ್ಯವನ್ನು ಮಾಡುತ್ತಿದ್ದರು — ಅವರ ಎಣಿಕೆಯ ಪ್ರಕಾರ ರಾಜೇಂದ್ರಬಾಬುಗಳು ಇಷ್ಟಪಡುವುದನ್ನೇ ಮಾಡುತ್ತಿದ್ದರು.

ಈ ಕುತೂಹಲಜನಕವಾದ ಅನುಭವದಿಂದ ನನಗೆ ರಾಜಕುಮಾರ ಶುಕ್ಲರನ್ನು ಇನ್ನೂ ಚೆನ್ನಾಗಿ ಅರಿಯುವುದರ ಜೊತೆಗೆ ಅವರಲ್ಲಿ ನನಗಿದ್ದ ಗೌರವವೂ ಹೆಚ್ಚಿತು ರಾಜಕುಮಾರ ಶುಕ್ಲರು ನನಗೆ ದಾರಿ ತೋರಿಸಲಾರರೆಂದೂ ಇನ್ನು ನಾನೇ ಸೂತ್ರವನ್ನು ವಹಿಸಬೇಕೆಂದೂ ನನಗೆ ಈಗ ಸ್ಪಷ್ಟವಾಯಿತು

——

## ೧೩

# ಸಾಧುಶೀಲರಾದ ವಿಹಾರಿಗಳು

ಮೌಲಾನಾ ಮುಜಹರ್-ಉಲ್ ಹಕ್‌ರವರು ಲಂಡನಿನಲ್ಲಿ ಬ್ಯಾರಿಸ್ಟರೀ ಪರೀಕ್ಷೆಗೆ ಓದುತ್ತಿದ್ದಾಗ ನನಗೆ ಅವರ ಗುರುತಾಗಿದ್ದಿತು. ೧೯೧೫ರಲ್ಲಿ ಮುಂಬಯಿಯಲ್ಲಿ ನೆರೆದ ಮಹಾಸಭೆಯಲ್ಲಿ—ಆ ವರ್ಷ ಅವರು 'ಮುಸ್ಲಿಂ ಲೀಗ್' (ಮುಸಲ್ಮಾನರ ರಾಜಕೀಯ ಸಂಸ್ಥೆ) ಅಧಿವೇಶನದ ಅಧ್ಯಕ್ಷರಾಗಿದ್ದರು—ಅವರನ್ನು ನಾನು ಕಂಡಾಗ ಅವರು ಹಿಂದಿನ ಪರಿಚಯಕ್ಕೆ ಹೊಸ ಜೀವಕಳೆಯನ್ನಿತ್ತು, ನಾನು ಪಾಟ್ನಾ ನಗರಕ್ಕೆ ಹೋದಾಗಲೆಲ್ಲಾ ತಮ್ಮ ಮನೆಯಲ್ಲೇ ಇಳಿಯಬೇಕೆಂದು ನಿಮಂತ್ರಣ ಕೊಟ್ಟಿದ್ದರು. ನಾನು ಆಹ್ವಾನವನ್ನು ನೆನಪಿಗೆ ತಂದುಕೊಂಡು ಅವರಿಗೆ ನಾನು ಅಲ್ಲಿಗೆ ಬಂದ ಕೆಲಸವನ್ನು ತಿಳಿಸಿ ಕಾಗದವನ್ನು ಕಳುಹಿಸಿದೆನು. ಅವರು ಒಡನೆಯೇ ತಮ್ಮ ಮೋಟಾರಿನಲ್ಲಿ ಬಂದು ನಾನು ತಮ್ಮ ಆತಿಥ್ಯವನ್ನು ಸ್ವೀಕರಿಸಬೇಕೆಂದು ಒತ್ತಾಯಮಾಡಿದರು. ನಾನು ಅವರಿಗೆ ನನ್ನ ಕೃತಜ್ಞತೆಯನ್ನು ವ್ಯಕ್ತಪಡಿಸಿ ಮೊಟ್ಟಮೊದಲು ದೊರಕುವ ರೈಲ್‌ಗಾಡಿಯಲ್ಲಿಯೇ ನನ್ನನ್ನು ಚಂಪಾರಣ್ಯಕ್ಕೆ ಕಳುಹಿಸಿಕೊಡಬೇಕೆಂದು ಬಿನ್ನಯಿಸಿದೆನು. 'ರೈಲ್ವೇ ವಿಷಯಸೂಚಿ'ಯಿಂದ ನನ್ನಂತಹ ಹೊರಗಿನವನಿಗೆ ಯಾವ ಪ್ರಯೋಜನವೂ ಆಗುವಂತಿರಲಿಲ್ಲ. ಅವರು ರಾಜಕುಮಾರ ಶುಕ್ಲರೊಡನೆ ನಾನು ಮೊದಲು ಮುಜಫ್ಫರಪುರಕ್ಕೆ ಹೋಗಬೇಕೆಂದು ಸೂಚಿಸಿದರು. ಆ ಸಂಜೆಯೇ ಅಲ್ಲಿಗೆ ಹೊರಡುವುದೊಂದು ರೈಲುಗಾಡಿಯಿದ್ದಿತು. ಅವರು ನನ್ನನ್ನು ಅದರಲ್ಲಿ ಕಳುಹಿಸಿಕೊಟ್ಟರು.

ಆಚಾರ್ಯ ಕೃಪಾಲನಿಯವರು ಆಗ ಮುಜಫ್ಫರಪುರದಲ್ಲಿದ್ದರು. ನಾನು (ಸಿಂಧೂದೇಶದಲ್ಲಿರುವ) ಹೈದರಾಬಾದಿಗೆ ಹೋದಂದಿನಿಂದ ನನಗೆ ಅವರ ವಿಷಯವು ತಿಳಿದಿದ್ದಿತು. ಡಾ. ಚೋಯಿಥರಾಮರು ಅವರ ಮಹಾತ್ಯಾಗವೃತ್ತಿಯ ವಿಷಯವನ್ನೂ ಅವರ ಜೀವನದ ಸರಳತೆಯನ್ನೂ

ಅವರು ಒದಗಿಸಿಕೊಟ್ಟ ಹಣದಿಂದ ತಾವು ನಡೆಸುತ್ತಿದ್ದ ಆಶ್ರಮದ ಸಂಗ ತಿಯನ್ನೂ ನನಗೆ ತಿಳಿಸಿದ್ದರು. ಅವರು ಮುಜಫ್ಫರಪುರದ ಸರಕಾರೀ ಪ್ರೌಢವಿದ್ಯಾಶಾಲೆಯ ಅಧ್ಯಾಪಕರಲ್ಲಿ ಒಬ್ಬರಾಗಿದ್ದು ನಾನು ಅಲ್ಲಿಗೆ ಹೋದಾಗತಾನೇ ತಮ್ಮ ಕೆಲಸಕ್ಕೆ ರಾಜೀನಾಮೆ ಕೊಟ್ಟಿದ್ದರು. ನಾನು ಅಲ್ಲಿಗೆ ಬರುವೆನೆಂದು ತಾರು ಕಳುಹಿಸಿದ್ದೆನು. ರೈಲು ಅಲ್ಲಿಗೆ ಮಧ್ಯರಾತ್ರಿ ತಲಪಿದರೂ ಅವರು ಅನೇಕ ವಿದ್ಯಾರ್ಥಿಗಳೊಡನೆ ಒಂದು ನನ್ನನ್ನು ನಿಲ್ದಾಣದಲ್ಲಿ ಇದಿರುಗೊಂಡರು. ಅವರು ತಾವೇ ಮನೆ ಮಾಡಿಕೊಂಡಿರಲಿಲ್ಲ, ಅಧ್ಯಾಪಕ ಮಲ್ಕಾನಿಯವರ ಮನೆಯಲ್ಲಿ ವಾಸಿ ಸುತ್ತಿದ್ದರು. ಆದುದರಿಂದ ಮಲ್ಕಾನಿಯವರೇ ನಿಜವಾಗಿಯೂ ನನಗೆ ಆತಿಥ್ಯ ನಡೆಸಿದರು. ಆ ಕಾಲದಲ್ಲಿ ಸರಕಾರದ ನೌಕರರು ನನ್ನಂತಹರನ್ನು ಮನೆಯಲ್ಲಿಟ್ಟುಕೊಳ್ಳುವುದು ಅಸಾಧಾರಣ ವಿಷಯವಾಗಿದ್ದಿತು.

ಆಚಾರ್ಯ ಕೃಪಾಲಾನಿಯವರು ನನಗೆ ವಿಹಾರದ—ಅದರಲ್ಲಿಯೂ ತಿರಹುತ್ ಪ್ರಾಂತದ—ಅತಿ ಶೋಚನೀಯ ಅವಸ್ಥೆಯನ್ನು ವಿವರಿಸಿ ನನ್ನ ಕಾರ್ಯವೆಷ್ಟು ಕಠಿಣವೆಂಬುದನ್ನು ತಿಳಿಯಹೇಳಿದರು. ಅವರು ವಿಹಾರಿ ಗಳೊಡನೆ ನಿಕಟಸಂಬಂಧವನ್ನು ಬೆಳೆಸಿದ್ದರು. ನಾನು ವಿಹಾರಕ್ಕೆ ಹೋಗುವ ಉದ್ದೇಶವನ್ನು ಅವರು ಆಗಲೇ ಜನರಿಗೆ ತಿಳಿಸಿದ್ದರು.

ಬೆಳಿಗ್ಗೆ ವಕೀಲರ ಸಣ್ಣ ಗುಂಪೊಂದು ನನ್ನನ್ನು ಭೆಟ್ಟಿಮಾಡಲು ಬಂದಿತು. ಅವರಲ್ಲಿ ರಾಮನವಮಿ ಪ್ರಸಾದರಿದ್ದುದು ನನಗೆ ಇನ್ನೂ ನೆನಪಿನಲ್ಲಿದೆ. ಏಕೆಂದರೆ ಅವರ ಶ್ರದ್ಧೆಯು ವಿಶೇಷವಾಗಿ ನನ್ನ ಮನಸ್ಸಿಗೆ ಅಂಟಿತು.

"ನೀವು ಮಾಡಬಂದಿರುವ ಕಾರ್ಯವನ್ನು ನೀವು ಇಲ್ಲಿ (ಅಧ್ಯಾಪಕ ಮಲ್ಕಾನಿಯವರ ಮನೆಯಲ್ಲಿ) ನಿಂತರೆ ನಡೆಸಲಾಗುವುದಿಲ್ಲ. ನಮ್ಮಲ್ಲಿ ಯಾರ ಮನೆಗಾದರೂ ನೀವು ಬಂದು ನಿಲ್ಲಬೇಕು. ಗಯಾ ಬಾಬುಗಳು ಇಲ್ಲಿ ಪ್ರಸಿದ್ಧರಾದ ವಕೀಲರು. ನಿಮ್ಮನ್ನು ಅವರ ಮನೆಗೆ ಕರೆಯಲು ನಾನು ಅವರ ಪರವಾಗಿ ಇಲ್ಲಿಗೆ ಬಂದಿದ್ದೇನೆ. ನಮಗೆಲ್ಲರಿಗೂ ಸರಕಾರ ವನ್ನು ಕಂಡರೆ ದಿಗಿಲೆಂದು ಒಪ್ಪಿಕೊಳ್ಳುತ್ತೇವೆ. ಆದರೆ ನಮ್ಮ ಕೈಲಾದ ಸಹಾಯವನ್ನು ಮಾಡಲು ನಾವು ಸಿದ್ಧರಾಗಿದ್ದೇವೆ. ರಾಜಕುಮಾರ

ಶುಕ್ಲರು ಹೇಳಿರುವುದೆಲ್ಲಾ ಬಹುಮಟ್ಟಿಗೆ ನಿಜ ಸಸ್ಮ್ಯ ಮುಖಂಡರಾಳು ಗಳು ಈ ದಿನ ಇಲ್ಲಿ ಇದ್ದಿದ್ದರೆ ಒಳಿತಾಗುತ್ತಿದ್ದಿತು ನಾನು ಅವರಿಬ್ಬ ರಿಗೂ—ಬಾಬೂ ವ್ರಜಕಿಶೋರ ಪ್ರಸಾದರಿಗೂ ಬಾಬೂ ರಾಜೇಂದ್ರ ಪ್ರಸಾದರಿಗೂ—ತಂತಿ ಕಳುಹಿಸಿದ್ದೇನೆ. ಅವರು ಇಷ್ಟರಲ್ಲಿಯೇ ಬರು ವರೆಂದು ನನ್ನ ನಿರೀಕ್ಷಣೆ ಅವರು ನಿಮಗೆ ಬೇಕಾದ ವಿಷಯವನ್ನೆಲ್ಲಾ ತಿಳಿಸುವುದೂ ಹೆಚ್ಚಾಗಿ ಸಹಾಯವನ್ನಾಡುವುದೂ ಖಂಡಿತ ದಯೆ ಯಿಟ್ಟು ಗಯಾ ಬಾಬುಗಳ ಮನೆಗೆ ಬನ್ನಿ '' ಎಂದರವರು

ಇದಕ್ಕೆ ಒಪ್ಪಿದರೆ ಗಯಾಬಾಬುಗಳಿಗೆ ತೊಂದರೆಗೆ ಕಾರಣವಾಗ ಬಹುದೆಂದು ಒಂದು ಕ್ಷಣ ಶಂಕಿಸಿದೆನಾದರೂ ನಾನು ಈ ವಿನಂತಿ ಯನ್ನು ನಿರಾಕರಿಸುವಂತಿರಲಿಲ್ಲ. ಗಯಾಬಾಬುಗಳು ನನ್ನ ಸಂಕೋಚ ವನ್ನು ಪರಿಹರಿಸಿದರು. ಆದುದರಿಂದ ನಾನು ಅವರ ಮನೆಗೆ ಹೋದೆನು ಅವರೂ ಅವರ ಮನೆಯವರೂ ನನ್ನಮೇಲೆ ವಾತ್ಸಲ್ಯಧಾರೆಯನ್ನು ಸುರಿಸಿದರು.

ಈಗ ವ್ರಜಕಿಶೋರ ಬಾಬುಗಳು ದರ್ಭಾಂಗದಿಂದಲೂ ರಾಜೇಂದ್ರ ಬಾಬುಗಳು ಪುರಿಯಿಂದಲೂ ಬಂದರು ವ್ರಜಕಿಶೋರ ಬಾಬುಗಳು ನಾನು ಲಖನವಿನಲ್ಲಿ ನೋಡಿದ ವ್ರಜಕಿಶೋರ ಬಾಬುಗಳಂತೆ ಕಾಣಲಿಲ್ಲ ಈ ಬಾರಿ ಅವರಲ್ಲಿ ಕಂಡುಬಂದ ವಿಹಾರೀ ನಮ್ರತೆಯೂ ಸರಳತೆಯೂ ಸಾಧುತನವೂ ಅಸಾಧಾರಣ ಶ್ರದ್ಧೆಯೂ ನನ್ನ ಮನಸ್ಸಿನಲ್ಲಿ ಛಾಪಿತವಾದುವು ಇದರಿಂದ ನನ್ನ ಹೃದಯವು ಹರ್ಷಪೂರ್ಣವಾ ಯಿತು ವಿಹಾರೀ ವಕೀಲರು ಅವರಲ್ಲಿಟ್ಟಿದ್ದ ಗೌರವವನ್ನು ನೋಡಿ ನನಗೆ ಆಶ್ಚರ್ಯವೂ ಆನಂದವೂ ಉಂಟಾಯಿತು.

ಈ ಮಿತ್ರಮಂಡಲಿಯೊಡನೆ ನಾನು ಆಜೀವಮೈತ್ರಿಯಿಂದ ಬಂಧಿ ತನಾಗುತ್ತಿದ್ದೆನೆಂಬುದು ನನಗೆ ಜಾಗ್ರತೆಯಾಗಿಯೇ ತೋರುತ್ತಾ ಬಂದಿತು ವ್ರಜಕಿಶೋರ ಬಾಬುಗಳು ನನಗೆ ವಸ್ತುಸ್ಥಿತಿಯನ್ನು ತಿಳಿಸಿ ದರು. ಅವರು ಬಡರೈತರ ಮೊಕದ್ದಮೆಗಳನ್ನು ತೆಗೆದುಕೊಳ್ಳುತ್ತಿದ್ದರು ನಾನು ಅಲ್ಲಿಗೆ ಹೋದಾಗ ಇಂತಹ ಮೊಕದ್ದಮೆಗಳೆರಡು ನಡೆಯುತ್ತಿ ದ್ದುವು. ಇಂತಹುದಾವುದನ್ನಾದರೂ ಗೆದ್ದಾಗ ಅವರು ತಾವು ಈ ಬಡ

ಜನರಿಗೆ ಅಷ್ಟು ಇಷ್ಟು ನೆರವಿತ್ತೆನೆಂದೆಣಿಸಿ ಸಮಾಧಾನಪಟ್ಟುಕೊಳ್ಳು ತ್ತಿದ್ದರು. ಈ ಅರಿವಿಲ್ಲದ ರೈತರಿಂದ ಅವರು ರುಸುಮು (ಫೀಜ) ನ್ನು ತೆಗೆ ದುಕೊಳ್ಳದಿದ್ದರೆ ತಮ್ಮ ಸಂಸಾರವನ್ನು ನಡೆಸುವುದಕ್ಕೆ ಹಣವೇ ಇರು ವುದಿಲ್ಲವೆಂದೂ ಬಡಬಗ್ಗರಿಗೆ ಸಫಲಸಹಾಯವನ್ನು ಮಾಡಲು ಆಗುವುದಿಲ್ಲ ವೆಂದೂ ತಪ್ಪು ತಿಳಿದುಕೊಂಡಿರುತ್ತಾರೆ ಅವರು ತೆಗೆದುಕೊಳ್ಳುತ್ತಿದ್ದ ರುಸುಮುಗಳನ್ನೂ ಬಂಗಾಳದಲ್ಲಿಯೂ ವಿಹಾರದಲ್ಲಿಯೂ ಬ್ಯಾರಿಸ್ಟರು ಗಳಿಗೆ ಕೊಡಬೇಕಾಗಿದ್ದ ರುಸುಮುನ್ನೂ ನೋಡಿ ನನಗೆ ದಿಗ್ಭ್ರಮ ಯಾಯಿತು

". . ರಿಗೆ ಅವರ ಅಭಿಪ್ರಾಯಕ್ಕಾಗಿ ಹತ್ತುಸಾವಿರ ರೂಪಾಯಿ ಗಳನ್ನು ಕೊಟ್ಟೆವು." ಎಂದು ನನಗೆ ಹೇಳಿದರು. ಸಾವಿರಕ್ಕೆ ಕಡಮೆ ಯಂತು ಎಂದಿಗೂ ಲೆಕ್ಕಕ್ಕೇ ಇಲ್ಲ.

ಈ ವಿಷಯವನ್ನು ಕುರಿತು ನಾನು ಸದುದ್ದೇಶಪೂರ್ವಕವಾಗಿ ಒಳ್ಳೆಯ ಮಾತಿನಲ್ಲಿ ಮಾಡಿದ ವಾಗ್ದಂಡನೆಯನ್ನು ಈ ಮಿತ್ರರು ಅನ್ಯಥಾ ಎಣಿಸದೆ ಕಿವಿಗೊಟ್ಟು ಕೇಳಿದರು.

"ಈ ಮೊಕದ್ದಮೆಗಳನ್ನು ಓದಿದಮೇಲೆ ನನಗೆ ತೋರುವುದೇನೆಂ ದರೆ ನಾವು ನ್ಯಾಯಸ್ಥಾನಗಳಿಗೆ ಹೋಗುವುದನ್ನು ನಿಲ್ಲಿಸಬೇಕು. ಇಂತಹ ವ್ಯಾಜ್ಯಗಳನ್ನು ಕೋರ್ಟಿಗೆ ಕೊಂಡೊಯ್ಯುವುದರಿಂದ ಯಾವ ಲಾಭವೂ ಫಲಿಸುವುದಿಲ್ಲ ರೈತರು ಹೀಗೆ ಅರೆಯಲ್ಪಟ್ಟು ಚಟ್ನಿಯಾಗಿ ಭಯಾಕುಲರಾಗಿರುವಾಗ ನ್ಯಾಯಸ್ಥಾನಗಳಿಂದುಂಟಾಗುವ ಪ್ರಯೋಜ ನವೇನು ? ದಿಗಿಲನ್ನು ತೊಲಗಿಸುವುದೇ ಇದಕ್ಕೆ ನಿಜವಾದ ಮದ್ದು. ತೀನ್ ಕಠಿಯಾ ಪದ್ಧತಿಯನ್ನು ವಿಹಾರದ ಹೊರಗಟ್ಟುವವರೆಗೂ ನಾವು ಸುಮ್ಮನೆ ಕುಳಿತುಕೊಳ್ಳಲಾಗುವುದಿಲ್ಲ. ಎರಡು ದಿವಸದಲ್ಲಿ ಇಲ್ಲಿಂದ ಹೊರಡಬಹುದೆಂದು ನಾನು ತಿಳಿದುಕೊಂಡಿದ್ದೆನು. ಆದರೆ ಈ ಕೆಲಸವು ಎರಡುವರ್ಷ ಹಿಡಿದರೂ ಹೆಚ್ಚಲ್ಲವೆಂಬುದು ನನಗೆ ಈಗ ಗೊತ್ತಾಗುತ್ತದೆ ಅಗತ್ಯವೊದಗಿದರೆ ಅಷ್ಟು ಕಾಲವನ್ನೂ ಇಲ್ಲಿ ಕಳೆಯಲು ನಾನು ಸಿದ್ಧನಾ ಗಿದ್ದೇನೆ. ನನಗೆ ಮುಂದಿನ ಮಾರ್ಗವು ಅಷ್ಟು ಇಷ್ಟು ಕಾಣುತ್ತಾ ಇದೆ. ಆದರೆ ನಿಮ್ಮ ಒತ್ತಾಸೆಯು ನನಗೆ ಬೇಕು." ಎಂದು ಹೇಳಿದೆನು.

ಬಾಬೂ ವಜ್ರಕಿಶೋರಪ್ರಸಾದರು ಅಸಾಧಾರಣ ಸ್ಥಿರಪ್ರಜ್ಞೆಯಿಂ ದಿದ್ದುದನ್ನು ಕಂಡೆನು. "ನಮ್ಮ ಕೈಲಾದ ಸಹಾಯವನ್ನೆಲ್ಲಾ ನಾವು ಮಾಡುವವು. ಆದರೆ ನಿಮಗೆ ಬೇಕಾದುದೆಂತಹುದೆಂಬುದನ್ನು ದಯೆ ಯಿಟ್ಟು ಹೇಳಿ." ಎಂದು ಅವರು ಶಾಂತಿಯಿಂದ ಹೇಳಿದರು.

ಹೀಗೆಯೇ ನಾವು ಮಧ್ಯರಾತ್ರಿಯವರೆಗೂ ಮಾತನಾಡುತ್ತಾ ಕುಳಿತೆವು

"ಕಾನೂನಿನ ಸಂಬಂಧವಾಗಿ ನಿಮಗಿರುವ ಪರಿಶ್ರಮದಿಂದ ನನ ಗೇನೂ ಉಪಯೋಗವಾಗುವುದಿಲ್ಲ ನನಗೆ ಗುಮಾಸ್ತರ ಮತ್ತು ದ್ವಿಭಾಷಿಗಳ ಸಹಾಯವು ಬೇಕು. ಸರಮನೆಗೆ ಹೋಗಬೇಕಾಗಿ ಬರಬ ಹುದು ಆದರೆ ನೀವು ಆ ಅಪಾಯಕ್ಕೆ ಸಿಕ್ಕುವುದು ನನಗೆ ಎಷ್ಟೇ ಇಷ್ಟ ವಿದ್ದರೂ ನೀವು ಎಷ್ಟು ದೂರ ಹೋಗುವ ಶಕ್ತಿಯಿದೆಯೋ ಅಷ್ಟು ದೂರ ಮಾತ್ರ ಹೋಗಿರಿ ನಿಮ್ಮ ಉದ್ಯೋಗವನ್ನು ಅನಿಶ್ಚಿತಕಾಲಪರ್ಯಂತ ಬಿಟ್ಟು ನೀವುಗಳು ಗುಮಾಸ್ತರಾಗಿರುವುದು ಕೂಡ ಸಣ್ಣದಲ್ಲ ಇಲ್ಲಿ ಮಾತನಾಡುವ ಹಿಂದಿಯ ಪ್ರಾಂತಿಕವಿಭೇದವನ್ನು ತಿಳಿದುಕೊಳ್ಳುವುದು ನನಗೆ ಕಷ್ಟ ಕೈಥಿಯಲ್ಲಿ ಅಥವಾ ಉರ್ದುವಿನಲ್ಲಿ ಬರೆದ ಪತ್ರಗಳನ್ನು ಓದ ಲು ನನಗೆ ಬರುವುದಿಲ್ಲ ಅವುಗಳನ್ನು ನೀವು ನನಗೆ ಭಾಷಾಂತರಮಾಡಬೇ ಕಾಗುವುದು ಈ ಕೆಲಸಕ್ಕೆಲ್ಲಾ ನಾವು ಸಂಬಳವನ್ನು ಕೊಡಲಾಗುವು ದಿಲ್ಲ ಇದೆಲ್ಲವನ್ನೂ ಪ್ರೇಮಪೂರ್ವಕವಾಗಿಯೂ ಸೇವಾಭಾವದಿಂ ದಲೂ ಮಾಡಬೇಕು" ಎಂದು ನಾನು ಅವರಿಗೆ ಹೇಳಿದೆನು.

ವ್ರಜಕಿಶೋರಬಾಬುಗಳು ಇದೆಲ್ಲವನ್ನೂ ಒಡನೆಯೇ ತಿಳಿದುಕೊಂ ಡರು ಅವರು ಈಗ ನನ್ನನ್ನೂ ಅವರ ಸಂಗಡಿಗರನ್ನೂ—ಒಬ್ಬರಾಗು ತ್ತಲೊಬ್ಬರನ್ನು—"ಪಾಟಿಸವಾಲು" ಮಾಡಿದರು. ನಾನು ಹೇಳಿದು ದಲ್ಲದರ ಫಲಿತಾರ್ಥವನ್ನು—ಎಷ್ಟು ದಿನ ಸೇವಾಕಾರ್ಯದಲ್ಲಿ ತೊಡಗಿರ ಬೇಕು, ಎಷ್ಟುಜನಬೇಕು, ಸರದಿಯಮೇರೆ ಕೆಲಸಮಾಡಬಹುದೆ, ಇತ್ಯಾದಿ—ತಿಳಿದುಕೊಳ್ಳಲು ಯತ್ನಿಸಿದರು ಇದಾದಮೇಲೆ ಅವರು ವಕೀಲರುಗಳಲ್ಲಿ ತ್ಯಾಗಶಕ್ತಿಯೆಷ್ಟಿದೆಯೆಂಬುದನ್ನು ಕುರಿತು ಅವರುಗ ಳನ್ನು ಪ್ರಶ್ನೆಮಾಡಿದರು.

ಕಡೆಗೆ ಅವರುಗಳು ನನಗೆ ಈರೀತಿಯಾಗಿ ಭರವಸೆಕೊಟ್ಟರು, "ನಮ್ಮಲ್ಲಿ (ಸಂಖ್ಯೆಯನ್ನು ತಿಳಿಸಿ) ಇಷ್ಟು ಜನ ನೀವು ಹೇಳಿದಂತೆ ಮಾಡುತ್ತೇವೆ. ನಮ್ಮಲ್ಲಿ ಕೆಲವರು ನಿಮಗೆ ಅಗತ್ಯವಾದಷ್ಟು ದಿನ ನಿಮ್ಮ ಬಳಿ ಇರುತ್ತೇವೆ. ಸೆರಮನೆಗೆ ಹೋಗುವುದು ನಮಗೆ ಹೊಸ ವಿಷಯ. ಆದರೂ ಅದು ನಮಗೆ ಒಂಟುವಂತೆ ನಾವು ಪ್ರಯತ್ನಪಡುತ್ತೇವೆ."

---

## ೧೪

# ಅಹಿಂಸಾದೇವಿಯ ಸಮ್ಮುಖದಲ್ಲಿ

ಚಂಪಾರಣ್ಯದ ರೈತರ ಪರಿಸ್ಥಿತಿಯನ್ನು ವಿಮರ್ಶಿಸಿ ಅವರು ನೀಲಿಯ ಜಮೀನ್ದಾರರ ವಿಷಯವಾಗಿ ಹೇಳುತ್ತಿದ್ದ ಆರೋಪಣೆಗಳನ್ನರಿಯುವುದು ನನ್ನ ಉದ್ದೇಶವಾಗಿದ್ದಿತು. ಇದಕ್ಕಾಗಿ ನಾನು ಸಾವಿರಾರು ರೈತರನ್ನು ಕಾಣುವುದು ಅವಶ್ಯಕವಾಗಿದ್ದಿತು. ವಿಮರ್ಶೆಯನ್ನು ಆರಂಭಿಸುವುದಕ್ಕೆ ಮುಂಚೆ ಈ ವ್ಯಾಜ್ಯದಲ್ಲಿ ಜಮೀನ್ದಾರರ ಪಕ್ಷವನ್ನು ತಿಳಿದುಕೊಳ್ಳುವುದೂ ಆ ಪ್ರಾಂತ್ಯವಿಭಾಗದ ಅಧಿಕಾರಿಗಳನ್ನು ಬೆಟ್ಟಿಮಾಡುವುದೂ ಅತಿಮುಖ್ಯವೆಂದು ನಾನು ಎಣಿಸಿದೆನು. ಇಬ್ಬರಿಗೂ ನನ್ನ ಆಶಯವನ್ನು ತಿಳಿಸಿ ಪತ್ರ ಬರೆದೆನು. ಇಬ್ಬರೂ ನನ್ನನ್ನು ನೋಡಲು ಕಾಲವನ್ನು ನಿರ್ಣಯಿಸಿ ತಿಳಿಸಿದರು.

ಜಮೀನ್ದಾರ ಸಂಘದ ಕಾರ್ಯದರ್ಶಿಗಳು ಮುಚ್ಚುಮರೆಯಿಲ್ಲದೆ ನಾನು ಹೊರಗಿನವನೆಂದೂ ಜಮೀನ್ದಾರರಿಗೂ ಅವರ ರೈತರಿಗೂ ಮಧ್ಯೆ ಬರುವುದಕ್ಕೆ ಯಾವ ಅಧಿಕಾರವೂ ನನಗಿಲ್ಲವೆಂದೂ ಆದರೂ ನಾನೇನಾದರೂ ತಿಳಿಸಬೇಕಾಗಿದ್ದರೆ ಅದನ್ನು ಬರಹದ ಮೂಲಕ ಕೊಡಬೇಕೆಂದೂ ನನಗೆ ಹೇಳಿದರು. ಇದಕ್ಕೆ ನಾನು ಹೊರಗಿನವನೆಂದು ನನ್ನ ಎಣಿಕೆಯಲ್ಲವೆಂದೂ ರೈತರು ಹಾಗೆ ಇಷ್ಟಪಟ್ಟರೆ ನಾನು ಅವರ ಸ್ಥಿತಿಗತಿಗಳನ್ನು ವಿಚಾರಿಸಲು ನನಗೆ ಸಂಪೂರ್ಣ ಅಧಿಕಾರ ಉಂಟೆಂದೂ ಕಾರ್ಯದರ್ಶಿಗಳಿಗೆ ವಿನಯಪೂರ್ವಕವಾಗಿ ಹೇಳಿದೆನು.

ಪ್ರಾಂತ್ಯವಿಭಾಗದ ಅಧಿಕಾರಿಗಳನ್ನು ಬೆಟ್ಟಿಮಾಡಲು ಅವರು ನನ್ನನ್ನು ಬೆದರಿಸತೊಡಗಿ ನಾನು ತಿರಹುತ್ ಪ್ರಾಂತ್ಯವನ್ನು ಬಿಟ್ಟುಹೋಗಬೇಕೆಂದು ಸೂಚಿಸಿದರು.

ನಾನು ಇದನ್ನೆಲ್ಲಾ ನನ್ನ ಜೊತೆಯವರಿಗೆ ತಿಳಿಸಿ "ನಾನು ಮುಂದೆ ಹೋಗದಂತೆ ನನ್ನನ್ನು ಸರಕಾರದವರು ತಡೆಯುವ ಸಂಭವವುಂಟು.

ನಾನು ಎಣಿಸಿದುದಕ್ಕಿಂತ ಮುಂಚೆಯೇ ನಾನು ಸೆರೆಮನೆಗೆ ಹೋಗಬೇಕಾಗಬಹುದು. ನನ್ನನ್ನು ಬಂಧಿಸುವುದೇ ಆದರೆ ನನ್ನ ಬಂಧನವು ಮೋತೀಹಾರಿಯಲ್ಲಿ, ಸಾಧ್ಯವಿದ್ದರೆ ಬೆತಿಯಾದಲ್ಲಿ ಆಗುವುದು ಅತ್ಯುತ್ತಮ. ಆದುದರಿಂದ ಆ ಸ್ಥಳಗಳಿಗೆ ನಾನು ಆದಷ್ಟು ತ್ವರೆಯಿಂದ ಹೋಗುವುದು ಒಳ್ಳೆಯದು.'' ಎಂದು ಹೇಳಿದೆನು.

ಚಂಪಾರಣ್ಯವು ತಿರಹುತ್ ಪ್ರಾಂತ್ಯವಿಭಾಗದ ಒಂದು ಜಿಲ್ಲೆ. ಮೋತೀಹಾರಿಯು ಅದರ ಮುಖ್ಯಪಟ್ಟಣ. ರಾಜಕುಮಾರ ಶುಕ್ಲರ ಸ್ಥಳವು ಬೆತಿಯಾದ ಹತ್ತಿರವಿದ್ದಿತು. ಅದರ ಸುತ್ತಮುತ್ತಲಿನ ಕೋಠಿ (ನೀತಿಯನ್ನು ಶೇಖರಿಸುವ ಜಾಗ) ಗಳಿಗೆ ಸೇರಿದ್ದ ರೈತರು ಆ ಜಿಲ್ಲೆಯಲ್ಲೆಲ್ಲಾ ಅತ್ಯಂತ ಬಡವರಾಗಿದ್ದರು. ನಾನು ಅವರನ್ನು ನೋಡಬೇಕೆಂದು ರಾಜಕುಮಾರ ಶುಕ್ಲರಿಗೆ ತೀವ್ರವಾದ ಇಚ್ಛೆಯಿದ್ದಿತು. ನನ್ನ ಬಯಕೆಯೂ ಅಷ್ಟೇ ಪ್ರಬಲವಾಗಿದ್ದಿತು.

ಆದುದರಿಂದ ಅದೇ ದಿನ ನಾನು ನನ್ನ ಸಂಗಡಿಗರೊಡನೆ ಮೋತೀಹಾರಿಗೆ ಹೊರಟೆನು. ಬಾಬೂ ಗೋರಖ ಪ್ರಸಾದರು ನಮಗೆ ಅವರ ಮನೆಯಲ್ಲಿ ಇಂಬುಗೊಟ್ಟರು. ಅದೊಂದು ಧರ್ಮಶಾಲೆಯಾಯಿತು. ನಾವೆಲ್ಲರೂ ಅವರಲ್ಲಿ ಹಿಡಿಸುವುದು ಕಷ್ಟವಾಗಿದ್ದಿತು. ಮೋತೀಹಾರಿಯಿಂದ ಸುಮಾರು ಐದು ಮೈಲಿ ದೂರದಲ್ಲಿ ಒಬ್ಬ ರೈತನ ಮೇಲೆ ಅತ್ಯಾಚಾರ ನಡೆಸಿದ ವರ್ತಮಾನವು ನಮಗೆ ಆ ದಿನವೇ ಬಂದಿತು. ಮಾರನೆಯ ದಿನ ಬೆಳಿಗ್ಗೆ ನಾನು ಧರಣೀಧರ ಪ್ರಸಾದರೊಡನೆ ಹೋಗಿ ಅವನನ್ನು ನೋಡಿಕೊಂಡು ಬರಬೇಕೆಂದು ನಿಶ್ಚಯವಾಯಿತು. ಅದರಂತೆಯೇ ನಾವು ಆನೆಯ ಮೇಲೆ ಅಲ್ಲಿಗೆ ಹೊರಟೆವು. ಗುಜರಾತಿನಲ್ಲಿ ಎತ್ತಿನ ಗಾಡಿಯು ಎಷ್ಟು ಸಾಧಾರಣವೋ ಚಂಪಾರಣ್ಯದಲ್ಲಿ ಆನೆಯು ಅಷ್ಟು ಸಾಮಾನ್ಯವೆಂದು ಹೇಳಬೇಕು. ನಾವು ಅರ್ಧ ದಾರಿ ಹೋಗುವಷ್ಟರಲ್ಲಿಯೇ ಪೋಲೀಸ್ ಅಧಿಕಾರಿಗಳ ಸೇವಕನೊಬ್ಬನು ನಮ್ಮ ಬಳಿಗೆ ಬಂದು ಪೋಲೀಸ್ ಅಧಿಕಾರಿಗಳ ವಂದನೆಯನ್ನು ನಮಗೆ ತಿಳಿಸಿದನು. ಅವನ ಅರ್ಥವು ನನಗೆ ಗೊತ್ತಾಯಿತು. ಧರಣೀಧರ ಬಾಬುಗಳನ್ನು ಮುಂದಕ್ಕೆ ಹೋಗುವುದಕ್ಕೆ ಬಿಟ್ಟು ನಾನು ಸೇವಕನು ತಂದಿದ್ದ ಬಾಡಿಗೆ ಗಾಡಿ

ಯೊಳಗೆ ಕುಳಿತುಕೊಂಡೆನು ಆಗ ಅವನು ನಾನು ಚಂಪಾರಣ್ಯವನ್ನು ಬಿಟ್ಟುಹೋಗಬೇಕೆಂದು ಬರೆದಿದ್ದ ಆಜ್ಞಾಪತ್ರವನ್ನು ನನಗೆ ಕೊಟ್ಟು ನನ್ನ ಸ್ಥಳಕ್ಕೆ ನನ್ನನ್ನು ಕರೆದೊಯ್ದನು. ಆಜ್ಞಾಪತ್ರವು ನನಗೆ ತಲುಪಿದುದಕ್ಕೆ ಸಹಿಮಾಡಬೇಕೆಂದು ಅವನು ನನ್ನನ್ನು ಕೇಳಲು ನಾನು ರೈತರ ಸ್ಥಿತಿಗತಿಯನ್ನು ಪರಿಶೀಲಿಸುವ ತನಕ ಚಂಪಾರಣ್ಯವನ್ನು ಬಿಡುವ ಉದ್ದೇಶವು ನನಗಿಲ್ಲವೆಂದು ಅದರಲ್ಲಿ ಬರೆದೆನು. ಇದಾದ ಮೇಲೆ ನಾನು ಈ ಬಹಿಷ್ಕಾರನಿರೂಪವನ್ನು ಧಿಕ್ಕರಿಸಿದುದಕ್ಕಾಗಿ ವಿಚಾರಣೆಗೆ ಮರುದಿನವೇ ಬರಬೇಕೆಂದು ನನಗೆ 'ಸಮನ್ಸ್' (ಆಜ್ಞೆ) ಬಂದಿತು.

ನಾನು ಆ ಇರುಳೆಲ್ಲಾ ಎದ್ದಿದ್ದು ಕಾಗದಗಳನ್ನು ಬರೆಯುವುದರಲ್ಲಿಯೂ ಬಾಬೂ ವ್ರಜಕಿಶೋರ ಪ್ರಸಾದರಿಗೆ ಸಲಹೆಗಳನ್ನು ಕೊಡುವುದರಲ್ಲಿಯೂ ಕಳೆದೆನು.

ಎಚ್ಚರಿಕೆ ಪತ್ರವೂ ಸಮನ್ಸೂ ನನಗೆ ಬಂದ ವೃತ್ತಾಂತವು ಕಾಡುಕಿಚ್ಚಿನಂತೆ ಹರಡಿತು. ಆ ದಿನ ಮೋತೀಹಾರಿಯಲ್ಲಿ ಯಾರೂ ಎಂದೂ ನೋಡದ ದೃಶ್ಯವು ಕಂಡುಬಂದಿತೆಂದು ನನಗೆ ತಿಳಿಯಿತು. ಗೋರಖಬಾಬುಗಳ ಮನೆಯೂ ನ್ಯಾಯಸ್ಥಾನವೂ ಜನರಿಂದ ತುಂಬಿ ತುಳುಕುತ್ತಿದ್ದುವು. ಸೌಭಾಗ್ಯವಶಾತ್ ನಾನು ರಾತ್ರಿಯೇ ನನ್ನ ಕೆಲಸವನ್ನೆಲ್ಲಾ ಮುಗಿಸಿದ್ದುದರಿಂದ ಜನರ ಗುಂಪನ್ನು ತಡೆಯಲು ಸಾಧ್ಯವಾಯಿತು. ನನ್ನ ಜೊತೆಯವರಿಂದ ಅತ್ಯಂತ ಸಹಾಯವಾಯಿತು. ಅವರು ಜನರನ್ನು ಅಂಕೆಯಲ್ಲಿಡುವುದರಲ್ಲಿ ಉದ್ಯುಕ್ತರಾದರು. ಏಕೆಂದರೆ ನಾನೆಲ್ಲಿ ಹೋದರೂ ಜನಸಂದಣಿಯು ನನ್ನನ್ನು ಅಲ್ಲಿಗೆ ಹಿಂಬಾಲಿಸುತ್ತಿದ್ದಿತು.

ಜಿಲ್ಲಾಧಿಕಾರಿಗಳು, ಮ್ಯಾಜಿಸ್ಟ್ರೇಟರು, ಪೋಲೀಸ್ ಸೂಪರಿಂಟೆಂಡೆಂಟರು, ನಾನು—ಈ ನಮ್ಮಗಳ ಮಧ್ಯೆ ಒಂದು ರೀತಿಯ ಮೈತ್ರಿಯು ಉದಿಸಿತು. ನನ್ನ ಮೇಲೆ ಪ್ರಯೋಗಿಸಿದ 'ನೋಟೀಸ್' ಮುಂತಾದುವನ್ನು ನಾನು ಕಾನೂನಿನ ಪ್ರಕಾರವಾಗಿಯೇ ವಿರೋಧಿಸಬಹುದಾಗಿದ್ದಿತು. ಇದಕ್ಕೆ ಬದಲಾಗಿ ನಾನು ಅವುಗಳನ್ನೆಲ್ಲಾ ಸ್ವೀಕರಿಸಿದೆನು ಅಧಿಕಾರಿಗಳ ವಿಷಯದಲ್ಲಿ ನನ್ನ ನಡತೆಯು ಅನಿರ್ವಚನೀಯವಾಗಿದ್ದಿತು

ನಾನು ಅವರನ್ನು ವ್ಯಕ್ತಿಗತವಾಗಿ ವಿರೋಧಿಸಲಿಲ್ಲವೆಂದೂ ಅವರ ಆಜ್ಞೆಗಳನ್ನು ಸವಿನಯವಾಗಿ ವಿರೋಧಿಸುವುದೇ ನನ್ನ ಉದ್ದೇಶವೆಂದೂ ಅವರಿಗೆ ಇದರಿಂದ ಗೊತ್ತಾಯಿತು. ಈ ರೀತಿಯಾಗಿ ಅವರ ಮನಸ್ಸು ಮಾರ್ಪಟ್ಟು ಅವರು ನನ್ನನ್ನು ಪೀಡಿಸುವುದಕ್ಕೆ ಪ್ರತಿಯಾಗಿ ಜನಸಂದಣಿಯನ್ನು ಅಂಕೆಯಲ್ಲಿಟ್ಟಿರುವ ಕೆಲಸಕ್ಕೆ ನನ್ನ ಮತ್ತು ನನ್ನ ಸಂಗಡಿಗರ ಸಹಾಯವನ್ನು ಸಂತೋಷದಿಂದ ಉಪಯೋಗಿಸಿಕೊಂಡರು. ಆದರೆ ತಮ್ಮ ಅಧಿಕಾರದರ್ಪವು ಸಡಲಿತೆಂಬುದು ಕೂಡ ಇದರಿಂದ ಅವರ ಕಣ್ಣಿಗೆ ವ್ಯಕ್ತವಾಯಿತು. ಜನರು ಆಗ ಕ್ಷಣಿಕವಾಗಿ ದಂಡನೆಯ ಭಯವನ್ನು ತ್ಯಜಿಸಿ ತಮ್ಮ ಹೊಸ ಮಿತ್ರನ ಪ್ರೇಮಶಕ್ತಿಗೆ ಮಣಿದಿದ್ದರು.

ಚಂಪಾರಣ್ಯದಲ್ಲಿ ನನಗೆ ಯಾರ ಪರಿಚಯವೂ ಇರಲಿಲ್ಲವೆಂಬುದನ್ನು ನೆನಪಿನಲ್ಲಿಡಬೇಕು. ರೈತರೆಲ್ಲಾ ಏನೂ ಅರಿಯದವರಾಗಿದ್ದರು. ಚಂಪಾರಣ್ಯವು ಗಂಗಾನದಿಗೆ ಉತ್ತರದಲ್ಲಿ ಬಹುದೂರದಲ್ಲಿ ಹಿಮವತ್ಪರ್ವತದ ತಪ್ಪಲಿನಲ್ಲಿ ನೇಪಾಳಕ್ಕೆ ಅತಿ ಸಮೀಪದಲ್ಲಿದ್ದು ಭರತಖಂಡದ ಇತರ ಭಾಗದ ಸಂಪರ್ಕವಿಲ್ಲದೆ ಇದ್ದಿತು ಆ ಪ್ರಾಂತ್ಯದಲ್ಲಿ ಮಹಾಸಭೆಯ ಹೆಸರೇ ಗೊತ್ತಿರಲಿಲ್ಲವೆನ್ನಬಹುದು. ಮಹಾಸಭೆಯ ಹೆಸರನ್ನು ಕೇಳಿದ್ದವರು ಕೂಡ ಅದಕ್ಕೆ ಸೇರುವುದಕ್ಕಾಗಲಿ ಆ ಹೆಸರನ್ನು ಉಚ್ಚರಿಸುವುದಕ್ಕಾಗಲಿ ಹೆದರಿ ಹಿಂದೆಗೆಯುತ್ತಿದ್ದರು. ಆದರೆ ಇಂದು ಮಹಾಸಭೆಯೂ ಅದರ ಸಭ್ಯರೂ ಮಹಾಸಭೆಯ ಹೆಸರಿನಲ್ಲಲ್ಲದಿದ್ದರೂ ಅತ್ಯಂತ ವಾಸ್ತವಿಕವಾಗಿ ಆ ಪ್ರಾಂತವನ್ನು ಹೊಕ್ಕಿದ್ದರು.

ನನ್ನ ಜೊತೆಯವರ ಸಲಹೆಯನ್ನು ತೆಗೆದುಕೊಂಡು ನಾನು ಯಾವ ಕೆಲಸವೂ ಮಹಾಸಭೆಯ ಹೆಸರಿನಲ್ಲಿ ನಡೆಯಕೂಡದೆಂದು ನಿರ್ಧರಿಸಿದ್ದೆನು. ನಮಗೆ ಬೇಕಾಗಿದ್ದುದು ಕೀರ್ತಿಯಲ್ಲ, ಕಾರ್ಯ, ಹೆಸರಲ್ಲ, ಹುರುಳು. ಏಕೆಂದರೆ ಸರಕಾರವೂ ಮತ್ತು ಅದರ ಸೂತ್ರಧಾರಿಗಳಾದ ಜಮಾನ್ದಾರರೂ ಮಹಾಸಭೆಯನ್ನು ಕ್ರೋಧದಿಂದಲೂ ತಿರಸ್ಕಾರದಿಂದಲೂ ಕಾಣುತ್ತಿದ್ದರು. ಅವರ ದೃಷ್ಟಿಯಲ್ಲಿ ಮಹಾಸಭೆಯೆಂದರೆ ವಕೀಲರ ಕಿತ್ತಾಟ, ಕಾನೂನಿನ ಒಳಸಂಚುಗಳನ್ನು ಹುಡುಕಿ ಅಕ್ರಮ ಕಾರ್ಯಸಾಧನೆ, ಸಿಡಿ

ಮುದ್ದಿನ ಅನಾಯಕತ್ವದ ಅಕೃತ್ಯಗಳು, ವ್ಯವಹಾರ ಚಾತುರ್ಯ, ಅಪಾಧ ಭೂತಿ ವಿದ್ಯೆ—ಇವೆಲ್ಲಕ್ಕೂ ತೌರುಮನೆಯಾಗಿದ್ದಿತು. ನಾವು ಅವರಿಬ್ಬರ ಈ ತಪ್ಪು ತಿಳಿವಳಿಕೆಯನ್ನೂ ಹೋಗಲಾಡಿಸಬೇಕಾಗಿದ್ದಿತು. ಆದುದರಿಂದ ನಾವು ಮಹಾಸಭೆಯ ಹೆಸರನ್ನು ಎತ್ತದಿರಲೂ ರೈತಾದಿ ಜನಗಳಿಗೆ ಮಹಾಸಭೆಯೆಂಬ ಸಂಸ್ಥೆಯು ಇರುವನ್ನು ಹೇಳದಿರಲೂ ನಿಶ್ಚಯಿಸಿದೆವು. ಅವರು ಮಹಾಸಭೆಯ ಅಂತಃಕರಣವನ್ನರಿತು ಅನುಸರಿಸಿದರ ಸಾಕು, ಅಕ್ಷರಶಃ ಅದನ್ನು ಅವಲಂಬಿಸಬೇಕಾದುದಿಲ್ಲ ಎಂಬುದೇ ನಮ್ಮ ಆಶಯುವಾಗಿದ್ದಿತು.

ಆದುದರಿಂದ ನಮ್ಮ ಆಗಮನಕ್ಕೆ ಮುಂಚೆ ಭೂಮಿಕೆಯನ್ನು ಸಿದ್ಧಗೊಳಿಸಲು ಮಹಾಸಭೆಯ ಪರವಾಗಿ ಗೂಢಚಾರರನ್ನಾಗಲಿ ಇತರರನ್ನಾಗಲಿ ಕಳುಹಿಸಿರಲಿಲ್ಲ ರಾಜಕುಮಾರ ಶುಕ್ಲರಿಗೆ ಸಾವಿರಾರು ಮಂದಿ ರೈತರ ಹೃದಯವನ್ನು ಹೊಗುವುದು ಸಾಧ್ಯವಿರಲಿಲ್ಲ. ಅವರ ಮಧ್ಯೆ ರಾಜಕೀಯಕಾರ್ಯವೇನನ್ನೂ ಇನ್ನೂ ಮಾಡಿರಲಿಲ್ಲ. ಚಂಪಾರಣ್ಯದ ಹೊರಗಿನ ಲೋಕವು ಅವರಿಗೆ ಗೊತ್ತಿರಲಿಲ್ಲ. ಆದರೂ ನಾವು ಆಜನ್ಮಮಿತ್ರರೋ ಎಂಬಂತೆ ಅವರು ನಮ್ಮನ್ನು ಬರಮಾಡಿಕೊಂಡರು. ಈ ರೀತಿಯಾಗಿ ನಾವು ಸೇರಿದಾಗ ನನಗೆ ಈಶ್ವರನ, ಅಹಿಂಸೆಯ ಮತ್ತು ಸತ್ಯದ ಸಾಕ್ಷಾತ್ಕಾರವಾಯಿತೆಂದು ಹೇಳಿದರೆ ಅದು ಅಕ್ಷರಶಃ ನಿಜವೇ ಹೊರತು ಅತಿಶಯೋಕ್ತಿಯಲ್ಲ

ಈ ಸಾಕ್ಷಾತ್ಕಾರಸಿದ್ಧಿಗೆ ನನಗಿದ್ದ ಅಧಿಕಾರವೇನೆಂದು ನಾನು ಯೋಚಿಸಿದರೆ ನಾನು ಜನರಲ್ಲಿಟ್ಟಿದ್ದ ಪ್ರೇಮವನ್ನುಳಿದು ಬೇರೊಂದೂ ಕಾಣುವುದಿಲ್ಲ. ಇದು ತಾನೆ ಏನು ? ಅಹಿಂಸೆಯಲ್ಲಿ ನನಗಿರುವ ಅಚಲ ಶ್ರದ್ಧೆಯಲ್ಲದೆ ಇನ್ನೇನೂ ಅಲ್ಲ.

ಚಂಪಾರಣ್ಯದಲ್ಲಿ ಕಳೆದ ಆ ದಿನವನ್ನು ನನ್ನ ಜೀವನದಲ್ಲಿ ಎಂದೂ ಮರೆಯಲಾಗುವುದಿಲ್ಲ ಅಲ್ಲಿನ ಜನರಿಗೂ ನನಗೂ ಆ ದಿನವು ಅಪೂರ್ವಾನಂದದ ಸುದಿನ.

ಕಾನೂನಿನ ಪ್ರಕಾರವೇನೋ ನನ್ನ ವಿಚಾರಣೆಯಾಗಬೇಕಾಗಿದ್ದಿತು. ಆದರೆ ನಿಜವಾಗಿ ಸರಕಾರವೇ ಅಂದು ತಪ್ಪಿತಸ್ಥನ ಸ್ಥಾನದಲ್ಲಿದ್ದಿತು ಪ್ರಾಂತ್ಯವಿಭಾಗಾಧಿಕಾರಿಗಳು ನನಗಾಗಿ ಬಲೆಯೊಡ್ಡಿದ ಪ್ರಯತ್ನದ ಫಲವಾಗಿ ಸರಕಾರವನ್ನು ಅದರೊಳಗೆ ಸಿಕ್ಕಿಸಿದರು.



# ೧೫

# ಮೊಕದ್ದಮೆಯನ್ನು ನಿಲ್ಲಿಸಿದುದು.

ವಿಚಾರಣೆಯು ಪ್ರಾರಂಭವಾಯಿತು. ಸರಕಾರದ ವಕೀಲರೂ ಮ್ಯಾಜಿಸ್ಟ್ರೇಟರೂ ಇತರ ಅಧಿಕಾರಿಗಳೂ ದಿಕ್ಕುತೋಚದವರಂತಿದ್ದರು. ಏನು ಮಾಡಬೇಕೆಂದು ಅವರಿಗೆ ಹೊಳೆಯಲಿಲ್ಲ ಮೊಕದ್ದಮೆಯನ್ನು ಮುಂದಕ್ಕೆ ಹಾಕಬೇಕೆಂದು ಸರಕಾರೀ ವಕೀಲರು ಮ್ಯಾಜಿಸ್ಟ್ರೇಟರನ್ನು ಒತ್ತಾಯ ಪಡಿಸುತ್ತಿದ್ದರು. ಆದರೆ ನಾನು ಅಡ್ಡ ಬಂದು "ಚಂಪಾರಣ್ಯವನ್ನು ಬಿಟ್ಟು ಹೋಗಬೇಕೆಂಬ ಆಜ್ಞೆಯನ್ನು ಉಲ್ಲಂಘಿಸಿದ ತಪ್ಪನ್ನು ನಾನು ಒಪ್ಪಿಕೊಳ್ಳಬಯಸುತ್ತೇನೆ" ಎಂದು ಹೇಳಿ ಈ ಕೆಳಗಿನ ಸಂಕ್ಷಿಪ್ತ ಹೇಳಿಕೆಯನ್ನು ಓದಿದೆನು

"ಕ್ರಿ ಪ್ರೊ ಕೋಡಿನ ೧೪೪ನೆಯ ನಿಬಂಧನೆಯ ಮೇಲಿನ ಆಜ್ಞೆಯನ್ನು ನಾನು ಉಲ್ಲಂಘಿಸಿರುವಂತೆ ತೋರುತ್ತಿದೆಯಷ್ಟೆ ಅತಿಗಂಭೀರ ಪರಿಣಾಮವುಳ್ಳ ಈ ವರ್ತನೆಯನ್ನು ನಾನು ಅನುಸರಿಸಿದುದೇಕೆಂದು ವ್ಯಕ್ತಪಡಿಸಲು ನ್ಯಾಯಸ್ಥಾನದ ಅಪ್ಪಣೆಪಡೆದು ಸಂಕ್ಷಿಪ್ತವಾಗಿ ಹೇಳಲೆಳಸುತ್ತೇನೆ ಇದು ಇಲ್ಲಿನ ಅಧಿಕಾರಿಗಳಿಗೂ ನನಗೂ ಇರುವ ಅಭಿಮತ ಭೇದದ ವಿಷಯವೆಂದು ತೋರುತ್ತದೆ ಜನಸೇವೆಯನ್ನೂ ರಾಷ್ಟ್ರಸೇವೆಯನ್ನೂ ಮಾಡಬೇಕೆಂಬ ಉದ್ದೇಶದಿಂದ ನಾನು ಈ ನಾಡಿನೊಳಗೆ ಕಾಲಿಟ್ಟಿದ್ದೇನೆ. ನೀಲಿಯ ಜಮೀನ್ದಾರರು ತಮ್ಮೊಡನೆ ನ್ಯಾಯವಾದ ರೀತಿಯಲ್ಲಿ ವರ್ತಿಸುವುದಿಲ್ಲವೆಂದು ಇಲ್ಲಿಯ ರೈತರು ಹೇಳುತ್ತಾರೆ ಇಲ್ಲಿಗೆ ಬಂದು ಈ ರೈತರಿಗೆ ನೆರವೀಯಬೇಕೆಂಬುದಾಗಿ ನನ್ನನ್ನು ಬಹುವಾಗಿ ಒತ್ತಾಯಪಡಿಸಿದುದರಿಂದಲೇ ನಾನು ಇಲ್ಲಿಗೆ ಬಂದುದು. ಇಲ್ಲಿನ ಸ್ಥಿತಿಗತಿಯನ್ನು ಅರಿತುಕೊಳ್ಳದೆ ನಾನು ಯಾವ ಸಹಾಯವನ್ನೂ ಮಾಡುವಂತಿರಲಿಲ್ಲ. ಆದುದರಿಂದ ನಾನು ಸಾಧ್ಯವಾದರೆ ಸರಕಾರದ ಮತ್ತು

ಜಮೀನ್ದಾರರ ಒತ್ತಾಸೆಯನ್ನು ಹೊಂದಿ ಇಲ್ಲಿಯ ವಿಷಯಗಳನ್ನು ತಿಳಿದುಕೊಳ್ಳಲು ಬಂದಿದ್ದೇನೆ ನನಗೆ ಇನ್ನಾವ ಉದ್ದೇಶವೂ ಇಲ್ಲ ನಾನು ಇಲ್ಲಿಗೆ ಬಂದುದರಿಂದ ಯಾವ ರೀತಿಯಲ್ಲಾಗಲಿ ಪ್ರಜಾಶಾಂತಿಗೆ ಭಂಗವಾಗಿ ಪ್ರಾಣಹಾನಿಯುಂಟಾಗುವುದೆಂದು ನಾನು ನಂಬಲಾರೆನು ಇಂತಹ ವಿಷಯಗಳಲ್ಲಿ ನನಗೆ ಹೆಚ್ಚಾದ ಅನುಭವವುಂಟೆಂದು ಹೇಳಬಲ್ಲೆನು. ಆದರೆ ಸರಕಾರದವರು ಬೇರೆ ರೀತಿಯಾಗಿ ಆಲೋಚಿಸಿದ್ದಾರೆ ಅವರ ಕಷ್ಟವು ನನಗೆ ಸಂಪೂರ್ಣವಾಗಿ ಗೊತ್ತಿದೆ ಅವರು ತಮಗೆ ಬಂದ ಸಮಾಚಾರದ ಆಧಾರದ ಮೇಲೆಯೇ ಪ್ರವರ್ತಿಸಬೇಕಾಗುತ್ತದೆಂಬುದನ್ನು ಕೂಡ ನಾನು ಒಪ್ಪಿಕೊಳ್ಳುತ್ತೇನೆ. ಕಾನೂನಿಗೆ ಅನುಸಾರವಾಗಿ ನಡೆವ ಪ್ರಜೆಯೊಬ್ಬನು ನಾನಾದುದರಿಂದ ನನಗೆ ಕೊಟ್ಟ ಆಜ್ಞೆಯನ್ನು ಪಾಲಿಸಬೇಕೆಂದೇ ನನ್ನ ಮನಸ್ಸಿಗೆ ಮೊಟ್ಟಮೊದಲು ತೋರುವುದು ಸಹಜ ಈ ಸಂದರ್ಭದಲ್ಲಿ ಆದುದೂ ಅಂತಯೇ ಆದರೆ ನಾನು ಇಲ್ಲಿ ಯಾರ ಸಲುವಾಗಿ ಬಂದೆನೋ ಅವರ ವಿಷಯದಲ್ಲಿ ನನ್ನ ಕರ್ತವ್ಯವನ್ನು ಉಲ್ಲಂಘಿಸದೆ ನಾನು ಹಾಗೆ ಮಾಡುವಂತಿರಲಿಲ್ಲ ಈ ಸಮಯದಲ್ಲಿ ನಾನು ಅವರ ಮಧ್ಯದಲ್ಲಿರುವುದರಿಂದಲೇ ಅವರ ಸೇವೆಯನ್ನು ಮಾಡುವುದು ಸಾಧ್ಯವೆಂದು ನನಗೆ ತೋರುತ್ತದೆ ಆದುದರಿಂದ ನಾನು ಸ್ವಂತ ಇಚ್ಛೆಯಿಂದ ಹಿಂತಿರುಗುವುದು ಶಕ್ಯವಿರಲಿಲ್ಲ ಈ ಕರ್ತವ್ಯಸಂಗ್ರಾಮದಲ್ಲಿ ನನ್ನನ್ನು ಈ ಜನರ ಮಧ್ಯದಿಂದ ಹೊರಕ್ಕೆ ಹಾಕುವ ಭಾರವನ್ನು ಸರಕಾರದವರ ಮೇಲೆ ಹೊರಿಸುವುದು ಮಾತ್ರ ನನಗೆ ಸಾಧ್ಯವಿದ್ದಿತು ಭರತಖಂಡದ ಸಾರ್ವಜನಿಕ ಜೀವನದಲ್ಲಿ ನನ್ನಂತಹ ಸ್ಥಾನವನ್ನು ಹೊಂದಿರುವವರು ಇತರರಿಗೆ ಮೇಲ್ಪಂಕ್ತಿಯನ್ನು ಹಾಕುವಾಗ ಅತ್ಯಂತ ಎಚ್ಚರದಿಂದಿರಬೇಕೆಂದು ನನಗೆ ಗೊತ್ತು ಇಂದು ನಾವು ಅತಿಸಂಕೀರ್ಣರಾಜಕೀಯ ವ್ಯವಸ್ಥೆಯಲ್ಲಿ ಜೀವಿಸುತ್ತಿದ್ದೇವೆ ಇಂತಹ ಪರಿಸ್ಥಿತಿಯಲ್ಲಿ, ನನ್ನಿದಿರಿಗಿರುವ ಈ ಸಂದರ್ಭಗಳಲ್ಲಿ, ಆತ್ಮಗೌರವವುಳ್ಳ ಮನುಷ್ಯರಿಗಿರುವ ನಿರಪಾಯವಾದ ಮಾನಕರವಾದ ಮಾರ್ಗವು ನಾನನುಸರಿಸಲು ನಿಶ್ಚಯಿಸಿರುವ ಮಾರ್ಗವೊಂದೇ ಎಂದು ನನ್ನ ದೃಢ ವಿಶ್ವಾಸ. ಆಜ್ಞೆಯನ್ನು ಉಲ್ಲಂಘಿಸುವುದರ ಫಲವಾದ ಶಿಕ್ಷೆಯನ್ನು ಸದ್ದಿಲ್ಲದೆ ಸಹಿಸುವುದೇ ಆ

ಮಾರ್ಗ ನನಗೆ ವಿಧಿಸುವ ಶಿಕ್ಷೆಯನ್ನು ಯಾವ ರೀತಿಯಲ್ಲಾದರೂ ತಗ್ಗಿಸಬೇಕೆಂಬ ಉದ್ದೇಶದಿಂದಲ್ಲ ನಾನು ಈ ಹೇಳಿಕೆಯನ್ನು ಕೊಟ್ಟಿರುವುದು ನನಗೆ ಕೊಟ್ಟ ಆಜ್ಞೆಯನ್ನು ಉಲ್ಲಂಘಿಸುವುದರ ಕಾರಣವು ಕಾನೂನಿನ ತಿರಸ್ಕಾರಬುದ್ಧಿಯಲ್ಲ, ಹಾಗೆ ಮಾಡಿದುದು ನಮ್ಮ ಆತ್ಮಸನ್ನಾಳುವ ಉಚ್ಚತರ ನಿಯಮವನ್ನು—ಅಂತರಾತ್ಮನ ಆಜ್ಞೆಯನ್ನು—ಪಾಲಿಸುವುದಕ್ಕಾಗಿಯೇ ಎಂಬುದನ್ನು ತಿಳಿಸುವುದು ಈ ಹೇಳಿಕೆಯ ಉದ್ದೇಶ ''

ಈಗ ವಿಚಾರಣೆಯನ್ನು ಮುಂದಕ್ಕೆ ಹಾಕಲು ಅಗತ್ಯವೇ ಇರಲಿಲ್ಲ. ಆದರೆ ಮ್ಯಾಜಿಸ್ಟ್ರೇಟರೂ ಸರಕಾರದ ವಕೀಲರೂ ಈ ರೀತಿಯಾದ ಹೇಳಿಕೆಯನ್ನು ನಿರೀಕ್ಷಿಸಿರಲಿಲ್ಲವಾದುದರಿಂದ ಮ್ಯಾಜಿಸ್ಟ್ರೇಟರು ತೀರ್ಪನ್ನು ಹೇಳಲು ಬೇರೆ ದಿನವನ್ನು ಗೊತ್ತುಮಾಡಿದರು ಈ ಮಧ್ಯೆ ನಾವು ಎಲ್ಲಾ ವಿವರವನ್ನೂ ಪಾಟ್ನಾದ ಮಿತ್ರರಿಗೂ ಪಂಡಿತ ಮದನಮೋಹನ ಮಾಲವೀಯರಿಗೂ ಇತರರಿಗೂ ತಂತಿಯ ಮೂಲಕ ಕಳುಹಿಸಿದ್ದೆವು

ನನಗೆ ವಿಧಿಸಿದ ಶಿಕ್ಷೆಯನ್ನು ನಾನು ನ್ಯಾಯಸ್ಥಾನಕ್ಕೆ ಹೋಗಿ ತಿಳಿದುಕೊಳ್ಳುವುದಕ್ಕೆ ಮುಂಚೆಯೇ ಮ್ಯಾಜಿಸ್ಟ್ರೇಟರು ವಿಹಾರಪ್ರಾಂತದ ಗವರ್ನರರು ನನ್ನ ಮೇಲಿನ ಮೊಕದ್ದಮೆಯನ್ನು ನಿಲ್ಲಿಸಲು ಅಪ್ಪಣೆ ಮಾಡಿದ್ದರೆಂದು ಪತ್ರಬರೆದರು ಜಿಲ್ಲಾಧಿಕಾರಿಗಳು ನಾನು ರೈತರ ಪರಿಸ್ಥಿತಿಯ ವಿಮರ್ಶೆಯನ್ನು ಮಾಡಲು ಯಾವ ಅಡಚಣೆಯೂ ಇಲ್ಲವೆಂದೂ ಅಧಿಕಾರಿಗಳಿಂದ ಯಾವ ಸಹಾಯ ಬೇಕಾದರೂ ದೊರಕುವುದೆಂದೂ ನಮಗೆ ಕಾಗದ ಬರೆದರು. ಇಷ್ಟು ಶೀಘ್ರವಾಗಿ ಇಂತಹ ಶುಭಪರಿಣಾಮವೊದಗುವುದೆಂದು ನಾವು ಯಾರೂ ನಿರೀಕ್ಷಿಸಿರಲಿಲ್ಲ.

ನಾನು ಜಿಲ್ಲಾಧಿಕಾರಿಗಳಾದ ವಿ ಹೇಕಾಕರನ್ನು ಹೋಗಿ ಕಂಡೆನು ಅವರು ನ್ಯಾಯತತ್ಪರರಾದ ಸಜ್ಜನರಂತೆ ಕಂಡರು ನನಗೆ ಬೇಕಾದ ಪತ್ರಗಳನ್ನು ನೋಡಲು ನಾನು ಕೇಳಬಹುದೆಂದೂ ಇಷ್ಟಬಂದಾಗ ನಾನು ಅವರನ್ನು ಬೆಟ್ಟಿಮಾಡಬಹುದೆಂದೂ ಅವರು ನನಗೆ ಹೇಳಿದರು. ಈ ರೀತಿಯಾಗಿ ದೇಶಕ್ಕೆ ಕಾನೂನಿನ ಸವಿನಯ ಭಂಗದಲ್ಲಿ

ಪ್ರಥಮ ಪ್ರತ್ಯಕ್ಷ ವಸ್ತುಪಾಠವು ದೊರಕಿತು. ಆ ಸ್ಥಳದಲ್ಲಿಯೂ ವೃತ್ತ ಪತ್ರಗಳಲ್ಲಿಯೂ ಈ ವಿಷಯವನ್ನು ಕುರಿತು ಚರ್ಚೆ ನಡೆಯಿತು. ನನ್ನ ವಿಮರ್ಶಾಕಾರ್ಯವು ಅನಿರೀಕ್ಷಿತ ಪ್ರಕಟನಾಸೌಕರ್ಯವನ್ನು ಪಡೆಯಿತು.

ಈ ವಿಮರ್ಶಾಕಾರ್ಯಕ್ಕೆ ಸರಕಾರವು ತಟಸ್ಥವಾಗಿರುವುದು ಆವಶ್ಯಕವಾಗಿದ್ದಿತು ಆದರ ವೃತ್ತಪತ್ರಿಕಗಳ ಸುದ್ದಿಗಾರರಿಂದಾಗಲಿ ಸಂಪಾದಕೀಯ ಲೇಖನಗಳಿಂದಾಗಲಿ ಇದಕ್ಕೆ ಬೆಂಬಲವು ಬೇಕಾಗಿರಲಿಲ್ಲ ವಾಸ್ತವಿಕವಾಗಿ ಚಂಪಾರಣ್ಯದ ಪರಿಸ್ಥಿತಿಯು ಎಷ್ಟು ಸೂಕ್ಷ್ಮವಾಗಿಯೂ ಕ್ಲಿಷ್ಟವಾಗಿಯೂ ಇದ್ದಿತೆಂದರ ಪ್ರಬಲವಾದ ಟೀಕೆಯಾಗಲಿ ಉಣ್ಣಾಗಟ್ಟಿದ ವರದಿಯಾಗಲಿ ನಾನು ಸಾಧಿಸುತ್ತಿದ್ದ ಕಾರ್ಯವನ್ನು ಸುಲಭವಾಗಿ ಹದಗೆಡಿಸಬಹುದಾಗಿದ್ದಿತು. ಆದುದರಿಂದ ನಾನು ಮುಖ್ಯವಾದ ವೃತ್ತಪತ್ರಗಳ ಸಂಪಾದಕರಿಗೆ "ಪ್ರಕಟನೆಗ ಆವಶ್ಯಕವಾದ ವಿಷಯಗಳನ್ನೆಲ್ಲಾ ನಿಮಗೆ ಕಳುಹಿಸಿ ಇಲ್ಲಿನ ಪರಿಸ್ಥಿತಿಯ ನಿರಂತರ ಪರಿಚಯವನ್ನು ಮಾಡಿಕೊಡುವನು ದಯೆಯಿಟ್ಟು ಸುದ್ದಿಗಾರರನ್ನು ಇಲ್ಲಿಗೆ ಕಳುಹಿಸಿಕೊಡುವ ಶ್ರಮವನ್ನು ವಹಿಸಬೇಡಿ." ಎಂದು ಪತ್ರ ಬರೆದನು

ಸರಕಾರದವರು ನಾನಲ್ಲಿರುವುದಕ್ಕೆ ಅಡ್ಡಿ ಮಾಡದಿರುವುದನ್ನು ಕಂಡು ಚಂಪಾರಣ್ಯದ ಜಮೀನ್ದಾರರು ಕೋಪಗೊಂಡಿದ್ದರೆಂದು ನನಗೆ ಗೊತ್ತಿದ್ದಿತು ಅಧಿಕಾರಿಗಳಿಗೆ ಕೂಡ, ಅವರು ಬಾಯಿಬಿಟ್ಟು ಏನನ್ನೂ ಹೇಳಲಾಗದಿದ್ದರೂ, ಇದು ಇಷ್ಟವಿದ್ದಿರಲಾರದೆಂದೂ ನನಗೆ ತಿಳಿದಿದ್ದಿತು ಆದುದರಿಂದ ವೃತ್ತಪತ್ರಗಳಲ್ಲಿ ಅವಾಸ್ತವವಾದ ಅಥವಾ ತಪ್ಪು ಅಭಿಪ್ರಾಯಕೊಡುವ ಸುದ್ದಿಗಳು ಪ್ರಕಟವಾದರೆ ಅವುಗಳಿಂದ ಇವರ ಸಿಟ್ಟಿನ ಉರಿಯು ಇನ್ನೂ ಏರುವ ಸಂಭವವಿದ್ದಿತು. ಮತ್ತು ಅವರು ಈ ಸಿಟ್ಟನ್ನು ನನ್ನ ಮೇಲೆ ತೀರಿಸಿಕೊಳ್ಳದೆ, ಪಾಪ ಆ ಭಯಭೀತರಾದ ರೈತರ ಮೇಲೆ ತೀರಿಸಿಕೊಳ್ಳುವುದರಲ್ಲಿ ಯಾವ ಸಂಶಯವೂ ಇರಲಿಲ್ಲ ಇದರಿಂದ ನನ್ನ ಸತ್ಯಶೋಧನೆಗ ದೊಡ್ಡ ಅಡಚಣೆಯು ಒದಗುತ್ತಿದ್ದಿತು

ನಾನು ಇಷ್ಟು ಜಾಗರೂಕತೆಯಿಂದಿದ್ದರೂ ಜಮೀನ್ದಾರರು ನನಗೆ ವಿರೋಧವಾಗಿ ಅತಿ ವಿಷಮಯವಾದ ಚಳವಳಿಯನ್ನು ಹೂಡಿದರು

ನನ್ನ ಮತ್ತು ನನ್ನ ಜೊತೆಯಲ್ಲಿ ಕೆಲಸಮಾಡುತ್ತಿದ್ದವರ ವಿಷಯವಾಗಿ ಎಷ್ಟೋ ರೀತಿಯ ಸುಳ್ಳುಗಳು ವೃತ್ತಪತ್ರಿಕೆಗಳಲ್ಲಿ ಪ್ರಕಟವಾದುವು. ಆದರೆ ನಾನು ಅತ್ಯಂತ ಎಚ್ಚರಿಕೆಯಿಂದಿದ್ದುದರಿಂದಲೂ ಕೇವಲ ಸಣ್ಣ ವಿಚಾರವನ್ನು ಮೊದಲುಗೊಂಡು ಎಲ್ಲಾ ವಿಷಯದಲ್ಲಿಯೂ ಸತ್ಯವನ್ನೇ ಸಾಧಿಸಿದುದರಿಂದಲೂ ಅವರೆಸೆದ ಬಾಣಗಳು ನಿರರ್ಥಕಗಳಾದುವು

ವ್ರಜಕಿಶೋರ ಬಾಬುಗಳಮೇಲೆ ಮಣ್ಣೆರಚುವುದರಲ್ಲಿ ಒವಿಾನಾರರು ತಮ್ಮ ಪ್ರಯತ್ನವನ್ನೆಲ್ಲಾ ವೆಚ್ಚಮಾಡಿದರು ಆದರ ಅವರ ನಿಂದೆಯು ಹೆಚ್ಚಾದಷ್ಟು ಬಾಬುಗಳಲ್ಲಿ ಜನರ ಮನ್ನಣೆಯು ಏರುತ್ತಾ ಹೋಯಿತು.

ಇಂತಹ ನಾಜೂಕಾದ ಸಂದರ್ಭದಲ್ಲಿ ಇತರ ಪ್ರಾಂತ್ಯಗಳಿಂದ ನಾಯಕರನ್ನು ಕರೆಸುವುದು ಉಚಿತವೆಂದು ನಾನು ಎಣಿಸಲಿಲ್ಲ. ಪಂಡಿತ ಮಾಲವೀಯರು "ನಿಮಗೆ ಬೇಕಾದಾಗ ನೀವು ತಿಳಿಸಿದರೆ ಸಾಕು ನಾನು ಬಂದುಬಿಡುವೆನು" ಎಂದು ಹೇಳಿಕಳುಹಿಸಿದ್ದರು. ಆದರೆ ನಾನು ಅವರಿಗೆ ತೊಂದರೆ ಕೊಡಲಿಲ್ಲ ಈರೀತಿಯಾಗಿ ಈ ಸಂಗ್ರಾಮವು ರಾಜಕೀಯ ಸ್ವರೂಪವನ್ನು ಹೊಂದದಂತೆ ನಾನು ತಡೆದೆನು. ಆದರೆ ನಾನು ಆಗಾಗ ನಾಯಕರಿಗೂ ಮುಖ್ಯವಾದ ವೃತ್ತಪತ್ರಗಳಿಗೂ ವರದಿಯನ್ನು ಕಳುಹಿಸಿಕೊಡುತ್ತಿದ್ದೆನು ಇದು ಪ್ರಕಟನೆಗಲ್ಲ, ಅವರ ತಿಳುವಳಿಕೆಗಾಗಿ ಅಂತಿಮ ಫಲವು ರಾಜಕೀಯವಾಗಿದ್ದಾಗ ಕೂಡ ಕಾರಣವು ರಾಜಕೀಯವಲ್ಲದಿದ್ದರ ಅದಕ್ಕೆ ರಾಜಕೀಯ ಸ್ವರೂಪವನ್ನು ಕೊಡುವುದರಿಂದ ಅದು ಕೆಡುವುದೆಂದೂ ಅಂತಹ ಸ್ವರೂಪವನ್ನು ಕೊಡದೆ ಅದನ್ನು ನಿಜಪರಿಮಿತಿಯಲ್ಲಿಯೇ ಇಟ್ಟರೆ ಅದು ಲಾಭಹೊಂದುವುದೆಂದೂ ನಾನು ಅನುಭವದಿಂದ ಕಂಡಿದ್ದೆನು. ಯಾವ ವಿಷಯದಲ್ಲಾಗಲಿ ನಿಷ್ಕಾಮಬುದ್ಧಿಯಿಂದ ಮಾಡಿದ ಲೋಕಸೇವೆಯಿಂದ ಕಟ್ಟಕಡೆಗೆ ದೇಶಕ್ಕೆ ರಾಜಕೀಯ ಲಾಭವುಂಟಾಗುವುದೆಂಬುದನ್ನು ಚಂಪಾರಣ್ಯ ಸಂಗ್ರಾಮವು ಸಿದ್ಧಿಸಿತು

---

೧೬

# ಸೇವಾಕ್ರಮ

ಚಂಪಾರಣ್ಯದ ವಿಮರ್ಶೆಯ ಪೂರ್ಣ ಇತಿಹಾಸವನ್ನು ಚಿತ್ರಿಸುವುದೆಂದರೆ ಆ ಕಾಲದ ರೈತರ ಚರಿತ್ರೆಯನ್ನೇ ಬರೆದಂತಾಗುತ್ತದೆ. ಇದು ಈ ಪ್ರಕರಣಗಳಲ್ಲಿ ಸಾಧ್ಯವಲ್ಲ. ಚಂಪಾರಣ್ಯದ ವಿಮರ್ಶೆಯು ಸತ್ಯ, ಅಹಿಂಸೆಗಳಿಂದೊಡಗೂಡಿದ ದಿಟ್ಟತನದ ಪ್ರಯೋಗವಾಗಿದ್ದಿತು ಈ ದೃಷ್ಟಿಯಿಂದ ವರ್ಣನಾಯೋಗ್ಯವಾದುದನ್ನು ಮಾತ್ರ ನಾನು ವಾರ ವಾರವೂ ಬರೆಯುತ್ತಿರುವೆನು. ಇನ್ನೂ ಹೆಚ್ಚು ವಿವರವು ಬೇಕಾದರೆ ಬಾಬು ರಾಜೇಂದ್ರ ಪ್ರಸಾದರು ಹಿಂದಿಯಲ್ಲಿ ಬರೆದಿರುವ ಚಂಪಾರಣ್ಯದ ಸತ್ಯಾಗ್ರಹದ ಇತಿಹಾಸವನ್ನು* ಓದಬೇಕು.

ಈ ಅಧ್ಯಾಯದ ವಿಷಯಕ್ಕೆ ಹಿಂತಿರುಗೋಣ ಬಡ ಗೋರಖ ಬಾಬುಗಳನ್ನು ವಸ್ತುತಃ ಮನೆ ಬಿಟ್ಟೋಡಿಸದೆ ಅವರ ಮನೆಯಲ್ಲಿ ವಿಮರ್ಶೆಯನ್ನು ನಡೆಸಲಾಗುತ್ತಿರಲಿಲ್ಲ ಮೋತೀಹಾರಿಯ ಜನರು ನಮಗೆ ಒಂದು ಮನೆಯನ್ನು ಬಾಡಿಗೆಗೆ ಕೊಡುವಷ್ಟು ಇನ್ನೂ ದಿಗಲನ್ನು ಕಳೆದು ಕೊಂಡಿರಲಿಲ್ಲ ಆದರೂ ವ್ರಜಕಿಶೋರ ಬಾಬುಗಳು ತಮ್ಮ ಚಾತುರ್ಯದಿಂದ ಒಂದು ಮನೆಯನ್ನು ನಮಗೆ ಕೊಡಿಸಿಕೊಟ್ಟರು ಅದರ ಆವರಣದಲ್ಲಿ ವಿಶಾಲವಾದ ಬಯಲಿದ್ದಿತು. ನಾವು ಆ ಮನೆಗೆ ಹೋಗಿ ನೆಲೆಸಿದೆವು

ಈ ಕಾರ್ಯವನ್ನು ಹಣವಿಲ್ಲದೆ ನಡೆಸುವುದು ಸಾಧ್ಯವೆಂಬಂತಿರಲಿಲ್ಲ. ಈ ರೀತಿಯ ಕಾರ್ಯಕ್ಕಾಗಿ ಪ್ರಜೆಗಳಿಂದ ಹಣವನ್ನು ಬೇಡುವುದು ಇದು

---

* ಇದರ ಇಂಗ್ಲಿಷ್ ಭಾಷಾಂತರವು ಅಚ್ಚಿನಲ್ಲಿದೆ ಕನ್ನಡ ಅನುವಾದವೂ (ಇದಕ್ಕೆ ರಾಜೇಂದ್ರ ಬಾಬುಗಳ ಅಪ್ಪಣೆಯು ದೊರೆತಿದೆ) ಕಾಲಕ್ರಮದಲ್ಲಿ ಪ್ರಕಟವಾಗುತ್ತದೆ.

ವರೆಗೆ ಪದ್ಧತಿಯಾಗಿರಲಿಲ್ಲ ವ್ರಜಕಿಶೋರಬಾಬುಗಳೂ ಅವರ ಮಿತ್ರ ರಲ್ಲಿ ಹೆಚ್ಚು ಮಂದಿಯೂ ವಕೀಲರಾಗಿದ್ದರು. ಇವರುಗಳು ಸಂದರ್ಭ ಬಿದ್ದಾಗಲೆಲ್ಲಾ ತಮ್ಮ ಕೈಯಿಂದಲೇ ಆಗಲಿ ತಮ್ಮ ಮಿತ್ರರಿಂದಾಗಲಿ ಹಣವನ್ನು ಒದಗಿಸುತ್ತಿದ್ದರು. ತಾವೂ ತಮ್ಮಂತಹರೂ ಬೇಕಾದಹಾಗೆ ಕೊಡಲು ಸಮರ್ಥರಾಗಿರಲು ಜನರನ್ನು ಬೇಡುವುದೆಂತು ? ಇದೇ ಅವರ ಭಾವನೆಯೆಂದು ತೋರುತ್ತಿದ್ದಿತು. ಚಂಪಾರಣ್ಯದ ರೈತರಿಂದ ಒಂದು ಕವಡೆಯನ್ನೂ ಸ್ವೀಕರಿಸಕೂಡದೆಂದು ನಾನು ಮನಸ್ಸು ಮಾಡಿದ್ದೆನು. ಹಾಗೆ ತೆಗೆದುಕೊಂಡರೆ ಅದಕ್ಕೆ ಖಂಡಿತವಾಗಿ ಅಪಾರ್ಥಮಾಡುತ್ತಿದ್ದರು. ಈ ವಿಮರ್ಶೆಯನ್ನು ನಡೆಸಲು ಹಿಂದೂಸ್ಥಾನದ ಎಲ್ಲಾ ಕಡೆಯಿಂದಲೂ ಚಂದಾ ಎತ್ತಕೂಡದೆಂದು ಅಷ್ಟೇ ದೃಢವಾಗಿ ನಿಶ್ಚಯಿಸಿದ್ದೆನು ಏಕೆಂದರೆ ಹಾಗೆ ಮಾಡುವುದರಿಂದ ಅದಕ್ಕೆ ಅಖಿಲಭಾರತ ಸ್ವರೂಪವೂ ರಾಜ ಕೀಯ ವರ್ಣವೂ ಪ್ರಾಯಶಃ ಬರುತ್ತಿದ್ದುವು ಮುಂಬಯಿಯಲ್ಲಿನ ಕೆಲವು ಮಿತ್ರರು ೧೫,೦೦೦ ರೂ. ಗಳನ್ನು ಕೊಡಲು ಬಂದರು ನಾನು ಅದನ್ನು ಕೃತಜ್ಞತಾಪೂರ್ವಕವಾಗಿ ನಿರಾಕರಿಸಿದೆನು ಚಂಪಾರಣ್ಯದ ಹೊರಗೆ ವಾಸಿಸುವ ಅನುಕೂಲಸ್ಥರಾದ ಬಿಹಾರಿಗಳಿಂದ ವ್ರಜಕಿಶೋರ ಬಾಬುಗಳ ಸಹಾಯವನ್ನು ಪಡೆದು ಸಾಧ್ಯವಾದಷ್ಟು ಹಣವನ್ನು ಕೂಡಿಸಿ ಇನ್ನೂ ಹೆಚ್ಚು ಬೇಕಾದರೆ ನನ್ನ ಮಿತ್ರರಾದ ರಂಗೂನಿನ ಡಾ. ಪ್ರಾಣಜೀವನದಾಸ ಮೆಹತಾರವರನ್ನು ಕೇಳಬೇಕೆಂದು ನಿಶ್ಚಯಿಸಿದೆನು ಆವಶ್ಯಕತೆ ಬೀಳುವಷ್ಟು ಹಣವನ್ನು ಕಳುಹಿಸಿಕೊಡಲು ಡಾ. ಮೆಹತಾ ರವರು ಒಡನೆಯೇ ಒಪ್ಪಿದರು ಹೀಗೆ ನಮಗೆ ಹಣದ ವಿಷಯವಾದ ಚಿಂತೆಯೇನೂ ಇರಲಿಲ್ಲ ಚಂಪಾರಣ್ಯದ ಬಡತನಕ್ಕೆ ತಕ್ಕಂತೆ ಎಷ್ಟು ಸಾಧ್ಯವೋ ಅಷ್ಟುಮಟ್ಟಿಗೆ ಮಿತವ್ಯಯದಿಂದ ವರ್ತಿಸಬೇಕೆಂದು ನಾವು ಸಂಕಲ್ಪಿಸಿದ್ದುದರಿಂದ ನಮಗೆ ಹೆಚ್ಚು ಹಣದ ಆವಶ್ಯಕತೆ ಬೀಳುವಂತಿರ ಲಿಲ್ಲ. ವಸ್ತುತಃ ನಮಗೆ ಹೆಚ್ಚು ಹಣಕ್ಕ ಅಗತ್ಯವಿಲ್ಲದುದು ಕಡೆಗೆ ಕಂಡುಬಂದಿತು ಎಲ್ಲಾ ಸೇರಿ ನಾವು ೩,೦೦೦ ರೂ ಗೆ ಹೆಚ್ಚಿಲ್ಲದಂತೆ ವೆಚ್ಚಮಾಡಿದೆವೆಂದು ನನಗೆ ತೋರುತ್ತದೆ. ನನಗೆ ನೆನಪಿರುವವುಟ್ಟಿಗೆ ನಾವು ಕೂಡಿಸಿದ ಹಣದಲ್ಲಿ ನಾಲ್ಕೈದುನೂರು ರೂಪಾಯಿಗಳನ್ನು ಉಳಿಸಿ ದೆವೆಂದೂ ಕಾಣುತ್ತದೆ.

ನನ್ನ ಸಂಗಡಿರ ಜೀವನರೀತಿಯ ವೈಚಿತ್ರ್ಯವು ಪ್ರಾರಂಭದಲ್ಲಿ ನಿರಂತರ ವಿನೋದದ ವಿಷಯವಾಗಿದ್ದಿತು ಪ್ರತಿಯೊಬ್ಬ ವಕೀಲರಿಗೂ ಒಬ್ಬ ಅಡಿಗೆಯವನು, ಒಬ್ಬ ಆಳು, ಇರುತ್ತಿದ್ದರು ಆದುದರಿಂದ ಅವರಿಗೆ ಪ್ರತ್ಯೇಕವಾದ ಅಡಿಗೆಯ ಮನೆಯೂ ಇರುತ್ತಿದ್ದಿತು. ಅನೇಕ ವೇಳೆ ಮಧ್ಯರಾತ್ರಿಯ ಹೊತ್ತಿನಲ್ಲಿ ಊಟಮಾಡುತ್ತಿದ್ದರು ಅವರು ತಮ್ಮ ವೆಚ್ಚವನ್ನು ತಾವೇ ಸ್ವಂತವಾಗಿ ವಹಿಸುತ್ತಿದ್ದರೂ ನನಗೆ ಅವರ ಜೀವನಕ್ರಮದ ನಿಯಮರಾಹಿತ್ಯವು ಉಪದ್ರವ ಕೊಡುತ್ತಿದ್ದಿತು ಆದರೂ ನಾವು ಈ ಹೊತ್ತಿಗೆ ಗಾಢಮಿತ್ರರಾಗಿದ್ದುದರಿಂದ ನಮ್ಮ ಮಧ್ಯೆ ವೈಮನಸ್ಯವೊದಗುವುದು ಸಾಧ್ಯವಿರಲಿಲ್ಲ ನನ್ನ ಹಾಸ್ಯ ಕುಚೋದ್ಯವನ್ನು ಅವರು ತಪ್ಪು ತಿಳಿದುಕೊಳ್ಳುತ್ತಿರಲಿಲ್ಲ ಕಟ್ಟಕಡೆಗೆ ಆಳುಗಳನ್ನು ಕಳುಹಿಸಿಬಿಡಬೇಕೆಂದೂ ಎಲ್ಲರಿಗೂ ಒಂದೇ ಅಡಿಗೆಯಮನೆಯಿರಬೇಕೆಂದೂ ಎಲ್ಲರೂ ಹೊತ್ತುಹೊತ್ತಿಗೆ ಸರಿಯಾಗಿ ಕಾರ್ಯಗಳನ್ನು ಮಾಡಬೇಕೆಂದೂ ನಾವು ನಿಶ್ಚಯಿಸಿದೆವು ಎಲ್ಲರೂ ಶಾಕಾಹಾರಿಗಳಾಗಿರಲಿಲ್ಲ ಎರಡು ಪಾಕಶಾಲೆಗಳೆಂದರೆ ವೆಚ್ಚವೇರುತ್ತಿದ್ದಿತು. ಆದುದರಿಂದ ಎಲ್ಲರಿಗೂ ಒಟ್ಟಿಗೆ ಒಂದು ಶಾಕಾಹಾರದ ಪಾಕಶಾಲೆಯನ್ನೇರ್ಪಡಿಸಲು ನಿಶ್ಚಯಿಸಿದೆವು ಸಾಧಾರಣವಾದ ಆಹಾರವನ್ನೇ ಎಲ್ಲರೂ ತೆಗೆದುಕೊಳ್ಳಬೇಕೆಂದು ಕಟ್ಟುಮಾಡುವುದೂ ಅಗತ್ಯವೆಂದು ಕಂಡುಬಂದಿತು.

ಈ ವ್ಯವಸ್ಥೆಯಿಂದ ವೆಚ್ಚವು ವಿಶೇಷವಾಗಿ ಕಡಮೆಯಾದುದಲ್ಲದೆ ಕಾಲದ ಉಳಿತಾಯವೂ ಶಕ್ತಿಯ ಉಳಿತಾಯವೂ ಹೆಚ್ಚಾಗಿ ಲಭಿಸಿತು. ನಮಗೆ ಇವುಗಳ ಆವಶ್ಯಕತೆಯೂ ಬಹುವಾಗಿದ್ದಿತು ರೈತರ ತಂಡ ತಂಡವೇ ತಮ್ಮ ಹೇಳಿಕೆಗಳನ್ನು ಕೊಡಲಿಕ್ಕೆ ಬಂದಿತು ಅವರ ಜೊತೆಗಾರರ ಸೈನ್ಯವು ಅವರ ಹಿಂದೆ ಬಂದು ಅಂಗಳವನ್ನೆಲ್ಲಾ ತುಂಬಿ ತುಳುಕಾಡುತ್ತಿದ್ದಿತು ದರ್ಶನಾರ್ಥಿಗಳಿಂದ ನನ್ನನ್ನು ಪಾರುಮಾಡಲು ನನ್ನ ಜೊತೆಯವರ ಸಾಹಸವು ಎಷ್ಟೋ ವೇಳೆ ವ್ಯರ್ಥವಾಗುತ್ತಿದ್ದಿತು ದರ್ಶನಕ್ಕಾಗಿ ನನ್ನನ್ನು ಗೊತ್ತಾದ ಹೊತ್ತಿನಲ್ಲಿ ಪ್ರದರ್ಶಿಸಬೇಕಾಯಿತು. ಕಟ್ಟಕಡೆಗೆ ಆರೇಳು ಸ್ವಯಂಸೇವಕರಾದರೂ ಹೇಳಿಕೆಗಳನ್ನು ಬರೆದುಕೊ

ಳ್ಳುವುದಕ್ಕೆ ಬೇಕಾಗಿದ್ದಿತು. ಆಗ ಕೂಡ ಕೆಲವರು ತಮ್ಮ ಹೇಳಿಕೆಗಳನ್ನು ಕೊಡಲು ಅವಕಾಶ ದೊರಕದೆ ಸಂಜೆ ಹೊರಟುಹೋಗಬೇಕಾಗುತ್ತಿದ್ದಿತು ಈ ಹೇಳಿಕೆಗಳೆಲ್ಲಾ ತಿರುಳುಳ್ಳುವಾಗಿರಲಿಲ್ಲ. ಅವುಗಳಲ್ಲಿ ಎಷ್ಟೋ ಹೇಳಿದ ಕತೆಯನ್ನೇ ಹೇಳುವುವಾಗಿದ್ದುವು ಆದರೆ ಜನರನ್ನು ಬೇರೆ ರೀತಿಯಲ್ಲಿ ಸಮಾಧಾನಪಡಿಸುವಂತಿರಲಿಲ್ಲ. ಈ ವಿಷಯದಲ್ಲಿ ಅವರ ಮನೋಭಾವವೂ ನನಗೆ ತಿಳಿಯುತ್ತಿದ್ದಿತು

ಹೇಳಿಕೆಯನ್ನು ಬರೆದುಕೊಳ್ಳುವವರು ಕೆಲವು ನಿಯಮಗಳನ್ನನು-ಸರಿಸಬೇಕಾಗಿದ್ದಿತು ಪ್ರತಿಯೊಬ್ಬ ರೈತನನ್ನೂ ಚನ್ನಾಗಿ ಪಾಟಿಸವಾಲು ಮಾಡಬೇಕಾಗಿದ್ದಿತು ಈ ಪರೀಕ್ಷೆಯಲ್ಲಿ ತೇರ್ಗಡೆಹೊಂದದವರ ಹೇಳಿಕೆಯನ್ನು ತ್ಯಜಿಸುತ್ತಿದ್ದರು ಇದಕ್ಕೆಲ್ಲಾ ವಿಶೇಷಕಾಲವು ಹಿಡಿಯುತ್ತಿದ್ದಿತು ಆದರೆ ಮುಕ್ಕಾಲು ಪಾಲು ಹೇಳಿಕೆಗಳೆಲ್ಲಾ ಈ ರೀತಿಯಾಗಿ ಸತ್ಯಸಿದ್ಧವಾಗಿ ಪರಿಣಮಿಸುತ್ತಿದ್ದುವು

ಈ ಹೇಳಿಕೆಗಳನ್ನು ಬರೆದುಕೊಳ್ಳುವಾಗಲೆಲ್ಲಾ ಗುಪ್ತ ಕಂದಾಚಾರದವರೊಬ್ಬರು (ಸಿ ಐ ಡಿ.) ತಪ್ಪದೆ ಇರುತ್ತಿದ್ದರು. ನಾವು ಅವರನ್ನು ಇರಗೊಡದಂತೆ ಮಾಡಬಹುದಾಗಿದ್ದಿತು ಆದರೆ ನಾವು ಸಿ ಐ ಡಿ. ಅಧಿಕಾರಿಗಳಿರುವುದನ್ನು ಅಡ್ಡಿಪಡಿಸದಿರಬೇಕೆಂಬುದಷ್ಟೇ ಅಲ್ಲದೆ ಅವರನ್ನು ವಿನಯದಿಂದ ಕಂಡು ಅವರಿಗೆ ತಿಳಿಸಲು ಸಾಧ್ಯವಾದ ವರ್ತಮಾನವನ್ನೆಲ್ಲಾ ತಿಳಿಸಬೇಕೆಂದು ಮೊಟ್ಟಮೊದಲೇ ನಿರ್ಧರಿಸಿಕೊಂಡಿದ್ದೆವು. ಇದರಿಂದ ನಮಗೆ ಯಾವ ನಷ್ಟವೂ ಉಂಟಾಗಲಿಲ್ಲ ಅಷ್ಟೇ ಅಲ್ಲ ಸಿ ಐ. ಡಿ ಅಧಿಕಾರಿಗಳ ಮುಂದೆ ಹೇಳಿಕೆಗಳನ್ನು ತೆಗೆದುಕೊಂಡುದೇ ರೈತರು ಇನ್ನೂ ನಿರ್ಭಯರಾಗಲು ಕಾರಣವಾಯಿತು ಈ ಅಧಿಕಾರಿಗಳಿದ್ದುದರಿಂದ ಒಂದು ಕಡೆ ರೈತರಲ್ಲಿ ತುಂಬಿದ್ದ ಭಯವು ಒಡಿಹೋಗಲು ಇನ್ನೊಂದು ಕಡೆ ರೈತರು ಅತಿಶಯೋಕ್ತಿಯಾಡುವುದಕ್ಕೆ ಸಹಜವಾದ ನಿರ್ಬಂಧವ ಲಭಿಸಿತು. ಜನರನ್ನು ಬಲೆಯಲ್ಲಿ ಸಿಕ್ಕಿಸಿಕೊಳ್ಳುವುದೇ ಸಿ ಐ ಡಿ ಗಳ ಕೆಲಸವಾದುದರಿಂದ ರೈತರು ಎಚ್ಚರದಿಂದಿರಲೇಬೇಕಾಗಿದ್ದಿತು.

ಜಮಿಾನ್ದಾರರನ್ನು ರೇಗಿಸಬಾರದೆಂದು ನನ್ನ ಇಷ್ಟವಿದ್ದಿತು. ಸಾಧುವೃತ್ತಿಯಿಂದ ಅವರ ಮನಸ್ಸನ್ನು ಒಲಿಸಬೇಕೆಂದು ನನ್ನ ಉದ್ದೇ

ಶವಿದ್ದುದರಿಂದ ಯಾರ ಯಾರ ವಿಷಯದಲ್ಲಿ ದೊಡ್ಡ ತಪ್ಪಿನ ಆರೋಪಣೆಯನ್ನು ಮಾಡುತ್ತಿದ್ದರೋ ಅಂತಹ ಜಮೀನ್ದಾರರಿಗೆಲ್ಲಾ ತಪ್ಪದೆ ಕಾಗದ ಬರೆದು ಅವರನ್ನು ಭೆಟ್ಟಿಮಾಡುತ್ತಿದ್ದೆನು. ಇದಲ್ಲದೆ ನಾನು ಜಮೀನ್ದಾರರ ಸಂಘಕ್ಕೆ ಹೋಗಿ ಅವರ ಮುಂದೆ ರೈತರ ಕುಂದುಕೊರತೆಗಳನ್ನೆಲ್ಲಾ ಹೇಳಿ ಅವರು ಈ ವಿಷಯವನ್ನು ಯಾವ ದೃಷ್ಟಿಯಿಂದ ನೋಡುವರೆಂಬುದನ್ನು ತಿಳಿದುಕೊಂಡು ಬಂದೆನು. ಕೆಲವು ಜಮೀನ್ದಾರರು ನನ್ನಲ್ಲಿ ದ್ವೇಷವಿಟ್ಟರು, ಕೆಲವರು ನನ್ನನ್ನು ಅಸಡ್ಡೆಮಾಡಿದರು ನಾಲ್ಕಾರು ಮಂದಿ ನನ್ನನ್ನು ವಿನಯದಿಂದ ಕಂಡರು.



## ೧೭

# ನನ್ನ ಸಂಗಡಿಗರು.

ವ್ರಜಕಿಶೋರಬಾಬುಗಳು ಮತ್ತು ರಾಜೇಂದ್ರಬಾಬುಗಳಂತಹ ಜೋಡಿಯು ದೊರಕುವುದೇ ಇಲ್ಲವೆನ್ನಬಹುದು. ಅವರು ನನ್ನಲ್ಲಿ ಅತಿಶಯ ಪ್ರೇಮವಿಟ್ಟಿದ್ದುದರಿಂದ ಅವರ ನೆರವಿಲ್ಲದೆ ನಾನು ಒಂದು ಹೆಜ್ಜೆಯನ್ನೂ ಮುಂದಿಡಲಾಗುತ್ತಿರಲಿಲ್ಲ ಅವರ ಶಿಷ್ಯರು ಅಥವಾ ಜೊತೆಗಾರರಾದ ಶಂಭು ಬಾಬು, ಅನುಗ್ರಹಬಾಬು, ಧರಣೀಬಾಬು, ರಾಮನವಮೀಬಾಬುಗಳೇ ಮುಂತಾದ ವಕೀಲರು ಸದಾ ನನ್ನೊಡನೆಯೇ ಇರುತ್ತಿದ್ದರು. ವಿಂಧ್ಯಾಬಾಬುಗಳೂ ಮತ್ತು ಜನಕಧಾರೀ ಬಾಬುಗಳೂ ಆಗಾಗ ಬಂದು ನಮಗೆ ಸಹಾಯಮಾಡುತ್ತಿದ್ದರು ಇವರೆಲ್ಲರೂ ಬಿಹಾರಿಗಳೇ. ರೈತರ ಹೇಳಿಕೆಗಳನ್ನು ಬರೆದುಕೊಳ್ಳುವುದೇ ಇವರ ಮುಖ್ಯ ಕಾರ್ಯವಾಗಿದ್ದಿತು. ಅಧ್ಯಾಪಕ ಕೃಪಾಲನಿಯವರು ನಮ್ಮೊಡನೆ ಸೇರದಿರಲಾದೀತೆ? ಅವರು ಸಿಂಧಿಗಳಾಗಿದ್ದರೂ ಅಜನ್ಮಬಿಹಾರಿಗಿಂತ ಹೆಚ್ಚಿನ ಬಿಹಾರಿಗಳಾಗಿದ್ದರು. ತಾವು ಯಾವ ಪ್ರಾಂತಕ್ಕೇ ಹೋಗಿ ಸೇರಲಿ ಅದನ್ನು ತಮ್ಮ ನಾಡಾಗಿ ಮಾಡಿಕೊಂಡು ಅಲ್ಲಿನ ಜನರೊಡನೆ ಸಂಮಿಳಿತರಾಗಿ ಹೋಗುವ ಶಕ್ತಿಯುಳ್ಳ ಅತಿ ಸ್ವಲ್ಪ ಮಂದಿಯನ್ನು ಮಾತ್ರ ನಾನು ನೋಡಿದ್ದೇನೆ ಇಂತಹರಲ್ಲಿ ಕೃಪಾಲನಿಯವರೊಬ್ಬರು ಅವರು ಬೇರೆ ಪ್ರಾಂತ್ಯಕ್ಕೆ ಸೇರಿದವರೆಂದು ಯಾರಿಗೆ ತೋರುವುದು ಕೂಡ ಅಶಕ್ಯವಾಗುವಂತೆ ಮಾಡಿದರು. ಅವರೇ ನನ್ನ ಪ್ರಧಾನ ದ್ವಾರಪಾಲಕರಾಗಿದ್ದರು. ಅವರು ನನ್ನ ದರ್ಶನಾಕಾಂಕ್ಷಿಗಳಾಗಿ ಬರುವ ಮಂದಿಯಿಂದ ನನ್ನನ್ನು ಕಾಯುವುದನ್ನೇ ಆ ಸಮಯಕ್ಕೆ ಮಾತ್ರ ತಮ್ಮ ಪರಮ ಪುರುಷಾರ್ಥವನ್ನಾಗಿ ಮಾಡಿಕೊಂಡರು ಈಗ ತಮ್ಮ ವಿನೋದವಾಗ್ಬಾಣಗಳನ್ನು ಪ್ರಯೋಗಿಸುವುದು, ಇನ್ನೊಂದು ಸಲ ಅಹಿಂಸಾತ್ಮಕವಾದ ಬೆದರಿಕೆಗಳಿಂದ ಬೆದರಿಸುವುದು, ಹೀಗೆ ಮಾಡಿ ಅವರು ಜನರನ್ನು ತಡೆಯುತ್ತಿ

ದ್ದರು ಸಂಜೆಯು ಮೊಬ್ಬು ಮಾಡುತ್ತಲೇ ಅವರು ತಮ್ಮ ಶಿಕ್ಷಕ ವೃತ್ತಿಯನ್ನು ವಹಿಸಿ ತಮ್ಮೊಡನೆ ಇರುವವರನ್ನು ಐತಿಹಾಸಿಕ ಪಾಠಗಳಿಂದಲೂ ಟೀಕಗಳಿಂದಲೂ ಆನಂದಗೊಳಿಸಿ ಅಂಜಿಕೆಯ ಸ್ವಭಾವದವರಾದಾದರೂ ಅಲ್ಲಿಗೆ ಬಂದರೆ ಅವರಲ್ಲಿ ಶೌರ್ಯವನ್ನು ಹುಟ್ಟಿಸುತ್ತಿದ್ದರು

ಮೌಲಾನಾ ಮಜಹರ್-ಉಲ್-ಹಕ್‌ರವರು ನನಗೆ ಅಗತ್ಯ ತೋರಿದಾಗ ಹೇಳಿದರೆ ಬಂದು ಸಹಾಯ ಮಾಡುವ ಜನರ ಪಟ್ಟಿಯಲ್ಲಿ ತಮ್ಮ ಹೆಸರನ್ನು ಕೊಟ್ಟಿದ್ದರು ಅವರು ತಿಂಗಳಿಗೆ ಒಂದೆರಡು ಬಾರಿ ತಪ್ಪದೆ ಬಂದು ನಮ್ಮನ್ನು ನೋಡಿಕೊಂಡು ಹೋಗುತ್ತಿದ್ದರು ಆಗ ಅವರು ತಮ್ಮ ಜೀವನವನ್ನು ವೈಭವದಿಂದಲೂ ಠೀವಿಯಿಂದಲೂ ನಡಸುತ್ತಿದ್ದರು. ಅದಕ್ಕೂ ಇಂದಿನ ಅವರ ಸರಳಜೀವನಕ್ಕೂ ಭೂಮ್ಯಾಕಾಶಗಳಿರುವಷ್ಟು ಅಂತರವುಂಟು. ಅವರ ಸೊಗಸುಗಾರಿಕೆಯನ್ನು ನೋಡಿದರ ಹೊರಗಿನವರಿಗೆ ಬೇರ ವಿಧವಾಗಿ ತೋರುತ್ತಿದ್ದರೂ ಅವರು ನಮ್ಮೊಡನ ಸೇರುತ್ತಿದ್ದುದರಿಂದ ಅವರೂ ನಮ್ಮಲ್ಲಿ ಒಬ್ಬರೆಂದು ನಮ್ಮ ಎಣಿಕೆಯಿದ್ದಿತು

ವಿಹಾರದಲ್ಲಿ ಯೋಗ್ಯಶಿಕ್ಷಣ ವ್ಯವಸ್ಥೆಯಾಗದೆ ಚಿರಕಾಲ ನಿಲ್ಲುವ ಕೆಲಸವು ಸಾಧ್ಯವಲ್ಲವೆಂದು ನಾನು ಮನಗಂಡೆನು ರೈತರ ಅಜ್ಞಾನವು ಕರುಣಾಜನಕವಾಗಿದ್ದಿತು ಅವರು ತಮ್ಮ ಮಕ್ಕಳನ್ನು ಅಲೆದಾಡುವುದಕ್ಕೆ ಬಿಡುತ್ತಿದ್ದರು, ಇಲ್ಲವಿದ್ದರ ಅಧಾರ್ಣೆಗಾಗಿ ಬೆಳಗಿನಿಂದ ಸಂಜೆಯವರೆಗೂ ನೀಲಿಯ ತೋಟಗಳಲ್ಲಿ ಹೆಣಗುವಂತೆ ಮಾಡುತ್ತಿದ್ದರು ಆ ಕಾಲದಲ್ಲಿ ಹೆಚ್ಚೆಂದರೆ ದಿನವೊಂದರ ಕೂಲಿಯು ಗಂಡಸಿಗೆ ಎರಡೂವರೆಯಾಣೆ, ಹೆಂಗಸಿಗೆ ಒಂದೂವರೆಯಾಣೆ, ಹುಡುಗನಿಗೆ ಒಂಬತ್ತುಕಾಸು, ಈ ರೀತಿಯಿದ್ದಿತು ದಿನವೊಂದಕ್ಕೆ ನಾಲ್ಕಾಣೆಯನ್ನು ಸಂಪಾದಿಸುವವನು ಅತ್ಯಂತ ಅದೃಷ್ಟಶಾಲಿಯೆಂಬ ಎಣಿಕೆಯಿದ್ದಿತು.

ನನ್ನ ಜೊತೆಯವರ ಸಲಹೆಯನ್ನು ತೆಗೆದುಕೊಂಡು ನಾನು ಆರು ಹಳ್ಳಿಗಳಲ್ಲಿ ಪ್ರಾಥಮಿಕ ಶಾಲೆಗಳನ್ನು ತೆರೆಯಬೇಕೆಂದು ನಿಶ್ಚಯಿಸಿದೆನು. ಗ್ರಾಮಸ್ಥರು ಶಿಕ್ಷಕರಿಗೆ ಆಹಾರವನ್ನೂ ವಾಸಸ್ಥಾನವನ್ನೂ ಒದಗಿಸಿ ಕೊಡಬೇಕೆಂದೂ ಇತರ ವೆಚ್ಚಗಳನ್ನು ನಾವು ಹೊಂದಿಸಬೇಕೆಂದೂ

ಗ್ರಾಮಸ್ಥರೊಡನೆ ಸಮ್ಮತರಾಗಿದ್ದಿತು. ಹಳ್ಳಿಯವರ ಕೈಯಲ್ಲಿ ಹಣವಿರುತ್ತಲೇ ಇರಲಿಲ್ಲವೆನ್ನಬಹುದು. ಆದರೆ ಆಹಾರಸಾಮಗ್ರಿಗಳ ನ್ನೊದಗಿಸುವುದು ಅವರಿಗೆ ಸಾಧ್ಯವಿದ್ದಿತು ವಸ್ತುತಃ ಅವರು ಕಾಳು ಮುಂತಾದ ಪದಾರ್ಥಗಳನ್ನು ಒದಗಿಸಲು ತಾವು ಸಿದ್ಧರಾಗಿದ್ದೇವೆಂದು ಆಗಲೇ ತಿಳಿಸಿದ್ದರು.

ಶಿಕ್ಷಕರನ್ನು ತರುವುದೆಲ್ಲಿಂದ ? ಎಂಬುದು ಒಂದು ಸಮಸ್ಯೆಯಾಗಿ ದ್ದಿತು ಅಲ್ಪವೇತನಕ್ಕಾಗಿ ಅಥವಾ ಸಂಬಳವೇ ಇಲ್ಲದೆ ಕೆಲಸಮಾಡುವ ಶಿಕ್ಷಕರು ಅಲ್ಲಿಯೇ ಸಿಕ್ಕುವುದು ಕಷ್ಟವಾಗಿದ್ದಿತು ಸಾಮಾನ್ಯ ಶಿಕ್ಷ ಕರ ಕೈಗೆ ಮಕ್ಕಳನ್ನು ಒಪ್ಪಿಸುವುದು ಯಾವಾಗಲೂ ನನ್ನ ಅಭಿಮತ ವಾಗಿರಲಿಲ್ಲ ಅವರ ಸಾಹಿತ್ಯಪ್ರವೀಣತೆಗಿಂತ ಚಾರಿತ್ರಸಂಪನ್ನತೆಯು ಬಹು ಮುಖ್ಯವಾಗಿದ್ದಿತು

ಆದುದರಿಂದ ನಾನು ಈ ಶಿಕ್ಷಣಕಾರ್ಯಕ್ಕಾಗಿ ಸ್ವಯಂಸೇವಕರು ಬೇಕೆಂದು ಸಾರ್ವಜನಿಕಬಿನ್ನಹವೊಂದನ್ನು ಪ್ರಕಟಿಸಿದೆನು. ಈ ಬಿನ್ನಹ ವನ್ನು ಮನ್ನಿಸಿ ಒಡನೆಯೇ ಉತ್ತರಗಳು ಬಂದುವು ಶ್ರೀ ಗಂಗಾಧರ ರಾವ್ ದೇಶಪಾಂಡೆಯವರು ಬಾಬಾಸಾಹೇಬ್ ಸೋಮಣರನ್ನೂ ಪುಂ ಡರೀಕರನ್ನೂ ಕಳುಹಿಸಿಕೊಟ್ಟರು. ಮುಂಬಯಿಯಿಂದ ಶ್ರೀಮತೀ ಅವಂತಿಕಾಬಾಯೀ ಗೋಖಲೆಯವರೂ ಪೂನಾದಿಂದ ಶ್ರೀಮತೀ ಆನಂ ದೀಬಾಯೀ ವೈಶಂಪಾಯನರೂ ಬಂದರು ಛೋಟೇಲಾಲ್, ಸುರೇಂ ದ್ರನಾಥ ಮತ್ತು ನನ್ನ ಮಗನಾದ ದೇವದಾಸ್ ಇವರನ್ನು ಕಳುಹಿಸಿ ಕೊಡಲು ಆಶ್ರಮಕ್ಕೆ ಕಾಗದ ಬರೆದೆನು ಇದೇ ಸಮಯದಲ್ಲಿ ಮಹಾ ದೇವ ದೇಸಾಯಿ ಮತ್ತು ನರಹರಿ ಪರೀಖ್ ಇವರು ತಮ್ಮ ಹೆಂಡತಿಯ ರೊಡನೆ ಬಂದು ನಮ್ಮೊಂದಿಗೆ ಕಲೆತರು ಕಸ್ತೂರಿಬಾಯಿಯನ್ನು ಈ ಕೆಲಸ ಕ್ಕಾಗಿ ಕರೆದುದಾಯಿತು ಇವರೆಲ್ಲರೂ ಸೇರಿ ಪ್ರಬಲಸೈನ್ಯವೇ ಆಯಿ ತೆಂದು ಹೇಳಬೇಕು ಶ್ರೀ ಅವಂತಿಕಾಬಾಯೀ ಮತ್ತು ಶ್ರೀ. ಆನಂ ದೀಬಾಯೀ ಇವರು ಸುಶಿಕ್ಷಿತರಾಗಿದ್ದರು ಆದರೆ ಶ್ರೀ ದುರ್ಗಾದೇ ಸಾಯಿ ಮತ್ತು ಶ್ರೀ. ಮಣಿಬೆನ್ ಪರೀಖ್ ಇವರಿಗೆ ಗುಜರಾತಿ ಅಕ್ಷರ

ಜ್ಞಾನವು ಮಾತ್ರ ಇದ್ದಿತು ಕಸ್ತೂರಬಾಯಿಗೆ ಅದೂ ಇರಲಿಲ್ಲ ಈ ಮಹಿಳೆಯರು ಹುಡುಗರಿಗೆ ಹಿಂದೀಭಾಷೆಯಲ್ಲಿ ಪಾಠಕಲಿಸುವುದೆಂತು ?

ಅವರು ಹುಡುಗರಿಗೆ ವ್ಯಾಕರಣವನ್ನೂ ಓದುಬರಹನ್ನೂ ಲೆಕ್ಕ ವನ್ನೂ ಕಲಿಸುವುದಕ್ಕಿಂತ ಹೆಚ್ಚಾಗಿ ಸ್ವಚ್ಛತೆಯನ್ನೂ ಒಳ್ಳೆಯ ನಡತೆಯನ್ನೂ ಹೇಳಿಕೊಡುವರೆಂಬುದೇ ನನ್ನ ನಿರೀಕ್ಷಣೆ ಯೆಂದು ಅವರಿಗೆ ವಿವರಿಸಿದೆನು. ಇದಲ್ಲದೆ ಅಕ್ಷರಜ್ಞಾನದ ವಿಷಯದ ದಲ್ಲಿ ಕೂಡ ಗುಜರಾತೀ ಹಿಂದೀ ಮತ್ತು ಮರಾಠೀ ಭಾಷೆಗಳ ಮಧ್ಯೆ ಅವರು ತಿಳಿದುಕೊಂಡಿದ್ದಷ್ಟು ಅಂತರವಿಲ್ಲವೆಂದೂ ಪ್ರಾಥಮಿಕ ವರ್ಗ ಗಳಲ್ಲಿಯಂತು ಅಕ್ಷರಮಾಲೆಯನ್ನೂ ಲೆಕ್ಕವನ್ನೂ ಕಲಿಸಿಕೊಡುವುದು ಕಷ್ಟವಾದ ವಿಷಯವೆಂದೂ ವಿಶದಪಡಿಸಿದೆನು. ಇದರ ಪರಿಣಾಮ ವಾಗಿ ಈ ಮಹಿಳೆಯರು ನಡೆಸುತ್ತಿದ್ದ ವರ್ಗಗಳು ಅತ್ಯುತ್ಕೃಷ್ಟವಾಗಿ ನಡೆಯುತ್ತಿದ್ದುವು. ಅವರಿಗೆ ತಮ್ಮ ಅನುಭವದಿಂದ ಆತ್ಮವಿಶ್ವಾಸವೂ ಕಾರ್ಯದಲ್ಲಿ ಉತ್ಸಾಹವೂ ಹುಟ್ಟಿದುವು. ಶ್ರೀ ಅವಂತಿಕಾಬಾಯಿ ಯವರ ಶಾಲೆಯು ಆದರ್ಶ ವಿದ್ಯಾನಿಲಯವಾಯಿತು ಅವರು ತಮ್ಮ ಶಾಲೆಗೆ ತಮ್ಮ ಆತ್ಮವನ್ನೇ ಅರ್ಪಿಸಿದರು. ತಮ್ಮ ಅದ್ವಿತೀಯ ಗುಣ ಗಳನ್ನೆಲ್ಲಾ ಈ ಕಾರ್ಯದಲ್ಲಿ ಉಪಯೋಗಿಸಿದರು ಈ ಮಹಿಳೆಯರ ಮೂಲಕ ಗ್ರಾಮದ ಹೆಂಗಸರ ಜೀವನವನ್ನು ಮಾರ್ಪಡಿಸುವುದು ಕೂಡ ಸ್ವಲ್ಪಮಟ್ಟಿಗೆ ಸಾಧ್ಯವಾಯಿತು.

ಆದರೆ ಪ್ರಾಥಮಿಕ ವಿದ್ಯಾಭ್ಯಾಸದ ಅನುಕೂಲವನ್ನೊದಗಿಸಿ ಅಷ್ಟ ಕ್ಕೇ ನಿಲ್ಲಿಸಲು ನನಗೆ ಇಷ್ಟವಿರಲಿಲ್ಲ ಹಳ್ಳಿಗಳು ಅಶುಚಿಯಾಗಿದ್ದುವು, ಹಾದಿಗಳು ಹೊಲಸಿನಿಂದ ತುಂಬಿದ್ದುವು. ಬಾವಿಗಳ ಸುತ್ತಲೂ ಕೆಸ ರಿದ್ದು ನಾರುತ್ತಿದ್ದಿತು. ಮನೆಯ ಅಂಗಳಗಳು ಸಹಿಸಲಾರದಷ್ಟು ಕೊಳಕಾಗಿದ್ದುವು. ಶುಚಿಯಾಗಿರುವುದರಲ್ಲಿ ದೊಡ್ಡವರಿಗೆ ಶಿಕ್ಷಣವು ಅಗತ್ಯವಾಗಿದ್ದಿತು. ಅವರೆಲ್ಲರೂ ವಿವಿಧವಾದ ಚರ್ಮದ ಜಾಡ್ಯಗಳಿಂದ (ಕಜ್ಜಿ, ತುರಿ ಮುಂತಾದುವು) ತಪ್ತರಾಗಿದ್ದರು ಆದುದರಿಂದ ಸಾಧ್ಯ ವಾದಷ್ಟು ಗ್ರಾಮನೈರ್ಮಲ್ಯದ ಕೆಲಸವನ್ನು ಮಾಡಬೇಕೆಂದೂ ಅವರ

ಜೀವನದ ಪ್ರತಿಯೊಂದು ಭಾಗವನ್ನೂ ಪ್ರವೇಶಿಸಬೇಕೆಂದೂ ನಿರ್ಧಾರ ಮಾಡಿತು.

ಈ ಕಾರ್ಯಕ್ಕೆ ವೈದ್ಯರ (ಡಾಕ್ಟರರ) ಸಹಾಯವು ಅವಶ್ಯಕವಾಗಿದ್ದಿತು. ದಿವಂ. ಡಾ. ದೇವರನ್ನು ನಮ್ಮಲ್ಲಿಗೆ ಕಳುಹಿಸಿಕೊಡಬೇಕೆಂದು ನಾನು ಭಾರತಸೇವಾಸಂಘದವರನ್ನು ಪ್ರಾರ್ಥಿಸಿದೆನು ನಾವು ಆಪ್ತಮಿತ್ರರಾಗಿದ್ದೆವು. ಅವರು ನಮ್ಮ ಬಳಿಗೆ ಬಂದು ಆರು ತಿಂಗಳು ಕೆಲಸ ಮಾಡಲು ಒಡನೆಯೇ ಒಪ್ಪಿದರು. ಶಿಕ್ಷಕರೆಲ್ಲಾ—ಹೆಂಗಸರೂ ಗಂಡಸರೂ—ಅವರ ಕೈಕೆಳಗೆ ಕೆಲಸಮಾಡಬೇಕಾಗಿದ್ದಿತು.

ಜಮೀನ್ದಾರರ ಮೇಲಿನ ಆರೋಪಣೆಗಳನ್ನಾಗಲಿ ರಾಜಕೀಯ ವಿಚಾರಗಳನ್ನಾಗಲಿ ಹಚ್ಚಿಕೊಂಡು ಹೋಗಕೂಡದೆಂದು ಅವರೆಲ್ಲರಿಗೂ ಕಟ್ಟಪ್ಪಣೆಯಾಗಿದ್ದಿತು. ಏನಾದರೂ ತೊಂದರೆಗಳನ್ನು ಹೇಳಬೇಕೆಂದಿರುವವರನ್ನು ನನ್ನ ಬಳಿಗೆ ಕಳುಹಿಸಬೇಕಾಗಿದ್ದಿತು. ಯಾರೂ ತಮ್ಮ ನಿಯತ ಮಾರ್ಗವನ್ನು ಬಿಟ್ಟು ಕದಲಕೂಡದಾಗಿದ್ದಿತು. ನಮ್ಮ ಮಿತ್ರರೆಲ್ಲಾ ಈ ನಿಯಮಗಳನ್ನು ಚಾಚೂ ತಪ್ಪದೆ ನಡೆಸಿದರು. ನಿಯಮವನ್ನು ಮೀರಿದ ಒಂದು ಸಂದರ್ಭವೂ ನನ್ನ ನೆನಪಿಗೆ ಬರುವುದಿಲ್ಲ.



## ೧೮

# ಗ್ರಾಮ ವ್ಯವಸ್ಥಾ ಪ್ರವೇಶ

ನಾವು ಪ್ರತಿಯೊಂದು ಶಾಲೆಯ ಆಡಳಿತವನ್ನೂ ಸಾಧ್ಯವಾದಮಟ್ಟಿಗೆ ಒಬ್ಬ ಹೆಂಗಸು ಮತ್ತು ಒಬ್ಬ ಗಂಡಸಿಗೆ ವಹಿಸಿದೆವು ಈ ಸ್ವಯಂ ಸೇವಕರು ಔಷಧೋಪಚಾರದ ಮತ್ತು ಗ್ರಾಮನೈರ್ಮಲ್ಯದ ವ್ಯವಸ್ಥೆಯನ್ನು ನೋಡಿಕೊಳ್ಳಬೇಕಾಗಿದ್ದಿತು ಸ್ತ್ರೀವರ್ಗಕ್ಕೆ ಸಂಬಂಧಪಟ್ಟ ಕೆಲಸವನ್ನು ಹೆಂಗಸರೇ ಮಾಡಬೇಕಾಗಿದ್ದಿತು

ಔಷಧೋಪಚಾರದ ಕೆಲಸವು ಬಹು ಸುಲಭವಾಗಿದ್ದಿತು ಹರಳೆಣ್ಣೆ, ಕ್ವಿನೈನ್ (ಜ್ವರದ ಗುಳಿಗೆ) ಮತ್ತು ಗಂಧಕದ ಮುಲಾಮು, ಈ ಔಷಧಗಳು ಮಾತ್ರ ಸ್ವಯಂಸೇವಕರ ವಶದಲ್ಲಿರುತ್ತಿದ್ದುವು ಕಾಹಿಲೆ ಮನುಷ್ಯನ ನಾಲಿಗೆಯು ಬೆಳ್ಳಗಾಗಿದ್ದರೆ ಅಥವಾ ಅವನು ತನಗೆ ಅಜೀರ್ಣವೆಂದು ಹೇಳಿದರೆ ಅವನಿಗೆ ಹರಳೆಣ್ಣೆಯನ್ನು ಕೊಡುತ್ತಿದ್ದರು ಜ್ವರ ಎದ್ದವರಿಗೆ ಮೊದಲು ಸ್ವಲ್ಪ ಹರಳೆಣ್ಣೆಯನ್ನು ಕೊಟ್ಟು ಆಮೇಲೆ ಕ್ವಿನೈನನ್ನು ಕೊಡುತ್ತಿದ್ದರು ಕುರು ಕಜ್ಜಿ ಮುಂತಾದುವುಗಳಿಂದ ಪೀಡಿತರಾದವರಿಗೆ ಆ ಭಾಗಗಳನ್ನು ಚನ್ನಾಗಿ ತೊಳೆದು ಗಂಧಕದ ಮುಲಾಮನ್ನು ಹಚ್ಚುತ್ತಿದ್ದರು ಯಾವ ಔಷಧವನ್ನೂ ಮನೆಗೆ ತಗೆದುಕೊಂಡು ಹೋಗುವುದಕ್ಕೆ ಕೊಡುತ್ತಿರಲಿಲ್ಲ. ಹೆಚ್ಚಿನ ರೋಗವಿದ್ದ ಕಡೆ ಡಾ ದೇವರ ಸಲಹೆಯಂತೆ ನಡೆಯುತ್ತಿದ್ದರು. ಅವರು ಪ್ರತಿಯೊಂದು ಕೇಂದ್ರಕ್ಕೂ ವಾರಕ್ಕೊಂದು ಬಾರಿ ಗೊತ್ತಾದ ದಿನ ಹೋಗುತ್ತಿದ್ದರು.

ಎಷ್ಟೋಮಂದಿ ಈ ಸುಲಭವಾದ ಚಿಕಿತ್ಸಾಕ್ರಮವನ್ನು ಉಪಯೋಗಿಸಿಕೊಂಡರು. ಅಲ್ಲಿ ಹರಡಿದ್ದ ಕಾಹಿಲೆಗಳು ಕಡಮೆಯಾಗಿದ್ದುವೆಂದೂ ಅವುಗಳ ನಿವಾರಣೆಗೆ ಸಾಧಾರಣವಾಗಿ ಚಿಕಿತ್ಸೆಯು ಸಾಕಾಗಿದ್ದಿತೆಂದೂ ದೊಡ್ಡ ವೈದ್ಯರ ಸಹಾಯವೇನೂ ಬೇಕಾಗಿರಲಿಲ್ಲವೆಂದೂ

ನೆನಪಿನಲ್ಲಿಟ್ಟುಕೊಂಡರೆ ಈ ಕಾರ್ಯವ್ಯವಸ್ಥೆಯು ವಿಚಿತ್ರವಾಗಿ ಕಾಣಲಾರದು. ಜನರಿಗಾದರೋ ಈ ಏರ್ಪಾಡು ಅತ್ಯನುಕೂಲವಾಗಿದ್ದಿತು.

ಗ್ರಾಮನೈರ್ಮಲ್ಯದ ಕೆಲಸವು ಕಠಿಣವಾಗಿದ್ದಿತು. ಜನರು ತಾವೇ ಏನು ಮಾಡಲೂ ಸಿದ್ಧರಾಗಿರಲಿಲ್ಲ. ಹೊಲದ ಕೂಲಿಗಾರರು ಕೂಡ ಸ್ವಂತವಾಗಿ ಝಾಡಮಾಲಿ ಕೆಲಸವನ್ನು ಮಾಡಲು ಸಿದ್ಧರಾಗಿರಲಿಲ್ಲ. ಆದರೆ ಡಾ. ದೇವರು ಸುಲಭವಾಗಿ ಸೋಲುವವರಾಗಿರಲಿಲ್ಲ. ಒಂದು ಹಳ್ಳಿಯಲ್ಲಿ ಆದರ್ಶನೈರ್ಮಲ್ಯವು ಕಂಗೊಳಿಸುವಂತೆ ಅವರೂ ಸ್ವಯಂಸೇವಕರೂ ತಮ್ಮ ಶಕ್ತಿಯನ್ನೆಲ್ಲಾ ಉಪಯೋಗಿಸಿದರು. ಅವರು ಬೀದಿಗಳನ್ನೂ ಅಂಗಳಗಳನ್ನೂ ಗುಡಿಸಿದರು. ಭಾವಿಗಳನ್ನು ಶುದ್ಧಮಾಡಿದರು, ಸುತ್ತಮುತ್ತಲಿನ ಗುಂಡಿಗಳನ್ನು ಮುಚ್ಚಿದರು. ಗ್ರಾಮಸ್ಥರು ತಮ್ಮಲ್ಲಿಯೇ ಸ್ವಯಂಸೇವಕರನ್ನು ಏರ್ಪಡಿಸುವಂತೆ ಒಲವಿನಿಂದ ಪ್ರೇರಿಸಿದರು. ಈ ಮಧುರ ಅನುಭವಗಳೊಡನೆ ಜನರ ಔದಾಸೀನ್ಯದ ಕಟುವಾದ ಅನುಭವಗಳೂ ಬರೆಯದೇ ಇರಲಿಲ್ಲ. ಕೆಲವು ಹಳ್ಳಿಯ ಜನರು ತಮಗೆ ಈರೀತಿಯ ಕೆಲಸವು ಇಷ್ಟವಿಲ್ಲವೆಂಬುದನ್ನು ಬಾಯಿಬಿಟ್ಟು ಹೇಳಿದುದು ನನಗೆ ಜ್ಞಾಪಕವಿದೆ.

ಇಂದಿಗೆ ಮುಂಚೆ ಎಷ್ಟೋ ಸಭೆಗಳಲ್ಲಿ ನಾವು ವರ್ಣಿಸಿರುವ ಅನುಭವವೊಂದನ್ನು ಇಲ್ಲಿ ವಿವರಿಸಿದರೆ ಅಸಂಗತವಾಗಲಾರದು. ಭಿತಿಹರ್ವಾ ಎಂಬುದೊಂದು ಸಣ್ಣ ಹಳ್ಳಿ. ಅಲ್ಲಿ ನಮ್ಮ ಶಾಲೆಯಿದ್ದಿತು. ಅದರ ಹತ್ತಿರಲೇ ಇದ್ದ ಇನ್ನೂ ಸಣ್ಣ ಹಳ್ಳಿಯೊಂದಕ್ಕೆ ನಾನು ಹೋದಾಗ ಬಹು ಕೊಳಕಾದ ಬಟ್ಟೆಗಳನ್ನುಟ್ಟುಕೊಂಡ ಕೆಲವು ಹೆಂಗಸರನ್ನು ನಾನು ಕಂಡೆನು. ಅವರು ತಮ್ಮ ಬಟ್ಟೆಗಳನ್ನೇಕೆ ಒಗೆಯುವುದಿಲ್ಲವೆಂದು ವಿಚಾರಿಸಲು ನಾನು ಕಸ್ತೂರಿಬಾಯಿಗೆ ಹೇಳಿದೆನು. ಆಕೆಯು ಅವರಲ್ಲಿ ಒಬ್ಬಳೊಡನೆ ಮಾತನಾಡಲು ಆ ಹೆಂಗಸು ಕಸ್ತೂರಿಬಾಯಿಯನ್ನು ತನ್ನ ಗುಡಿಸಿಲಿನೊಳಕ್ಕೆ ಕರೆದುಕೊಂಡುಹೋಗಿ “ನೋಡಿ, ಇಲ್ಲಿ ಬೇರೆ ಬಟ್ಟೆಯಿಟ್ಟುಕೊಳ್ಳುವುದಕ್ಕೆ ಪೆಟ್ಟಿಗೆಯೂ ಇಲ್ಲ, ಮಾಡವೂ ಇಲ್ಲ. ನಾನು ಉಟ್ಟುಕೊಂಡಿರುವ ಸೀರೆಯೊಂದೇ ನನಗಿರುವುದು. ನಾನು ಅದನ್ನು ಒಗೆಯುವುದು ಹೇಗೆ? ಮಹಾತ್ಮಾಜಿಯವರಿಗೆ ಹೇಳಿ ನನಗಿನ್ನೊಂದು ಸೀರೆ

ಯನ್ನು ತಂದುಕೊಡಬೇಕೆಂದು. ಆಗ ನಾನು ನಿತ್ಯವೂ ಎಂದು ಒಗೆದ ಬಟ್ಟೆಯನ್ನುಡುವೆನೆಂದು ಮಾತು ಕೊಡುತ್ತೇನೆ '' ಎಂದಳು

ಇಂತಹ ಗುಡಿಸಲು ಇದೊಂದೇ ಅಲ್ಲ ಹಿಂದೂಸ್ಥಾನದ ಎಷ್ಟೋ ಹಳ್ಳಿಗಳಲ್ಲಿ ಇಂತಹವು ಇವೆ ಭರತಖಂಡದ ಲೆಕ್ಕವಿಲ್ಲದಷ್ಟು ಗುಡಿಸಿಲುಗಳಲ್ಲಿ ಜನರು ಒಂದು ಸಾಮಾನಿಲ್ಲದೆ ಮಾನಕ್ಕಾಗಿ ಮೈಮೇಲೆ ಹಾಕಿಕೊಂಡಿರುವ ಚಿಂದಿಯನ್ನು ಬಿಟ್ಟು ಬೇರೆ ಬಟ್ಟೆಯೊಂದಿಲ್ಲದೆ ಜೀವನ ನಡೆಸುತ್ತಾರೆ

ಇನ್ನೊಂದು ಅನುಭವವನ್ನು ಇಲ್ಲಿ ತಿಳಿಸುತ್ತೇನೆ ಚಂಪಾರಣ್ಯದಲ್ಲಿ ಹುಲ್ಲಿಗೂ ಬಿದಿರಿಗೂ ಬರವಿಲ್ಲ ಭಿತಿಹರ್ವದಲ್ಲಿ ಈ ಸಾಮಗ್ರಿಗಳಿಂದ ಶಾಲೆಯ ಗುಡಿಸಲನ್ನು ಕಟ್ಟಿದ್ದರು ಯಾರೋ ಒಬ್ಬರು— ಹತ್ತಿರವಿದ್ದ ಜಮೀನ್ದಾರರ ಆಳುಗಳಲ್ಲಿ ಕೆಲವರಿರಬಹುದು—ಆ ಗುಡಿಸಿಲಿಗೆ ಎಂದೋ ರಾತ್ರಿ ಬೆಂಕಿ ಹಚ್ಚಿದರು. ಇನ್ನೊಂದು ಗುಡಿಸಿಲನ್ನು ಬಿದಿರಿನಿಂದಲೂ ಹುಲ್ಲಿನಿಂದಲೂ ಕಟ್ಟುವುದು ಉಚಿತವಲ್ಲವೆಂದು ತೋರಿತು ಶ್ರೀ ಸೋಮಣರು ಸರಿಯಾದ ಒಂದು ಮನೆಯನ್ನೇ ಕಟ್ಟಬೇಕೆಂದು ನಿಶ್ಚಯಿಸಿದರು. ಅವರು ಪಡುತ್ತಿದ್ದ ಶ್ರಮವನ್ನು ನೋಡಿ ಇತರರನೇಕರು ಅವರೊಡನೆ ಸೇರಿದರು. ಹೀಗೆ ಒಂದು ಇಟ್ಟಿಗೆಯ ಮನೆಯು ಶೀಘ್ರದಲ್ಲಿಯೇ ಸಿದ್ಧವಾಯಿತು ಇನ್ನು ಅದನ್ನೇನೂ ಸುಟ್ಟುಹಾಕುವ ಭಯವಿರಲಿಲ್ಲ.

ಈ ರೀತಿಯಾಗಿ ಸ್ವಯಂಸೇವಕರು ತಮ್ಮ ಶಾಲೆಗಳು, ಗ್ರಾಮ ನೈರ್ಮಲ್ಯ ವ್ಯವಸ್ಥೆ, ಔಷಧೋಪಚಾರ—ಇವುಗಳಿಂದ ಹಳ್ಳಿಯ ಜನರ ವಿಶ್ವಾಸವನ್ನೂ ಮನ್ನಣೆಯನ್ನೂ ಸಂಪಾದಿಸಿ ಅವರ ಮೇಲೆ ಸತ್ಪ್ರಭಾವವನ್ನು ಬೀರಲು ಶಕ್ತರಾದರು.

ಆದರ ಈ ಗ್ರಾಮೋಜ್ಜೀವನ ಕಾರ್ಯವನ್ನು ಚಿರಸ್ಥಾಯಿಯಾದ ಅಸ್ತಿಭಾರದಮೇಲೆ ನಿಲ್ಲಿಸಬೇಕೆಂಬ ನನ್ನ ಆಶಯು ಕೈಗೂಡಲಿಲ್ಲವೆಂದು ನಾನು ವಿಷಾದಪೂರ್ವಕವಾಗಿ ಒಪ್ಪಿಕೊಳ್ಳಬೇಕು. ಸ್ವಯಂಸೇವಕರು ಕೆಲವುಕಾಲ ಮಾತ್ರ ನಿಲ್ಲಲು ಬಂದಿದ್ದರು. ಹೊರಗಿನಿಂದ ಇನ್ನೂ

ಹೆಚ್ಚು ಮಂದಿ ದೊರಕಲಿಲ್ಲ ಸದಾ ನಿಂತು ಪ್ರತಿಫಲವಿಲ್ಲದೆ ಕೆಲಸಮಾಡುವ ಜನರಾರೂ ಬಿಹಾರದಲ್ಲಿಯೇ ದೊರಕಲಿಲ್ಲ. ಚಂಪಾರಣ್ಯದಲ್ಲಿ ನನ್ನ ಕೆಲಸವು ಮುಗಿದೊಡನೆಯೇ ಈ ಮಧ್ಯ ಬೇರೆಕಡೆ ಹೊಂಚುಹಾಕುತ್ತಿದ್ದ ಕಾರ್ಯವು ನನ್ನನ್ನು ಸೆಳೆದೊಯ್ದಿತು. ಆದರೂ ಚಂಪಾರಣ್ಯದಲ್ಲಿ ನಾಲ್ಕಾರು ತಿಂಗಳು ಮಾಡಿದ ಕೆಲಸವು ಎಷ್ಟು ಆಳವಾಗಿ ಬೇರೂರಿತೆಂದರೆ ಅದರ ಪ್ರಭಾವವು ಇಂದುಕೂಡ ಅಲ್ಲಿ ಒಂದಲ್ಲದಿದ್ದರೆ ಇನ್ನೊಂದು ರೂಪದಲ್ಲಿ ಕಾಣಬರುವುದು



೧೯

# ಗವರ್ನರರು ಒಳ್ಳೆಯವರಾಗಿದ್ದಾಗ

ನಾನು ಹಿಂದಿನ ಅಧ್ಯಾಯಗಳಲ್ಲಿ ವಿವರಿಸಿರುವಂತಹ ಸಮಾಜ ಸೇವೆಯ ಕೆಲಸವು ಒಂದುಕಡೆ ನಡೆಯುತ್ತಿರಲು ಇನ್ನೊಂದುಕಡೆ ರೈತರ ದುಃಖವಿಷಯಕವಾದ ಹೇಳಿಕೆಗಳನ್ನು ಬರೆದುಕೊಳ್ಳುವ ಕಾರ್ಯವು ಒಳಿತಾಗಿ ಸಾಗುತ್ತಿದ್ದಿತು ಅಂತಹ ಸಾವಿರಾರು ಜನರ ಹೇಳಿಕೆಗಳನ್ನು ತೆಗೆದುಕೊಂಡುದಾಯಿತು ಅವುಗಳಿಂದ ಯಾವ ಫಲವೂ ಉಂಟಾಗದೆ ಇದ್ದೀತೆ? ಹೇಳಿಕೆಗಳನ್ನು ಕೊಡಲು ಬರುವ ರೈತರ ಸಂಖ್ಯೆಯು ದಿನವೂ ಹೆಚ್ಚುತ್ತಿದ್ದಿತು. ಇದರಿಂದ ಜಮೀನ್ದಾರರ ಕೋಪವೇರಿ ಅವರು ನಾವು ನಡೆಸುತ್ತಿದ್ದ ವಿಚಾರಣೆಯನ್ನು ನಿರರ್ಥಕಗೊಳಿಸಲು ವಿಶ್ವಪ್ರಯತ್ನವನ್ನೆಸಗಿದರು

ಒಂದು ದಿನ ವಿಹಾರಪ್ರಾಂತದ ಸರ್ಕಾರದಿಂದ ಈ ಒಕ್ಕಣೆಯ ಪತ್ರವು ನನ್ನ ಕೈಸೇರಿತು "ನೀವು ವಿಚಾರಣೆಯನ್ನು ದೀರ್ಘಕಾಲದಿಂದ ನಡೆಸುತ್ತಿದ್ದೀರಿ. ಈಗ ಅದನ್ನು ನಿಲ್ಲಿಸಿ ನೀವು ವಿಹಾರವನ್ನು ಬಿಟ್ಟು ಹೋಗುವ ಸಮಯವೊದಗಿಲ್ಲವೆ?" ಈ ಕಾಗದವೇನೋ ವಿನಯಪೂರ್ವಕವಾದ ಭಾಷೆಯಲ್ಲಿ ಬರೆದುದಾಗಿದ್ದಿತು. ಆದರ ಅದರ ಅರ್ಥವು ಸ್ಪಷ್ಟವಾಗಿದ್ದಿತು.

ನಾನು ಇದಕ್ಕೆ ಉತ್ತರವಾಗಿ ವಿಚಾರಣೆಯು ದೀರ್ಘಕಾಲ ನಡೆಯುವುದು ಸಹಜವೆಂದೂ ಆದರಿಂದ ಜನರಿಗೆ ಕಷ್ಟಪರಿಹಾರವು ಫಲಿಸಿದ ಹೊರತು ವಿಹಾರದಿಂದ ತೆರಳುವ ಉದ್ದೇಶವು ನನಗಿರಲಿಲ್ಲವೆಂದೂ ಬರೆದೆನು ನಾನು ಮಾಡುತ್ತಿದ್ದ ವಿಚಾರಣೆಯನ್ನು ನಿಲ್ಲಿಸುವುದು ಸರ್ಕಾರದವರ ಕೈಯಲ್ಲೇ ಇಟ್ಟತೆಂದೂ ರೈತರ ದುಃಖದ ಕಥೆಯು ನಿಜವೆಂದು ಒಪ್ಪಿ ಅದನ್ನು ಪರಿಹರಿಸುವುದು ಅಥವಾ ರೈತರು ಹೇಳುವ ವಾರ್ತೆಯಲ್ಲಿ

ಸತ್ಯಾಂಶವಿರಬಹುದೆಂದು ಅರಿತು ಒಡನೆಯೇ ಸರ್ಕಾರದವರೇ ವಿಚಾರಣೆಯನ್ನು ಹೂಡುವುದು, ಇವೇ ಇದಕ್ಕೆ ಮಾರ್ಗಗಳೆಂದೂ ವ್ಯಕ್ತಪಡಿಸಿದೆನು.

ಅಲ್ಲಿನ ಲೆಫ್ಟಿನೆಂಟ್ ಗವರ್ನರರಾದ ಸರ್ ಎಡ್ವರ್ಡ್ ಗೆಯ್ಟ್‌ರು ನನಗೆ ಹೇಳಿಕಳುಹಿಸಿ ವಿಚಾರಣೆಯನ್ನು ಹೂಡಲು ತಮ್ಮ ಒಪ್ಪಿಗೆಯನ್ನು ತೋರ್ಪಡಿಸಿದುದಲ್ಲದೆ ನನಗೂ ಆ ಸಮಿತಿಯ ಸದಸ್ಯನಾಗಿರಲು ಆಹ್ವಾನವಿತ್ತರು. ನಾನು ಇತರ ಸದಸ್ಯರ ಹೆಸರುಗಳನ್ನು ವಿಚಾರಿಸಿಕೊಂಡು ನನ್ನ ಜೊತೆಗಾರರ ಸಲಹೆಯನ್ನು ತೆಗೆದುಕೊಂಡಮೇಲೆ ಸಮಿತಿಯ ಸದಸ್ಯನಾಗಿರಲು ಒಪ್ಪಿಕೊಂಡೆನು—ಆದರೆ ಈ ಶರತ್ತುಗಳಮೇಲೆ ಸಮಿತಿಯ ವಿಚಾರಣೆಯು ನಡೆಯುತ್ತಿರುವಾಗ ನಾನು ನನ್ನ ಜೊತೆಯವರ ಸಲಹೆಯನ್ನು ತೆಗೆದುಕೊಳ್ಳಲು ಸ್ವತಂತ್ರನಾಗಿರಬೇಕು, ನಾನು ಸಮಿತಿಯ ಸದಸ್ಯನಾದುದರಿಂದ ರೈತರ ಪರವಾಗಿ ವಾದಿಸುವ ಅಧಿಕಾರವನ್ನು ನಾನೇನೂ ಕಳೆದುಕೊಳ್ಳುವುದಿಲ್ಲವೆಂಬುದನ್ನು ಸರಕಾರದವರು ಮನ್ನಿಸಬೇಕು, ಸಮಿತಿಯ ವಿಚಾರಣೆಯ ಫಲಿತಾಂಶವು ನನಗೆ ಸಮರ್ಪಕವಾಗಿರದಿದ್ದರೆ ರೈತರು ಮುಂದೆ ಯಾವ ರೀತಿ ವರ್ತಿಸಬೇಕೆಂದು ಅವರಿಗೆ ಸಲಹೆಕೊಟ್ಟು ದಾರಿ ತೋರಿಸಲು ನನಗೆ ಸ್ವಾತಂತ್ರ್ಯವಿರಬೇಕು.

ಸರ್ ಎಡ್ವರ್ಡ್ ಗೆಯ್ಟ್‌ರು ಈ ಶರತ್ತುಗಳು ನ್ಯಾಯವಾದವೆಂದೂ ಉಚಿತವಾದವೆಂದೂ ಅವುಗಳನ್ನು ಸ್ವೀಕರಿಸಿ ವಿಚಾರಣಾಸಮಿತಿಯು ಏರ್ಪಟ್ಟಿರುವುದನ್ನು ಪ್ರಕಟಿಸಿದರು. ದಿವಂ. ಸರ್ ಫ್ರ್ಯಾಂಕ್ ಸ್ಲೈರವರು ಈ ಸಮಿತಿಯ ಅಧ್ಯಕ್ಷರಾಗಿ ಮಾಡಲ್ಪಟ್ಟರು.

ಸಮಿತಿಯು ರೈತರ ಪಕ್ಷವಾಗಿ ತೀರ್ಮಾನಿಸಿ ಜಮೀನ್ದಾರರು ಸುಲಿಯುತ್ತಿದ್ದ ತೆರಿಗೆಯಲ್ಲಿ ಒಂದು ಭಾಗವನ್ನು ಹಿಂದಕ್ಕೆ ಕೊಟ್ಟುಬಿಡಬೇಕೆಂದೂ (ಈ ಭಾಗವನ್ನು ತೆಗೆದುಕೊಳ್ಳುವುದು ಕಾನೂನಿಗೆ ವಿರುದ್ಧವೆಂದು ಸಮಿತಿಯವರ ಅಭಿಪ್ರಾಯವಾಗಿದ್ದಿತು) ತೀನ್‌ಕಠಿಯಾ ಪದ್ಧತಿಯನ್ನು ಕಾನೂನಿನ ಮೂಲಕ ಬಹಿಷ್ಕರಿಸಬೇಕೆಂದೂ ಸೂಚಿಸಿತು.

ಸಮಿತಿಯವರು ಸರ್ವಸಮ್ಮತಿಯಿಂದ ವರದಿಯನ್ನು ಬರೆಯಲೂ ಸಮಿತಿಯ ಸಲಹೆಗಳಿಗನುಸಾರವಾಗಿ ರಚಿತವಾದ ರೈತರ ಕಾನೂನು

ಅಂಗೀಕೃತವಾಗಲೂ ಸರ್ ಎಡ್ವರ್ಡ್ ಗೆಯ್ಟರು ಬಹು ಮಟ್ಟಿಗೆ ಕಾರಣಕರ್ತರಾದರು. ಅವರು ದೃಢರಾಗಿ ನಿಲ್ಲದೆ ಆ ವಿಷಯದಲ್ಲಿ ತಮ್ಮ ಕೌಶಲ್ಯವನ್ನೆಲ್ಲಾ ಉಪಯೋಗಿಸದೆ ಇದ್ದಿದ್ದರೆ ಏಕಮತದ ವರದಿಯಾಗಲಿ ರೈತರ ಕಾನೂನಿನ ಸ್ವೀಕಾರವಾಗಲಿ ಸಾಧ್ಯವಾಗುತ್ತಿರಲಿಲ್ಲ ಜಮೀನ್ದಾರರಿಗೆ ವಿಶೇಷ ಪ್ರಾಬಲ್ಯವಿದ್ದಿತು ವರದಿಯನ್ನು ಗಣಿಸದೆ ಅವರು ಕಾನೂನಿನ ಅಂಗೀಕಾರಕ್ಕೆ ಪ್ರಚಂಡ ವಿರೋಧವನ್ನೊಡ್ಡಿದರು. ಆದರೆ ಸರ್ ಎಡ್ವರ್ಡ್ ಗೆಯ್ಟರು ಕಟ್ಟ ಕಡೆಯವರೆಗೂ ದೃಢರಾಗಿ ನಿಂತು ಸಮಿತಿಯ ಸಲಹೆಗಳನ್ನು ಸಂಪೂರ್ಣವಾಗಿ ಕಾರ್ಯರೂಪಕ್ಕೆ ತಂದರು.

ಸುಮಾರು ಒಂದು ಶತಮಾನ ಪರ್ಯಂತ ಬಳಕೆಯಲ್ಲಿದ್ದ ತೀನ್‌ಕರಿಯಾ ಪದ್ಧತಿಯು ಈ ರೀತಿಯಾಗಿ ಬಹಿಷ್ಕೃತವಾಯಿತು ಅದರ ಜೊತೆಗೆ ಜಮೀನ್ದಾರರ ಆಳಿಕೆಯೂ ಕೊನೆಗಂಡಿತು ಅಂದಿನವರೆಗೂ ತುಳಿತಕ್ಕೆ ಸಿಕ್ಕಿದ್ದ ರೈತರು ಸ್ವಲ್ಪಮಟ್ಟಿಗೆ ತಲೆಯೆತ್ತಿಕೊಂಡರು. ನೀಲಿಯ ಕರೆಯನ್ನು ಎಂದಿಗೂ ತೊಡೆದುಹಾಕಲಾಗುವುದಿಲ್ಲವೆಂಬ ಮೂಢ ನಂಬಿಕೆಯು ಮಾಯವಾಯಿತು.

ವ್ಯವಸ್ಥಾಕಾರ್ಯವನ್ನು ಇನ್ನೂ ಕೆಲವು ವರ್ಷ ನಡೆಸಿ ಇನ್ನಷ್ಟು ಶಾಲೆಗಳನ್ನು ಏರ್ಪಡಿಸಿ ಗ್ರಾಮಜೀವನವನ್ನು ಇನ್ನೂ ಸೂಕ್ಷ್ಮವಾಗಿ ಪ್ರವೇಶಿಸಬೇಕೆಂಬ ಆಸೆಯು ನನಗಿದ್ದಿತು. ಇದಕ್ಕೆ ಎಲ್ಲವೂ ಸಿದ್ಧವಾಗಿದ್ದಿತು. ಆದರೆ ಇದಕ್ಕೆ ಮುಂಚೆ ಎಷ್ಟೋಬಾರಿ ನಡೆದಂತೆ ಈ ಸಲವೂ ನನ್ನ ಉದ್ದೇಶವನ್ನು ಪೂರಯಿಸುವುದು ದೇವರ ಚಿತ್ತಕ್ಕೆ ಬರಲಿಲ್ಲ. ದೈವನಿಯಮವು ಬೇರೆ ರೀತಿಯಿದ್ದಿತು. ಅದು ನಾನು ಇನ್ನೊಂದೆಡೆ ಕಾರ್ಯವನ್ನು ಕೈಗೊಳ್ಳುವಂತೆ ಮಾಡಿತು.



೨೦

# ಕೂಲಿಕಾರರೊಡನೆ ಸಂಬಂಧ

ನಾನು ಚಂಪಾರಣ್ಯದ ಸಮಿತಿಯಲ್ಲಿ ನನ್ನ ಕೆಲಸವನ್ನು ಮುಗಿಸು ತ್ತಿರುವಷ್ಟರಲ್ಲಿಯೇ ನನಗೆ ಶ್ರೀ ಮೋಹನಲಾಲ ಪಂಡ್ಯರಿಂದಲೂ ಶ್ರೀ. ಶಂಕರಲಾಲ ಪರೀಖರಿಂದಲೂ ಖೇಡಾ ಜಿಲ್ಲೆಯಲ್ಲಿ ಕ್ಷಾಮವೊದಗಿ ಪೈರು ಬೆಳೆಯದೆ ರೈತರು ಕಂದಾಯವನ್ನು ಕೊಡಲಶಕ್ತರಾಗಿರುವರೆಂದೂ ಅವರಿಗೆ ನಾನು ದಾರಿ ತೋರಿಸಬೇಕೆಂದೂ ಪತ್ರ ಬಂದಿತು. ಆ ಸ್ಥಳಕ್ಕೆ ಹೋಗಿ ವಿಚಾರಿಸದೆ ಅವರಿಗೆ ಸಲಹೆ ಕೊಡಲು ನನಗೆ ಇಷ್ಟವಾಗಲಿ ಧೈರ್ಯವಾಗಲಿ ಇರಲಿಲ್ಲ

ಆ ಸಮಯದಲ್ಲಿಯೇ ಶ್ರೀಮತೀ ಅನಸೂಯಾ ಬಾಯಿಯವರಿಂದ ಅಹಮದಾಬಾದಿನಲ್ಲಿ ಕೂಲಿಗಾರರ ಪರಿಸ್ಥಿತಿಯನ್ನು ಕುರಿತ ಕಾಗದ ವೊಂದು ಬಂದಿತು ಕೂಲಿಯು ಕಡಮೆಯಾಗಿದ್ದಿತು. ಅದನ್ನು ಏರಿಸಲು ಕೂಲಿಗಾರರು ಬಹುಕಾಲದಿಂದ ಚಳವಳಿ ನಡೆಸುತ್ತಿದ್ದರು. ನನಗೆ ಸಾಧ್ಯವಿದ್ದರೆ ಅವರ ಮಾರ್ಗದರ್ಶಿಯಾಗಲು ಇಷ್ಟವಿದ್ದಿತು. ಆದರೆ ಈ ಸಣ್ಣ ವಿಷಯವನ್ನು ಕೂಡ ಅಷ್ಟು ದೂರದಿಂದ ನಿರ್ವಹಿಸುವ ಧರವ ಸೆಯು ನನಗಿರಲಿಲ್ಲ. ಆದುದರಿಂದ ಅಹಮದಾಬಾದಿಗೆ ತೆರಳಲು ಒದ ಗಿದ ಮೊಟ್ಟಮೊದಲನೆಯ ಅವಕಾಶವನ್ನು ನಾನು ಉಪಯೋಗಿಸಿಕೊಂ ಡೆನು ಇವೆರಡು ಕಾರ್ಯಗಳನ್ನೂ ಶೀಘ್ರವಾಗಿಯೇ ಮುಗಿಸಿ ಚಂಪಾ ರಣ್ಯದಲ್ಲಿ ಆರಂಭವಾಗಿದ್ದ ರಚನಾತ್ಮಕ ಕಾರ್ಯದ ಮೇಲ್ವಿಚಾರಣೆಯನ್ನು ನೋಡಿಕೊಳ್ಳಲು ಅಲ್ಲಿಗೆ ಹಿಂತಿರುಗಿ ಹೋಗಬೇಕೆಂದು ನಾನು ಆಸಿ ಸಿದ್ದೆನು.

ಆದರೆ ನಾನು ಬಯಸಿದಷ್ಟು ತೀವ್ರವಾಗಿ ಕಾರ್ಯೋದ್ಯಮವು ಸಾಗಲಿಲ್ಲ. ಚಂಪಾರಣ್ಯಕ್ಕೆ ಹಿಂತಿರುಗಲು ನನಗೆ ಸಾಧ್ಯವಾಗಲಿಲ್ಲ.

ಇದರ ಫಲವಾಗಿ ಶಾಲೆಗಳು ಒಂದೊಂದಾಗಿ ನಿಂತುಹೋದುವು. ನನ್ನ ಜೊತೆಯವರೂ ನಾನೂ ಎಷ್ಟೋ ಮುಗಿಲುಮಾಡಗಳನ್ನು ಕಟ್ಟಿದ್ದೆವು. ಆದರೆ ಅವೆಲ್ಲಾ ತಾತ್ಕಾಲಿಕವಾಗಿ ಮಾಯವಾದುವು.

ಚಂಪಾರಣ್ಯದಲ್ಲಿ ಗ್ರಾಮನೈರ್ಮಲ್ಯ ಮತ್ತು ಶಿಕ್ಷಣದ ಜೊತೆಗೆ ಗೋರಕ್ಷಣೆಯೂ ಇವುಗಳಲ್ಲಿ ಒಂದಾಗಿದ್ದಿತು. ಗೋರಕ್ಷಣೆಯೂ ಹಿಂದೀಪ್ರಚಾರವೂ ಕೇವಲ ಮಾರ್ವಾಡಿಗಳ ಕಾರ್ಯವಾಗಿ ಹೋಗಿಬಿಟ್ಟಿದ್ದಿತೆಂಬುದು ನನ್ನ ಪಯಣಗಳಲ್ಲಿ ನನ್ನ ಗೋಚರಕ್ಕೆ ಬಂದಿದ್ದಿತು ಬೇತಿಯಾದಲ್ಲಿ ಮಾರ್ವಾಡೀ ಮಿತ್ರರೊಬ್ಬರು ನನಗೆ ತಮ್ಮ ಧರ್ಮಶಾಲೆಯಲ್ಲಿ ಆಶ್ರಯ ಕೊಟ್ಟಿದ್ದರು. ಅಲ್ಲಿನ ಇತರ ಮಾರ್ವಾಡಿಗಳು ತಮ್ಮ ಗೋಶಾಲೆಯ ವಿಷಯವಾಗಿ ನನ್ನಲ್ಲಿ ಆಸಕ್ತಿಯನ್ನು ಹುಟ್ಟಿಸಿದ್ದರು ಗೋರಕ್ಷಣೆಯನ್ನು ಕುರಿತು ನನ್ನ ಅಭಿಪ್ರಾಯಗಳು ಈ ಹೊತ್ತಿಗೆ ಸ್ಫುಟವಾಗಿ ರೂಪವೆತ್ತಿದ್ದುವು. ಆ ವಿಷಯದಲ್ಲಿ ನನ್ನ ಅಂದಿನ ಕಲ್ಪನೆಯು ಇಂದಿರುವಂತೆಯೇ ಇದ್ದಿತು. ನನ್ನ ಅಭಿಪ್ರಾಯದಲ್ಲಿ ಗೋರಕ್ಷಣಾಕ್ರಮದಲ್ಲಿ ಗೋವಂಶವೃದ್ಧಿ, ಗೋಜಾತಿ ಸುಧಾರಣೆ, ಎತ್ತುಗಳನ್ನು ಕನಿಕರದಿಂದ ಕಾಣುವುದು, ಆದರ್ಶದುಗ್ಧಾಲಯಗಳನ್ನು ಏರ್ಪಡಿಸುವುದು ಮುಂತಾದುವೆಲ್ಲಾ ಅಡಕವಾಗಿದ್ದುವು. ಈ ಕೆಲಸದಲ್ಲಿ ಮಾರ್ವಾಡಿ ಮಿತ್ರರು ಪೂರ್ಣವಾಗಿ ಸಹಕರಿಸುವುದಾಗಿ ಮಾತುಕೊಟ್ಟಿದ್ದರು. ಆದರೆ ನಾನು ಚಂಪಾರಣ್ಯದಲ್ಲಿ ನಿಲ್ಲಲಾಗದಿದ್ದುದರಿಂದ ಈ ಕಾರ್ಯಕ್ರಮವು ಫಲಿಸಲಿಲ್ಲ.

ಬೇತಿಯಾದಲ್ಲಿ ಗೋಶಾಲೆಯು ಇಂದೂ ನಡೆಯುತ್ತಿದೆ. ಆದರೆ ಆದು ಆದರ್ಶ ದುಗ್ಧಾಲಯವಾಗಿ ಪರಿಣಮಿಸಲಿಲ್ಲ. ಚಂಪಾರಣ್ಯದ ಎತ್ತುಗಳಿಂದ ಅವುಗಳ ಶಕ್ತಿಮೀರಿ ಇನ್ನೂ ಕೆಲಸವನ್ನು ತೆಗೆಯುತ್ತಿದ್ದಾರೆ. ಹಿಂದುಗಳೆನಿಸಿಕೊಳ್ಳುವವರು ಇಂದು ಕೂಡ ಆ ಬಡ ಪ್ರಾಣಿಯನ್ನು ನಿರ್ದಯೆಯಿಂದ ಹೊಡೆದು ತಮ್ಮ ಧರ್ಮಕ್ಕೆ ಕಳಂಕ ತರುತ್ತಿದ್ದಾರೆ.

ಈ ಕಾರ್ಯವು ಸಲಿಸದಿರುವುದು ನನಗೆ ನಿರಂತರವಿಷಾದಕ್ಕೆ ಕಾರಣವಾಗಿದೆ. ನಾನು ಚಂಪಾರಣ್ಯಕ್ಕೆ ಹೋದಾಗಲೆಲ್ಲಾ ಮಾರ್ವಾಡೀ

ಮತ್ತು ವಿಹಾರೀ ಮಿತ್ರರ ಮೃದು ನಿಂದೆಯನ್ನು ಕೇಳಿ ನಾನು ಅಷ್ಟು ಹಠಾತ್ತಾಗಿ ಬಿಟ್ಟುಬಿಡಬೇಕಾಗಿ ಬಂದ ಉದ್ದಿಷ್ಟಕಾರ್ಯಗಳನ್ನು ನೆನೆಸಿಕೊಂಡು ನಿಟ್ಟುಸಿರುಬಿಡುತ್ತೇನೆ.

ಶಿಕ್ಷಣ ಕಾರ್ಯವು ಒಂದಲ್ಲದಿದ್ದರೊಂದು ಮಾರ್ಗದಲ್ಲಿ ಅನೇಕ ಸ್ಥಳಗಳಲ್ಲಿ ನಡೆಯುತ್ತಿದೆ. ಆದರೆ ಗೋರಕ್ಷಣಕಾರ್ಯವು ಇನ್ನೂ ಧೃಢವಾಗಿ ಬೇರೂರಿರಲಿಲ್ಲವಾದುದರಿಂದ ಅದು ನಾವು ಉದ್ದೇಶಿಸಿದ ರೀತಿಯಲ್ಲಿ ಮುಂದುವರಿದಿಲ್ಲ

ಖೇಡಾ ರೈತರ ಪ್ರಶ್ನೆಯನ್ನು ಇನ್ನೂ ಚರ್ಚಿಸುತ್ತಿರುವಾಗಲೇ ನಾನು ಅಹಮದಾಬಾದಿನಲ್ಲಿ ಗಿರಣಿಯ ಕೂಲಿಗಾರರ ಪ್ರಶ್ನೆಯಲ್ಲಿ ಪ್ರವೇಶಿಸಿದ್ದೆನು.

ನನ್ನ ಪರಿಸ್ಥಿತಿಯು ಅತ್ಯಂತ ಸೂಕ್ಷ್ಮವಾಗಿದ್ದಿತು. ಕೂಲಿಗಾರರ ವ್ಯಾಜ್ಯವು ಸಾಧಾರಣವಾಗಿದ್ದಿತು ಏಕೆಂದರೆ ಗಿರಣಿಗಳ ಮಾಲಿಕರ ಪಕ್ಷದಲ್ಲಿ ಅವರೇ ಮುಖಂಡರಾಗಿ ನಿಂತಿದ್ದರು ಅವರುಗಳೊಡನೆ ನನಗೆ ಮೈತ್ರಿಯಿದ್ದುದರಿಂದ ಅವರೊಡನೆ ಹೋರಾಡುವುದು ಇನ್ನೂ ಕಷ್ಟವಾಗಿ ಪರಿಣಮಿಸಿತು ನಾನು ಅವರೊಡನೆ ಕಲೆತು ಮಾತನಾಡಿ ವ್ಯಾಜ್ಯವನ್ನು ಪಂಚಾಯತರ ತೀರ್ಮಾನಕ್ಕೆ ಒಪ್ಪಿಸಬೇಕೆಂದು ಅವರನ್ನು ಬೇಡಿದೆನು. ಆದರೆ ಅವರು ಪಂಚಾಯತಿಯ ತತ್ವವನ್ನೇ ಒಪ್ಪಲಿಲ್ಲ

ಆದುದರಿಂದ ನಾನು ಕೂಲಿಗಾರರಿಗೆ ಮುಷ್ಕರ ಹಿಡಿಯಿರೆಂದು ಸಲಹೆ ಕೊಡಬೇಕಾಯಿತು. ಹಾಗೆ ಮಾಡುವುದಕ್ಕೆ ಮುಂಚೆ ನಾನು ಅವರ ಮತ್ತು ಅವರ ನಾಯಕರ ಗಾಢಪರಿಚಯವನ್ನು ಪಡೆದು ಮುಷ್ಕರವು ಸಫಲವಾಗಬೇಕಾದರೆ ಆವಶ್ಯಕವಾದ ವಿಷಯಗಳನ್ನು ಅವರಿಗೆ ವಿವರಿಸಿದೆನು

೧. ಅಹಿಂಸೆಯನ್ನು ಎಂದಿಗೂ ಭಂಗಪಡಿಸಕೂಡದು.

೨ ಮುಷ್ಕರಕ್ಕೆ ವಿರೋಧವಾಗಿ ಕೆಲಸಕ್ಕೆ ಹೋದವರನ್ನು ಎಂದಿಗೂ ಹಿಂಸಿಸಕೂಡದು.

೩. ಭಿಕ್ಷಾನ್ನವನ್ನು ಎಂದಿಗೂ ತಿನ್ನ ಕೂಡದು.

೪ ಮುಷ್ಕರವು ಎಷ್ಟುಕಾಲ ಹಿಡಿದರೂ ಕಡಲದೆ ನಿಂತು ಇತರ ದೇಹಶ್ರಮದಿಂದ ಮುಷ್ಕರದ ಕಾಲದಲ್ಲಿ ನ್ಯಾಯವಾಗಿ ಹಿಟ್ಟನ್ನು ಸಂಪಾದಿಸಬೇಕು.

ಮುಷ್ಕರದ ಮುಖಂಡರು ಈ ಶರತ್ತುಗಳನ್ನೆಲ್ಲಾ ಅರ್ಥಮಾಡಿಕೊಂಡು ಅವುಗಳಿಗೆ ಒಪ್ಪಿದರು. ಕೂಲಿಗಾರರು ಸಭೆಗೂಡಿ ಗಿರಣಿಗಳ ಮಾಲಿಕರು ಕೂಲಿಗಾರರ ಶರತ್ತುಗಳಿಗೆ ಒಪ್ಪುವವರೆಗೂ ಅಥವಾ ಜಗಳವನ್ನು ಪಂಚಾಯುತರ ತೀರ್ಪಿಗೆ ಬಿಡುವುದಕ್ಕೆ ಸಮ್ಮತಿಸುವವರೆಗೂ ತಾವು ಕೆಲಸಕ್ಕೆ ಹಿಂತಿರುಗುವುದಿಲ್ಲವೆಂದು ಪ್ರಮಾಣಮಾಡಿದರು

ಈ ಮುಷ್ಕರದ ಕಾಲದಲ್ಲಿಯೇ ನನಗ ಶ್ರೀ ವಲ್ಲಭಭಾಯಿ ಪಟೇಲರ ಮತ್ತು ಶ್ರೀ ಶಂಕರಲಾಲ ಬ್ಯಾಂಕರರ ನಿಕಟಪರಿಚಯುವುಂಟಾದುದು ಶ್ರೀ ಅನಸೂಯಾ ಬಾಯಿಯವರು ಇದಕ್ಕೆ ಮುಂಚೆಯೇ ನನಗ ಚೆನ್ನಾಗಿ ಗೊತ್ತಿದ್ದರು.

ಸಾಬರ್ಮತೀ ನದಿಯ ದಡದಲ್ಲಿ ಮರದ ನೆ ಳ ಲಿ ನ ಲ್ಲಿ ನಾವು ದಿನವೂ ಮುಷ್ಕರಗಾರರ ಸಭೆಯನ್ನು ನಡಸುತ್ತಿದ್ದೆವು ಅವರು ಈ ಸಭೆಯಲ್ಲಿ ಸಾವಿರಗಟ್ಟಲೆಯಾಗಿ ಕೂಡುತ್ತಿದ್ದರು. ಅವರು ಮಾಡಿರುವ ಪ್ರಮಾಣವನ್ನೂ ಶಾಂತಿಯನ್ನೂ ಆತ್ಮಗೌರವವನ್ನೂ ಭಂಗಗೊಳಿಸದಿರಲು ಅವರ ಕರ್ತವ್ಯವನ್ನು ನಾನು ನನ್ನ ಭಾಷಣಗಳಲ್ಲಿ ಅವರ ನೆನಪಿಗೆ ತರುತ್ತಿದ್ದೆನು ಅವರು ದಿನವೂ 'ಏಕ್ ಟೇಕ್' (ಒಂದೇ ಮಾತು–ಮಾತಿಗೆ ತಪ್ಪಬೇಡಿ) ಎಂದು ಬರೆದಿದ್ದ ಧ್ವಜವನ್ನು ಹಿಡಿದುಕೊಂಡು ಆ ನಗರದ ಬೀದಿಗಳಲ್ಲಿ ಶಾಂತಿಯುತವಾಗಿ ಮೆರೆವಣಿಗೆ ಹೊರಡುತ್ತಿದ್ದರು.

ಮುಷ್ಕರವು ಇಪ್ಪತ್ತೊಂದು ದಿವಸ ನಡೆಯಿತು ಈ ಕಾಲದಲ್ಲಿ ನಾನು ಗಿರಣಿಗಳ ಮಾಲಿಕರನ್ನು ಆಗಾಗ ಕಂಡು ಕೂಲಿಗಾರರಿಗೆ ನ್ಯಾಯ ತೋರಿಸಬೇಕೆಂದು ಬೇಡಿಕೊಂಡೆನು. ಅದಕ್ಕೆ ಅವರು 'ನಾವೂ ಪ್ರಮಾಣಮಾಡಿಲ್ಲವೇನು? ನಮ್ಮೊಡನೆ ಕೂಲಿಗಾರರ ಸಂಬಂಧವು ತಂದೆ ಮಕ್ಕಳ ಸಂಬಂಧ ಮೂರನೆಯವರು ಅಡ್ಡಬರುವುದನ್ನು ನಾವು ಸಹಿಸುವುದೆಂತು? ಪಂಚಾಯುತಿಗೆ ಅವಕಾಶವಲ್ಲಿ!' ಎಂದು ಉತ್ತರಕೊಡುತ್ತಿದ್ದರು.

---

೨೧

# ಆಶ್ರಮ

ಕೂಲಿಗಾರರಿಗೂ ಗಿರಣಿಗಳ ಮಾಲೀಕರಿಗೂ ಮಧ್ಯೆ ನಡೆದ ವಿವಾದದ ಕತೆಯನ್ನು ವಿವರಿಸುವುದಕ್ಕಿಂತ ಮುಂಚೆ ಆಶ್ರಮದ ಕಡೆ ದೃಷ್ಟಿಯನ್ನೊಮ್ಮೆ ಬೀರುವುದು ಅವಶ್ಯಕ. ನಾನು ಚಂಪಾರಣ್ಯದಲ್ಲಿದ್ದ ಕಾಲವೆಲ್ಲಾ ಆಶ್ರಮವು ನನ್ನ ಮನಸ್ಸಿನಿಂದ ದೂರವಾಗಲೇ ಇಲ್ಲ. ಒಂದೊಂದು ವೇಳೆ ವಿರಾಮಮಾಡಿಕೊಂಡು ಓಡಿಹೋಗಿ ಬರುತ್ತಿದ್ದೆನು.

ಆ ಕಾಲದಲ್ಲಿ ಆಶ್ರಮವು ಅಹಮದಾಬಾದಿನ ಬಳಿ ಇರುವ ಕೋಚರಬ್ ಎಂಬ ಸಣ್ಣ ಹಳ್ಳಿಯಲ್ಲಿದ್ದಿತು ಆ ಹಳ್ಳಿಯಲ್ಲಿ ಗಂಟುಬೇನೆಯು ಪ್ರಾರಂಭವಾಯಿತು ಇದರಿಂದ ಆಶ್ರಮದಲ್ಲಿನ ಮಕ್ಕಳಿಗೆ ಅಪಾಯವುಂಟೆಂದು ನನಗೆ ಸ್ಪಷ್ಟವಾಗಿ ಗೋಚರವಾಯಿತು. ನಾನು ಆಶ್ರಮದ ಒಳಗೆ ನೈರ್ಮಲ್ಯದ ನಿಯಮಗಳನ್ನು ಎಷ್ಟು ಕಟ್ಟುನಿಟ್ಟಾಗಿ ಆಚರಿಸಿದರೂ ಸುತ್ತಮುತ್ತಲಿನ ಅಶುಚಿಯ ಪರಿಣಾಮದಿಂದ ಸಂಪೂರ್ಣವಾಗಿ ತಪ್ಪಿಸಿಕೊಳ್ಳುವುದು ನಮಗೆ ಅಸಾಧ್ಯವಾಗಿದ್ದಿತು. ಕೋಚರಬಿನ ಜನರು ಈ ನಿಯಮಗಳನ್ನು ಪಾಲಿಸುವಂತೆ ಮಾಡುವುದಕ್ಕಾಗಲಿ ಆ ಗ್ರಾಮಕ್ಕೆ ಬೇರೆ ರೀತಿಯಲ್ಲಿ ಸೇವೆಗೈಯಲಾಗಲಿ ನಮಗೆ ಆಗ ಸಾಮರ್ಥ್ಯವಿರಲಿಲ್ಲ.

ನಮ್ಮ ಆಶ್ರಮವು ಪಟ್ಟಣದಿಂದಲೂ ಹಳ್ಳಿಯಿಂದಲೂ ಸಾಕಾದಷ್ಟು ದೂರವಿದ್ದು ಆದರೂ ಅವುಗಳಿಂದ ಅತಿ ದೂರದಲ್ಲಿರದೆ ಇರಬೇಕೆಂಬುದೇ ನಮ್ಮ ಧ್ಯೇಯವಾಗಿದ್ದಿತು. ಮತ್ತು ಎಂದಾದರೊಂದುದಿನ ನಮ್ಮ ಸ್ವಂತ ಭೂಮಿಯಮೇಲೆ ನಾವು ನೆಲೆಸಲೇಬೇಕೆಂದು ಸಂಕಲ್ಪಿಸಿದ್ದೆವು.

ಕೋಚರಬನ್ನು ಬಿಟ್ಟು ಹೊರಡುವುದಕ್ಕೆ ಗಂಟುಬೇನೆಯೇ ಸಾಕಾದಷ್ಟು ಎಚ್ಚರಿಕೆಯೆಂದು ನನಗೆ ತೋರಿತು- ಅಹಮದಾಬಾದಿ

ನಲ್ಲಿ ಶ್ರೀ. ಪುಂಜಾಭಾಯಿ ಹೀರಾಚಂದರೆಂಬ ವರ್ತಕರಿದ್ದರು. ಅವ ರಿಗೂ ಆಶ್ರಮಕ್ಕೂ ಗಾಢಸಂಪರ್ಕವುಂಟಾಗಿ ಅವರು ಅನೇಕ ವಿಷಯ ಗಳಲ್ಲಿ ಆಶ್ರಮಕ್ಕೆ ನಿರ್ಮಲನಿರಭಿಮಾನಭಾವದಿಂದ ನೆರವೀಯುತ್ತಿದ್ದರು. ಅಹಮದಾಬಾದಿಗೆ ಸಂಬಂಧಪಟ್ಟ ವ್ಯವಹಾರಗಳಲ್ಲಿ ಅವರು ವಿಶೇಷ ಅನುಭವವುಳ್ಳವರಾಗಿದ್ದರು ಅವರು ನಮಗೆ ಅನುಕೂಲವಾದ ಜಾಗ ವನ್ನು ಒದಗಿಸಿಕೊಡುವೆನೆಂದು ತಾವೇ ಮುಂದೆ ಬಂದರು. ನಾನು ಸ್ಥಳವನ್ನರಸುತ್ತಾ ಅವರೊಡನೆ ಕೋಚರಬಿನ ಉತ್ತರಕ್ಕೂ ದಕ್ಷಿಣಕ್ಕೂ ಅಲೆದಾಡಿ ಆಮೇಲೆ ಮೂರು ನಾಲ್ಕು ಮೈಲಿ ಬಡಗಲಿನಲ್ಲಿರುವ ಜಾಗ ವೊಂದನ್ನು ಹುಡುಕಲು ಅವರಿಗೆ ಹೇಳಿದೆನು ಅವರು ಈಗ ಆಶ್ರಮ ವಿರುವ ತಾವನ್ನು ನಿಶ್ಚಯಿಸಿದರು ಅದು ಸಾಬರ್ಮತಿ ಕಾರಾಗೃಹದಹ ತ್ತಿರವಿದ್ದುದು ನನಗೊಂದು ವಿಶೇಷಗುಣವಾಗಿಕಂಡಿತು ಕಾರಾಗೃಹಕ್ಕೆ ಹೋಗುವುದು ಸತ್ಯಾಗ್ರಹಿಗಳ ಸಾಧಾರಣ ಬಾಳೆಂಬ ಎಣಿಕೆಯಿದ್ದುದ ರಿಂದ ನನಗೆ ಈ ಸ್ಥಾನವು ರುಚಿಸಿತು. ಮತ್ತು ಸಾಮಾನ್ಯವಾಗಿ ಬಂದೀ ಖಾನೆಗಳಿಗಾಗಿ ಆರಿಸಿದ ಜಾಗದ ಸುತ್ತುಮುತ್ತಲೂ ಸ್ವಚ್ಛತೆಯಿರುವು ದೆಂಬುದು ನನಗೆ ಗೊತ್ತಿದ್ದಿತು ಸುಮಾರು ಎಳೆಂಟು ದಿವಸದಲ್ಲಿ ಕ್ರಯ ಪತ್ರವನ್ನು ಬರೆಸಿದುದಾಯಿತು. ಆ ಭೂಮಿಯಮೇಲೆ ಕಟ್ಟಡವಾಗಲಿ ಗಿಡವಾಗಲಿ ಇರಲಿಲ್ಲ ಆದರೆ ಅದು ನದಿಯ ತೀರದಲ್ಲಿ ಏಕಾಂತಸ್ಥಾನ ದಲ್ಲಿದ್ದುದು ದೊಡ್ಡ ಅನುಕೂಲವಾಗಿದ್ದಿತು

ಸರಿಯಾಗಿ ಮನೆಗಳನ್ನು ಕಟ್ಟುವುದಕ್ಕಿಂತ ಮುಂಚೆ ನಾವು ಢೇರೆ ಗಳಲ್ಲಿ ವಾಸಿಸಬೇಕೆಂದೂ ತಗಡಿನ ಗುಡಿಸಲನ್ನು ಕಟ್ಟಿ ಅದರಲ್ಲಿ ಅಡಿಗೆ ಮಾಡಬೇಕೆಂದೂ ನಿಶ್ಚಯಿಸಿದೆವು.

ಆಶ್ರಮವು ನಿಧಾನವಾಗಿ ಬೆಳೆಯುತ್ತಿದ್ದಿತು. ಗಂಡಸರೂ ಹೆಂಗ ಸರೂ ಮಕ್ಕಳೂ ಎಲ್ಲಾ ಸೇರಿ ನಾವು ನಾಲ್ವತ್ತು ಜನರೂ ಒಂದೇ ಅಡಿ ಗೆಮನೆಯಲ್ಲಿ ಊಟಮಾಡುತ್ತಿದ್ದೆವು ಈ ಸ್ಥಳಕ್ಕೆ ಹೋಗಿ ನೆಲೆಸುವ ಕಲ್ಪನೆಯೆಲ್ಲಾ ನನ್ನದಾಗಿದ್ದಿತು ಅದನ್ನು ಕಾರ್ಯರೂಪಕ್ಕೆ ತರುವುದು ಎಂದಿನಂತೆ ಮಗನಲಾಲರ ಮೇಲೆ ಬಿದ್ದಿತು.

ವಾಸಿಸುವುದಕ್ಕೆ ಸ್ಥಿರವಾದ ಮನೆಗಳು ಸಿದ್ಧವಾಗುವುದಕ್ಕೆ ಮುಂಚೆ ನಾವು ಬಹು ಕಷ್ಟಪಟ್ಟೆವು. ಮಳೆಗಾಲವು ಸಮೀಪಿಸಿದ್ದಿತು. ಸಾಮಾನುಗಳನ್ನು ನಾಲ್ಕು ಮೈಲಿ ದೂರವಿರುವ ನಗರದಿಂದ ತರಬೇಕಾಗಿದ್ದಿತು. ಅದುವರೆಗೂ ಬಂಜರಾಗಿದ್ದ ಆ ನೆಲದಲ್ಲಿ ಹಾವುಗಳಿದ್ದವು. ಇಂತಹ ಸ್ಥಿತಿಯಲ್ಲಿ ಸಣ್ಣ ಹುಡುಗರೊಡನೆ ವಾಸಿಸುವುದರ ಅಪಾಯವು ಅಷ್ಟಿಷ್ಟೆನ್ನುವ ಹಾಗಿರಲಿಲ್ಲ. ಹಾವುಗಳನ್ನು ಕೊಲ್ಲದಿರುವುದೇ ಸಾಮಾನ್ಯ ನಿಯಮವಾಗಿದ್ದಿತು ಆದರೆ ಈ ವಿಷಜಂತುಗಳ ದಿಗಲನ್ನು ನಾವಾರೂ ಕಳೆದುಕೊಂಡಿರಲಿಲ್ಲವೆಂದು ಒಪ್ಪಿಕೊಳ್ಳಬೇಕು—ಇಂದು ಕೂಡ ಅದು ತೊಲಗಿಲ್ಲ

ವಿಷಜಂತುಗಳನ್ನು ಕೊಲ್ಲದಿರುವ ನಿಯಮವು ಫೀನಿಕ್ಸ್‌ನಲ್ಲಿಯೂ ಟಾಲ್‌ಸ್ಟಾಯ್ ಫಾರ್ಮ್‌ನಲ್ಲಿಯೂ ಸಾಬರ್ಮತಿಯಲ್ಲಿಯೂ ಬಹುಮಟ್ಟಿಗೆ ಆಚರಿಸಲ್ಪಟ್ಟಿದೆ ಈ ಪ್ರತಿಯೊಂದು ಸ್ಥಳದಲ್ಲಿಯೂ ನಾನು ಬಂಜರುಭೂಮಿಯಲ್ಲಿ ನೆಲೆಸಬೇಕಾಯಿತು. ಆದರೆ ಹಾವಿನ ಕಡಿತದಿಂದ ನಮಗೆ ಪ್ರಾಣಹಾನಿಯೊದಗಲಿಲ್ಲ. ಈ ಸಂದರ್ಭವನ್ನು ನೋಡಿದರೆ ನನ್ನ ಶ್ರದ್ಧಾಪೂರಿತ ದೃಷ್ಟಿಗೆ ಕರುಣಾಮಯನಾದ ಈಶ್ವರನ ಅಮೃತಹಸ್ತವು ಕಾಣುತ್ತದೆ. "ದೇವರು ಪಕ್ಷಪಾತಿಯಲ್ಲ ಮನುಷ್ಯರ ದಿನಂಪ್ರತಿಯ ಕಾರ್ಯದೊಳಗೆ ಕೈಹಾಕಲು ಅವನಿಗೆ ಸಮಯವಿಲ್ಲ.'' ಎಂದು ಹೇಳಿ ಯಾರೂ ನನ್ನ ನಂಬುಗೆಯನ್ನು ಕುರಿತು ನಗದಿರಲಿ. ನನ್ನ ಈ ಒಂದೇ ಸಮನಾದ ಅನುಭವವನ್ನು ವರ್ಣಿಸಲು, ಈ ವಿಷಯದ ವಾಸ್ತವ್ಯತೆಯನ್ನು ವ್ಯಕ್ತಗೊಳಿಸಲು, ನನಗೆ ಬೇರೆ ಮಾತು ತೋಚುವುದಿಲ್ಲ. ದೇವರ ದಾರಿಯನ್ನು ವರ್ಣಿಸಲು ಮಾನುಷ ಭಾಷೆಗೆ ಪೂರ್ಣ ಚೈತನ್ಯವಿಲ್ಲ. ಭಗವಂತನ ಕಾರ್ಯಗಳು ಅವರ್ಣನೀಯವೆಂದೂ ಮನುಷ್ಯನ ಬುದ್ಧಿಗೆ ನಿಲುಕದವೆಂದೂ ನನಗೆ ಗೊತ್ತಿದೆ. ಆದರೆ ಪಾಮರ ಮನುಷ್ಯನು ಅವುಗಳನ್ನು ವರ್ಣಿಸಹೊರಡುವುದೇ ಆದರೆ ನನ್ನ ತೊದಲು ಮಾತಲ್ಲದೆ ಅವನಿಗೆ ಬೇರೆ ಮಾರ್ಗವಿಲ್ಲ. ಇಪ್ಪತ್ತೈದು ವರ್ಷಕಾಲ ಪ್ರಾಣಿಗಳನ್ನು ಕೊಲ್ಲದಿರುವ ನಿಯಮವನ್ನು ಹೆಚ್ಚುಕಡಮೆ ತಪ್ಪದೆ ಆಚರಿಸಿದರೂ ಆ ಕಾಲದಲ್ಲಿ ಪ್ರಾಣಾಪಾಯವಾಗದೇ ಇದ್ದುದು ಕೇವಲ ಆಕಸ್ಮಿಕ ಸಂಭವವಲ್ಲ. ಅದು

ಈಶ್ವರನ ಕೃಪೆ, ಎಂದು ನಂಬುವುದನ್ನು ಮೂಢವಿಶ್ವಾಸವೆಂದರೂ ನಾನು ಆ ಮೂಢಭಕ್ತಿಯನ್ನೇ ಬಾಚಿ ತಬ್ಬಿಕೊಳ್ಳುವುದರಲ್ಲಿ ಸಂದೇಹವಿಲ್ಲ

ಅಹಮದಾಬಾದಿನಲ್ಲಿ ಕೂಲಿಗಾರರ ಮುಷ್ಕರವು ನಡೆಯುತ್ತಿದ್ದಾಗ ಆಶ್ರಮದ ನೆಯ್ಗೆಯ ಶಾಲೆಯ ಪಾಯವು ಹಾಕಲ್ಪಡುತ್ತಿದ್ದಿತು ಏಕೆಂದರೆ ಆಗ ಆಶ್ರಮದ ಮುಖ್ಯ ಕಾರ್ಯವು ನೇಯ್ಗೆಯೇ ಆಗಿದ್ದಿತು. ನೂಲಿಗೆಯು ಅದುವರೆಗೂ ಸಮಗ ಸಾಧ್ಯವಾಗಿರಲಿಲ್ಲ

---

೨೨

## ಉಪವಾಸ

ಮೊದಲನೆಯ ಎರಡು ವಾರ ಗಿರಣಿಯ ಕೂಲಿಗಾರರು ಬಹು ಧೈರ್ಯವನ್ನೂ ಆತ್ಮಸಂಯಮವನ್ನೂ ತೋರಿಸಿದರು. ಪ್ರತಿನಿತ್ಯವೂ ದೊಡ್ಡ ಸಭೆಗಳನ್ನು ನಡೆಸುತ್ತಿದ್ದರು. ಈ ಸಂದರ್ಭಗಳಲ್ಲಿ, ನಾನು ಅವರ ನೆನಪಿಗೆ ತಮ್ಮ ಪ್ರತಿಜ್ಞೆಗಳನ್ನು ತರುತ್ತಿದ್ದೆನು. ಇದಕ್ಕೆ ಅವರು ತಾವು ತಮ್ಮ ಪ್ರಾಣವನ್ನು ಕಳೆದುಕೊಂಡೇವೇ ಹೊರತು ತಮ್ಮ ಮಾತಿಗೆ ತಪ್ಪುವುದಿಲ್ಲವೆಂದು ಕೂಗಿ ಹೇಳುತ್ತಿದ್ದರು.

ಆದರ ಕಡೆಗೆ ಅವರು ಸಡಿಲ ಬೀಳುವ ಚಿಹ್ನೆಯನ್ನು ತೋರಿಸಿದರು. ಮನುಷ್ಯರ ನಿರ್ಬಲತೆಯು ಅವರ ಸಿಡುಕಿನಲ್ಲಿ ಕಾಣಿಸಿಕೊಳ್ಳುವಂತೆಯೇ ಮುಷ್ಕರಕ್ಕೆ ವಿರೋಧವಾಗಿ ಕೆಲಸಕ್ಕೆ ಹೋಗುವವರ ಮೇಲೆ ಕೂಲಿಗಾರರ ಕ್ರೋಧವು ಮುಷ್ಕರವು ಸಡಿಲುವಂತೆ ಕಂಡು ಬಂದಹಾಗೆಲ್ಲಾ ಹೆಚ್ಚುತ್ತಾ ಬಂದಿತು. ಅವರು ತುಂಟತನ ಮಾಡುವರೆಂದು ನಾನು ಶಂಕಿಸತೊಡಗಿದೆನು. ಪ್ರತಿದಿನದ ಸಭೆಯಲ್ಲಿ ಜನಸಮೂಹವು ಕಡಮೆಯಾಗುತ್ತಾ ಬಂದಿತು. ಅಲ್ಲಿ ಬರುವವರ ಮುಖದಮೇಲೆ ನಿರಾಸೆಯ ಮುದ್ರೆಯು ಸ್ಪಷ್ಟವಾಗಿ ಕಾಣುತ್ತಿದ್ದಿತು. ಕಟ್ಟಕಡೆಗ ಮುಷ್ಕರ ಹಿಡಿದ ಕೂಲಿಗಾರರು ಕುಸಿದು ಬೀಳತೊಡಗಿರುವರೆಂಬ ಸುದ್ದಿಯು ನನಗೆ ಬಂದಿತು. ನನಗೆ ಅತ್ಯಂತ ಖೇದವುಂಟಾಗಿ ಈ ಸಂದರ್ಭದಲ್ಲಿ ನನ್ನ ಕರ್ತವ್ಯವೇನೆಂಬ ತೀವ್ರ ಮನೋವಿಚಾರದಲ್ಲಿ ಮುಳುಗಿದೆನು. ದಕ್ಷಿಣ ಆಫ್ರಿಕದಲ್ಲಿ ನಡೆದ ಅಗಾಧವಾದ ಮುಷ್ಕರದ ಅನುಭವವು ನನಗಿದ್ದಿತು. ಆದರೆ ಇಲ್ಲಿ ನನ್ನಿದಿರಿಗಿದ್ದ ಪರಿಸ್ಥಿತಿಯು ಬೇರೆಯಾಗಿದ್ದಿತು. ಕೂಲಿಗಾರರು ನನ್ನ ಸಲಹೆಯಂತೆಯೇ ಪ್ರತಿಜ್ಞೆ ಮಾಡಿದ್ದುದು. ಅವರು ಆದನ್ನು ಪ್ರತಿದಿನವೂ ನನ್ನ ಮುಂದೆ ಸಾರಿ ಹೇಳಿದ್ದರು. ಅವರು ಈಗ ಅದಕ್ಕೆ ವಿರೋಧವಾಗಿ ಹೋಗಬಹುದೆಂಬ ಕಲ್ಪನೆಯೂ ನನ್ನ ಮನಸ್ಸಿಗೆ ಹಿಡಿ

ಯುವಂತಿರಲಿಲ್ಲ. ಈ ಮನೋಭಾವಕ್ಕೆ ಆಧಾರವಾಗಿದ್ದುದು ಅಹಂಕಾರವೋ ಅಥವಾ ಕೂಲಿಗಾರರಮೇಲೆ ನನಗಿದ್ದ ಪ್ರೇಮವೋ ನನ್ನ ತೀವ್ರ ಸತ್ಯೋಪಾಸನೆಯೋ ಹೇಳಬಲ್ಲವರಾರು ?

ಒಂದುದಿನ ಬೆಳಿಗ್ಗೆ—ಆಗ ಕೂಲಿಗಾರರ ಸಭೆಯು ನಡೆಯುತ್ತಿದ್ದಿತು—ನಾನಿನ್ನೂ ಕತ್ತಲಲ್ಲಿ ನನ್ನ ಮಾರ್ಗವನ್ನು ಸರಿಯಾಗಿ ಕಾಣದೆ ಹಾದಿಯನ್ನು ಹುಡುಕುತ್ತಿರುವಾಗ ದಿವ್ಯ ಜ್ಯೋತಿಯು ನನ್ನ ನೆರವಿಗೆ ಬಂದಿತು. ಯಾವ ಪ್ರಯತ್ನವೂ ಇಲ್ಲದೆ ತಾವಾಗಿ ಕಾವೇ ಮಾತುಗಳು ನನ್ನ ಬಾಯಲ್ಲಿ ಹೊರಟವು

"ಮುಷ್ಕರ ಹಿಡಿದವರೆಲ್ಲಾ ಚೇತರಿಸಿಕೊಂಡು ಒಟ್ಟುಗೂಡಿ ಯಾವುದಾದರೊಂದು ತೀರ್ಮಾನವಾಗುವವರೆಗೂ ಅಥವಾ ಅವರು ಗಿರಣಿಗಳನ್ನೇ ಬಿಟ್ಟುಬಿಡುವವರೆಗೂ ಮುಷ್ಕರವನ್ನು ನಡೆಸದಿದ್ದರೆ ನಾನು ಆಹಾರವನ್ನು ಮುಟ್ಟುವುದಿಲ್ಲ.'' ಎಂದು ನಾನು ಸಭೆಗೆ ಹೇಳಿದೆನು.

ಕೂಲಿಗಾರರಿಗೆ ಸಿಡಿಲು ಬಡಿದಂತಾಯಿತು. ಶ್ರೀ. ಅನಸೂಯಾ ಬಾಯಿಯ ಕೆನ್ನೆಯಮೇಲೆ ಕಣ್ಣೀರಿನ ಪ್ರವಾಹವು ಹರಿಯತೊಡಗಿತು. ಕೂಲಿಗಾರರು "ನೀವು ಉಪವಾಸವಿರಬೇಡಿ, ನಾವು ಇರುತ್ತೇವೆ. ನೀವು ಉಪವಾಸ ಮಾಡುವುದೆಂದರೇನು ? ನಮ್ಮ ತಪ್ಪನ್ನು ಕ್ಷಮಿಸಿ; ಇನ್ನು ನಾವು ನಮ್ಮ ಪ್ರತಿಜ್ಞೆಯನ್ನು ಕಡೆಯವರೆಗೂ ನಡೆಸುತ್ತೇವೆ.' ಎಂದು ಹೇಳಿದರು.

"ನೀವು ಉಪವಾಸಮಾಡುವ ಅಗತ್ಯವೇನೂ ಇಲ್ಲ. ನಿಮ್ಮ ಮಾತಿಗೆ ನೀವು ತಪ್ಪದೆ ಇದ್ದರೆ ಸಾಕು. ನಮ್ಮಲ್ಲಿ ಹಣವಿಲ್ಲವೆಂಬುದು ನಿಮಗೆ ತಿಳಿದೇ ಇದೆ. ಜನರಲ್ಲಿ ಭಿಕ್ಷವೆತ್ತಿ ಹೊಟ್ಟೆಹೊರೆದುಕೊಂಡು ಮುಷ್ಕರವನ್ನು ನಡೆಸಬೇಕೆಂಬುದು ನನಗೆ ಇಷ್ಟವಿಲ್ಲ. ಆದುದರಿಂದ ಮುಷ್ಕರವು ಎಷ್ಟು ದಿನವೇ ನಡೆಯಲಿ, ನೀವು ನಿರಾಲೋಚನೆಯಿಂದ ಇರಲಾಗುವಂತೆ ಯಾವುದಾದರೊಂದು ಉದ್ಯೋಗದಿಂದ ಜೀವನಕ್ಕೆ ಸಾಕಾಗುವಷ್ಟು ಹಿಟ್ಟನ್ನು ಗಳಿಸಲು ಯತ್ನಿಸಬೇಕು. ನನ್ನ ಉಪವಾ

ಸವು ಮುಷ್ಕರವು ಮುಗಿದಮೇಲೆಯೇ ಕೊನೆಗಾಣುವುದು.'' ಎಂದು ಉತ್ತರ ಕೊಟ್ಟೆನು.

ಈ ಮಧ್ಯೆ ವಲ್ಲಭಭಾಯಿಯು ಮುಷ್ಕರದ ಕೂಲಿಗಾರರಿಗೆ ಪೌರ ಸಭೆಯಲ್ಲಿ ಯಾವುದಾದರೂ ಕೆಲಸವನ್ನು ದೊರಕಿಸಲು ಪ್ರಯತ್ನಪಡುತ್ತಿದ್ದರು. ಆದರೆ ಅಲ್ಲಿ ಈ ಆಸೆಯು ಕೈಗೂಡುವುದಕ್ಕೆ ಹೆಚ್ಚು ಅವಕಾಶವಿರಲಿಲ್ಲ. ಆಶ್ರಮದಲ್ಲಿನ ನೆಯ್ಗೆಯ ಶಾಲೆಯ ತಳಹದಿಗೆ ಮರಳನ್ನು ತುಂಬಿಹಾಕಬೇಕಾಗಿದ್ದುದರಿಂದ ಈ ಕೆಲಸಕ್ಕೆ ಕೆಲವು ಜನರನ್ನು ನೇಮಿಸಬಹುದೆಂದು ಮಗನಲಾಲ ಗಾಂಧಿಯವರು ಸೂಚಿಸಿದರು. ಕೂಲಿಗಾರರು ಈ ಸಲಹೆಯನ್ನು ಆದರದಿಂದ ಸ್ವೀಕರಿಸಿದರು. ಶ್ರೀ. ಅನಸೂಯಾಬಾಯಿಯು ತಲೆಯ ಮೇಲೆ ಬುಕ್ಕಿಯನ್ನು ಹೊತ್ತುಕೊಂಡು ಮುಂದಾಳಾಗಿ ನಿಂತರು. ಶೀಘ್ರದಲ್ಲಿಯೇ ನದಿಯ ತಳದ ತಗ್ಗಿನಿಂದ ತಲೆಯಮೇಲೆ ಮರಳಿನ ಗೂಡೆಗಳನ್ನು ಹೊತ್ತುಕೊಂಡು ಹೊರಟುಬರುವ ಕೂಲಿಗಾರರ ಸಂತತಪ್ರವಾಹವು ಕಾಣಬಂದಿತು. ಇದು ನೋಡತಕ್ಕ ದೃಶ್ಯವಾಗಿದ್ದಿತು. ತಮ್ಮನ್ನು ನವಚೈತನ್ಯವು ಹೊಕ್ಕಿರುವಂತೆ ಕೂಲಿಗಾರರಿಗೆ ತೋರುತ್ತಿದ್ದಿತು. ಅವರಿಗೆ ಕೂಲಿಯನ್ನು ಕೊಡುವ ಕೆಲಸವನ್ನು ನಿರ್ವಹಿಸುವುದು ಕಷ್ಟವಾಗಿ ಪರಿಣಮಿಸಿತು.

ನನ್ನ ಉಪವಾಸದಲ್ಲಿ ಒಂದು ದೊಡ್ಡ ದೋಷವಿದ್ದಿತು. ಏಕೆಂದರೆ ನಾನು ಹಿಂದೆಯೇ ತಿಳಿಸಿರುವಂತೆ ನನಗೂ ಗಿರಣಿಯ ಮಾಲಿಕರಿಗೂ ನಿಕಟವಾದ ಮತ್ತು ಮಧುರವಾದ ಸಂಬಂಧವಿದ್ದಿತು. ನನ್ನ ಉಪವಾಸದಿಂದ ಅವರ ಮನಸ್ಸಿನಮೇಲೆ ಪರಿಣಾಮವಾಗದೆ ಇದ್ದೀತೆ? ನಾನು ಸತ್ಯಾಗ್ರಹಿಯಾಗಿ ಇವರಿಗೆ ವಿರೋಧವಾಗಿ ಉಪವಾಸ ಮಾಡಕೂಡದೆಂದೂ ಕೂಲಿಗಾರರ ಮುಷ್ಕರವೊಂದರ ಪ್ರಭಾವವೇ ಅವರ ಮನಸ್ಸಿನ ಮೇಲೆ ಬೀಳುವಂತೆ ಬಿಡಬೇಕೆಂದೂ ನನಗೆ ಗೊತ್ತಿದ್ದಿತು. ಗಿರಣಿಗಳ ಮಾಲಿಕರು ಮಾಡಿದ ಯಾವ ದೋಷಕ್ಕಾಗಿ ಆಗಲಿ ನಾನು ಈ ಉಪವಾಸವ್ರತವನ್ನು ಕೈಗೊಂಡಿರಲಿಲ್ಲ. ಕೂಲಿಗಾರರ ದೋಷವೇ ಇದಕ್ಕೆ ಕಾರಣವಾಗಿದ್ದಿತು. ಏಕೆಂದರೆ ನಾನು ಅವರ ಪ್ರತಿನಿಧಿಯಾಗಿದ್ದುದು

ರಿಂದ ಆ ದೋಷದಲ್ಲಿ ನಾನೂ ಭಾಗಿಯೆಂದು ನನಗೆ ತೋರಿತು. ಮಾಲಿಕರಲ್ಲಿ ನಾನು ಸವಿನಯ ನಿವೇದನವನ್ನು ಮಾತ್ರ ಮಾಡಿಕೊಳ್ಳಲು ಸಾಧ್ಯವಿದ್ದಿತು. ಅವರಿಗೆ ಪ್ರತಿಯಾಗಿ ಉಪವಾಸ ಮಾಡುವುದೆಂದರೆ ಬಲೋದ್ಬಂಧವಾಗುತ್ತಿದ್ದಿತು. ಹೀಗೆ ನನ್ನ ಉಪವಾಸವು ಅವರನ್ನು ಒತ್ತಾಯಪಡಿಸುವುದೆಂದು ನನಗೆ ತಿಳಿದಿದ್ದರೂ—ವಸ್ತುತಃ ಅದು ಹಾಗೆಯೇ ಪರಿಣಮಿಸಿತು—ಅದಕ್ಕೆ ಬೇರೆ ಉಪಾಯವಿಲ್ಲವೆಂದು ನನಗೆ ತೋರಿತು. ಉಪವಾಸವನ್ನು ಕೈಗೊಳ್ಳುವುದು ನನ್ನ ಕರ್ತವ್ಯವೆಂಬುದು ನನಗೆ ಸ್ಪಷ್ಟವಾಗಿರುವಂತೆ ತೋರಿತು

ಮಾಲಿಕರ ಮನಸ್ಸನ್ನು ಶಾಂತವಾಗಿ ನಿಲ್ಲಿಸಲು ನಾನು ಪ್ರಯತ್ನಪಟ್ಟೆನು "ನಿಮ್ಮ ಮಾರ್ಗವನ್ನು ಬಿಡಲು ನಿಮಗೆ ಎಳ್ಳಷ್ಟೂ ಆವಶ್ಯಕತೆಯಿಲ್ಲ." ಎಂದು ನಾನು ಅವರಿಗೆ ಹೇಳಿದೆನು. ಆದರೆ ಅವರು ನನ್ನ ಮಾತುಗಳನ್ನು ಮನ್ನಣೆಯಿಂದ ಕಾಣಲಿಲ್ಲ. ಅಷ್ಟೇ ಅಲ್ಲ. ಅವರು ನನ್ನಮೇಲೆ ತೀಕ್ಷ್ಣವಾದ ಸೂಕ್ಷ್ಮವಾದ ವಾಗ್ಬಾಣಗಳನ್ನು ಎಸೆದರು.

ಮುಷ್ಕರದ ವಿಷಯದಲ್ಲಿ ಗಿರಣಿಗಳ ಮಾಲೀಕರು ಅಚಲರಾಗಿ ನಿಲ್ಲಲು ಕಾರಣಭೂತರಾದ ಮುಖ್ಯವ್ಯಕ್ತಿಗಳಾರೆಂದರೆ ಸೇಠ ಅಂಬಾಲಾಲರು. ಅವರ ಮನೋದಾರ್ಢ್ಯವೂ ನಿರ್ಮಲ ನಿಷ್ಕಾಪಟ್ಯವೂ ವಿಸ್ಮಯಜನಕವಾಗಿದ್ದುವು. ಅವು ನನ್ನ ಹೃದಯವನ್ನು ಸೆರೆ ಹಿಡಿದುವು. ಇಂತಹರನ್ನಿದಿರಿಸಿ ಹೋರಾಡುವುದೊಂದು ಸಂತಸದ ಕಾರ್ಯವಾಗಿದ್ದಿತು. ಆದುದರಿಂದ ಈ ಅಗ್ರೇಸರರನ್ನುಳ್ಳ ಇದಿರುಪಕ್ಷದಮೇಲೆ ನನ್ನ ಉಪವಾಸದಿಂದುಂಟಾದ ಒತ್ತಾಯವು ನನ್ನ ಮನಸ್ಸನ್ನು ಬಹುವಾಗಿ ನೋಯಿಸಿತು. ಇದಲ್ಲದೆ ಅವರ ಧರ್ಮಪತ್ನಿಯಾದ ಶ್ರೀ ಸರಳಾದೇವಿಗೆ ನನ್ನಲ್ಲಿ ಸದ್ಯ ಅಣ್ಣನಲ್ಲಿದ್ದಷ್ಟು ಹೊಂದಿಕೆಯಿದ್ದುದರಿಂದ ಆಕೆಯು ನನ್ನ ಉಪವಾಸದ ಕಾರಣ ಮರುಗುವುದನ್ನು ನೋಡಿ ಸಹಿಸುವುದು ನನಗೆ ಶಕ್ಯವಿರಲಿಲ್ಲ.

ಮೊದಲನೆಯ ದಿನ ಶ್ರೀ. ಅನಸೂಯಾಬಾಯಿಯೂ ಕೆಲವರು ಇತರ ಮಿತ್ರರೂ ಕೂಲಿಗಾರರೂ ಉಪವಾಸಮಾಡಿದರು. ಆದರೆ ಉಪವಾಸ ಮಾಡದಿರುವಂತೆ ಹಾಗೂ ಹೀಗೂ ಕಷ್ಟಪಟ್ಟು ಅವರನ್ನು ಪ್ರೇರಿಸಿದೆನು.

ಇದೆಲ್ಲದರ ಫಲವಾಗಿ ಸೌಹಾರ್ದದ ವಾತಾವರಣವು ಎಲ್ಲಾಕಡೆಯೂ ಹರಡಿತು. ಗಿರಣಿಗಳ ಮಾಲಿಕರ ಅಂತಃಕರಣವು ಕರಗಿ ಅವರು ಈ ವಿವಾದವು ಕಡೆಗಾಣುವುದಕ್ಕೆ ಯಾವುದಾದರೊಂದು ದಾರಿಯನ್ನು ಹುಡುಕತೊಡಗಿದರು. ಅನಸೂಯಾಬಾಯಿಯ ಮನೆಯು ಚರ್ಚೆಯ ಕೂಟಗಳ ಬೀಡಾಯಿತು ಕಡೆಗೆ ಶ್ರೀ. ಆನಂದ ಶಂಕರ ಧ್ರುವರನ್ನು ಪಂಚಾಯಿತರನ್ನಾಗಿ ಗೊತ್ತುಮಾಡಿದರು. ನಾನಿನ್ನೂ ಮೂರೇ ದಿವಸ ಉಪವಾಸಮಾಡಿದ್ದೆನು. ಅಷ್ಟರಲ್ಲಿಯೇ ಮುಷ್ಕರವು ನಿಂತಿತು ಕೂಲಿಗಾರರಿಗೆ ಮಿಠಾಯಿಯನ್ನು ಹಂಚಿ ಮಾಲಿಕರು ಈ ಸುಸಂಧಿಯ ನೆನಹನ್ನು ಸ್ಥಿರಗೊಳಿಸಿದರು. ಈ ರೀತಿಯಾಗಿ ಇಪ್ಪತ್ತೊಂದು ದಿವಸ ಮುಷ್ಕರವು ಸಾಗಿದಮೇಲೆ ವಿವಾದವು ಕೊನೆಗಂಡಿತು

ಈ ಒಪ್ಪಂದದ ಉತ್ಸವವನ್ನು ನೆರವೇರಿಸಲು ಸೇರಿದ್ದ ಕೂಟಕ್ಕೆ ಗಿರಣಿಗಳ ಮಾಲಿಕರೂ ಆ ಪ್ರಾಂತದ ಮುಖ್ಯಾಧಿಕಾರಿಗಳೂ (ಕಮಿಾಷನರ್) ಬಂದಿದ್ದರು. ಆ ಸಂದರ್ಭದಲ್ಲಿ ಕಮಿಾಷನರು ಕೂಲಿಗಾರರಿಗೆ "ನೀವು ಯಾವಾಗಲೂ ಗಾಂಧಿಯವರು ಹೇಳಿದಂತೆ ನಡೆಯಬೇಕು." ಎಂದು ಬುದ್ಧಿವಾದ ಹೇಳಿದರು. ಈ ಘಟನೆಗಳು ನಡೆದ ಅತ್ಯಲ್ಪ ಕಾಲದಲ್ಲಿಯೇ ನಾನು ಇದೇ ಸದ್ಗೃಹಸ್ಥರೊಡನೆ ಕದನವಾಡಬೇಕಾಗಿ ಬಂದಿತು. ಆದರೆ ಆಗಿನ ಸಂದರ್ಭಗಳು ವ್ಯತ್ಯಸ್ತವಾಗಿದ್ದುವು. ಅದರೊಡನೆ ಅವರೂ ಬದಲಾಯಿಸಿದ್ದರು. ಆಗ ಅವರು ಖೇಡದ ರೈತರಿಗೆ ನನ್ನ ಸಲಹೆಯನ್ನು ಕೇಳಬೇಡಿರೆಂದು ಎಚ್ಚರಕೊಟ್ಟರು।

ಎಷ್ಟು ವಿನೋದಕರವೋ ಅಷ್ಟೇ ಕರುಣಾಜನಕವೂ ಆದ ಸಂಗತಿಯೊಂದನ್ನು ತಿಳಿಸದೆ ನಾನು ಈ ಪ್ರಕರಣವನ್ನು ಮುಗಿಸಕೂಡದು. ಇದು ಮಿಠಾಯಿಯನ್ನು ಹಂಚುವ ಸಂದರ್ಭದಲ್ಲಿ ನಡೆಯಿತು ಗಿರಣಿಯ ಮಾಲಿಕರು ನೂರಾರು ಮಣಗಟ್ಟಲೆ ಮಿಠಾಯಿಯನ್ನು ತರಿಸಿದ್ದರು. ಅದನ್ನು ಸಾವಿರಾರು ಕೂಲಿಗಾರರಿಗೆ ಹಂಚುವುದು ಹೇಗೆಂಬುದು ದೊಡ್ಡ ಪ್ರಶ್ನೆಯಾಗಿದ್ದಿತು ಯಾವ ಮರದ ಕೆಳಗೆ ಕೂಲಿಗಾರರು ಪ್ರತಿಜ್ಞೆಯನ್ನು ಮಾಡಿದ್ದರೋ ಅದೇ ಮರದ ಕೆಳಗೆ ಹಂಚುವುದು ಅತ್ಯಂತ ಉಚಿತವಾ

ದುದೆಂದು ನಿರ್ಧರವಾಯಿತು. ಇದಲ್ಲದೆ ಇನ್ನೆಲ್ಲಾದರೂ ಅವರೆಲ್ಲರನ್ನು ಕೂಡಿಸುವುದೆಂದರೆ ಬಹು ಅನಾನುಕೂಲಕ್ಕೆ ಕಾರಣವಾಗುತ್ತಿದ್ದಿತು.

ಇಪ್ಪತ್ತೊಂದು ದಿವಸ ಕಟ್ಟುನಿಟ್ಟಿನಿಂದ ವರ್ತಿಸಿದ್ದ ಜನರು ಮಿಠಾಯಿಯನ್ನು ಹಂಚುವಾಗ ಯಾವ ತೊಂದರೆಯೂ ಇಲ್ಲದೆ ಪಂಕ್ತಿಗಳಲ್ಲಿ ಕ್ರಮವಾಗಿ ನಿಂತುಕೊಳ್ಳುವರೆಂದೂ ಮಿಠಾಯಿಗಾಗಿ ಆತುರದಿಂದ ಒಬ್ಬರ ಮೇಲೊಬ್ಬರು ಬೀಳುವುದಿಲ್ಲವೆಂದೂ ನನ್ನ ಸರಳ ಬುದ್ಧಿಯು ನನಗೆ ಹೇಳಿದ್ದಿತು. ಆದರೆ ಪರೀಕ್ಷೆಯ ಕಾಲವೊದಗಿದಾಗ ಹಂಚುವುದಕ್ಕೆ ಮಾಡಿದ ಯಾವ ಉಪಾಯವೂ ಸಾರ್ಥಕವಾಗಲಿಲ್ಲ ಎರಡು ನಿಮಿಷ ಹಂಚುವುದೇ ತಡ ಅವರು ತಮ್ಮ ಸಾಲುಗಳನ್ನು ಬಿಟ್ಟು ನುಗ್ಗುತ್ತಿದ್ದರು. ಕೂಲಿಗಾರರ ಮುಖಂಡರು ಅಲ್ಲಿ ಎಲ್ಲವೂ ಕ್ರಮವಾಗಿ ನಡೆಯುವಂತೆ ತಮ್ಮ ಕೈಲಾದಷ್ಟು ಸಾಹಸಪಟ್ಟರು. ಆದರೆ ಅದು ಸಫಲವಾಗಲಿಲ್ಲ. ಅಲ್ಲಿನ ನೂಕುನುಗ್ಗಲೂ ಗಲಾಟೆಯೂ ಕಡೆಗೆ ಎಷ್ಟು ಹೆಚ್ಚಿತೆಂದರೆ ಎಷ್ಟೋ ಮಿಠಾಯಿಯು ಕಾಲುತುಳಿತದಿಂದ ಹಾಳಾಗಿ ಹೋಯಿತು. ಬಯಲಿನಲ್ಲಿ ಮಿಠಾಯಿಯನ್ನು ಹಂಚುವ ಪ್ರಯತ್ನವನ್ನು ಕಟ್ಟಕಡೆಗೆ ಬಿಟ್ಟುಬಿಡಬೇಕಾಯಿತು. ಮಿರ್ಜಾಪುರದಲ್ಲಿದ್ದ ಸೇಠ್ ಅಂಬಾಲಾಲರ ಮನೆಗೆ ಉಳಿದ ಮಿಠಾಯಿಯನ್ನು ಹಾಗೂ ಹೀಗೂ ಸಾಗಿಸಿದೆವು ಮರುದಿನ ಆ ಬಂಗಲೆಯ ಆವರಣದಲ್ಲಿಯೇ ಮಿಠಾಯಿಯನ್ನು ತೊಂದರೆಯಿಲ್ಲದೆ ಹಂಚಿದುದಾಯಿತು.

ಈ ಘಟನೆಯಲ್ಲಿನ ವಿನೋದಾಸ್ಪದವಾದ ಅಂಶವು ಸ್ಪಷ್ಟವಾಗಿಯೇ ಇದೆ. ಆದರೆ ಕರುಣಾಜನಕವಾದ ಅಂಶವನ್ನು ಉಲ್ಲೇಖಿಸುವುದು ಉಚಿತವಾಗಿದೆ. ಆಮೇಲೆ ವಿಚಾರಿಸಿದುದರಲ್ಲಿ ಅಹಮದಾಬಾದಿನ ಭಿಕ್ಷುಕವರ್ಗಕ್ಕೆ 'ಏಕ್-ಟೇಕ್' (ಪ್ರತಿಜ್ಞೆಯ) ಮರದ ಕೆಳಗೆ ಮಿಠಾಯಿಯನ್ನು ಹಂಚುವ ಸಮಾಚಾರವು ಹೇಗೋ ತಿಳಿದು ಅವರು ಅಲ್ಲಿಗೆ ಗುಂಪುಗೂಡಿ ಬಂದಿದ್ದರೆಂದೂ ಹೊಟ್ಟೆಗೆ ಹಿಟ್ಟಿಲ್ಲದ ಆ ಜನರು ಮಿಠಾಯಿಗೆ ಆತುರದಿಂದ ಕೈಯೊಡ್ಡಿದುದೇ ಅಷ್ಟು ನೂಕುನುಗ್ಗಲಿಗೂ ಗಲಭೆಗೂ ಕಾರಣವಾಗಿದ್ದಿತೆಂದೂ ತಿಳಿದುಬಂದಿತು.

ನಮ್ಮ ನಾಡಿನ ಬೇನೆಯಾಗಿರುವ ಕಡುಬಡತನವೂ ನಿರಾಹಾರವೇಧೆಯೂ ಎಷ್ಟು ಕಠಿಣವೆಂದರೆ ಅವು ಪ್ರತಿವರ್ಷವೂ ಹೆಚ್ಚು ಹೆಚ್ಚು ಜನರನ್ನು ತಿರುಕರ ದಂಡಿಗೆ ಓಡಿಸುತ್ತಿವೆ. ಹಿಟ್ಟಿಗಾಗಿ ಇವರು ಪಡುವ ಪಾಡು ಇವರ ಮಾನಮರ್‍ಯಾದೆಯ ಮತ್ತು ಆತ್ಮಗೌರವದ ಸಂಪರ್ಕವನ್ನೇ ತೊಡೆದು ಹಾಕಿಬಿಡುತ್ತಿದೆ ಮತ್ತು ನಮ್ಮ ಧನಿಕದಾನಿಗಳಾದರೋ ಇವರಿಗೆ ಕೆಲಸವನ್ನು ಕೊಂದಿಸಿಕೊಟ್ಟು ಹಿಟ್ಟಿಗೆ ಪ್ರತಿಯಾಗಿ ಇವರಿಂದ ಕಲಸ ಮಾಡಿಸುವುದರ ಬದಲು ಇವರಿಗೆ ಭಿಕ್ಷವನ್ನೀಯುತ್ತಾರೆ.

---

## ೨೩

# ಖೇಡಾ ಸತ್ಯಾಗ್ರಹ.

ಆದರೆ ನನಗೆ ಸ್ವಲ್ಪವೂ ವಿರಾಮ ದೊರೆಯಲಿಲ್ಲ. ಅಹಮದಾಬಾದಿನ ಗಿರಣಿಯ ಕೂಲಿಗಾರರ ಮುಷ್ಕರವು ಮುಗಿಯುವುದಕ್ಕಿಲ್ಲ, ಅಷ್ಟರಲ್ಲಿಯೇ ನಾನು ಖೇಡಾ ಸತ್ಯಾಗ್ರಹಕದನಕ್ಕೆ ನುಗ್ಗಬೇಕಾಯಿತು.

ಖೇಡಾಜಿಲ್ಲೆಯ ಬಹುಭಾಗದಲ್ಲಿ ಪೈರು ಬೆಳೆಯದಿದ್ದುದರಿಂದ ಅಲ್ಲಿನ ಪರಿಸ್ಥಿತಿಯು ಬರಗಾಲದಂತೆ ಪರಿಣಮಿಸಿದ್ದಿತು. ಖೇಡದ ರೈತರು ಆ ವರ್ಷದ ಭೂಗಂದಾಯವನ್ನು ನಿಲ್ಲಿಸುವಂತೆ ಪ್ರಯತ್ನಪಡುವ ವಿಚಾರದಲ್ಲಿದ್ದರು

ಈ ವಿಷಯವಾಗಿ ನಾನು ರೈತರಿಗೆ ನಿರ್ದಿಷ್ಟವಾದ ಸಲಹೆಯನ್ನು ಕೊಡುವುದಕ್ಕೆ ಮುಂಚೆ ಶ್ರೀ ಅಮೃತಲಾಲ ಠಕ್ಕರರು ಅಲ್ಲಿನ ಪರಿಸ್ಥಿತಿಯನ್ನು ವಿಮರ್ಶಿಸಿ ಅದರ ಮೇಲಿನ ವರದಿಯನ್ನು ಬರೆದಿದ್ದರಲ್ಲದೆ ಆ ಪ್ರಾಂತದ ಮುಖ್ಯಾಧಿಕಾರಿಗಳಾದ ಕಮಿಷನರೊಡನೆ ಈ ಪ್ರಶ್ನೆಯನ್ನು ಮುಖತಃ ಚರ್ಚಿಸಿದ್ದರು ಶ್ರೀ ಮೋಹನಲಾಲ್ ಪಂಡ್ಯಾ ಮತ್ತು ಶಂಕರಲಾಲ ಪರೀಖರವರು ಈ ಕದನಕ್ಕೆ ಸೇರಿ ಶ್ರೀ ವಿಟ್ಠಲಭಾಯೀ ಪಟೇಲ್ ಮತ್ತು ದಿವಂ ಸರ್ ಗೋಕುಲದಾಸ್ ಕಹಾನ್‌ದಾಸ್ ಪಾರೇಖರಮೂಲಕ ಮುಂಬಯಿಯ ಕಾಯಿದೆ ಸಭೆಯಲ್ಲಿ ಚಳವಳಿಯನ್ನು ಹೂಡಿದ್ದರು. ಈ ಸಂಬಂಧವಾಗಿ ಗವರ್ನರರನ್ನು ಭೆಟ್ಟಿಮಾಡಲು ಅರ್ಜಿದಾರರ ಸಮಿತಿಗಳೊಂದೆರಡು ಅವರ ಬಳಿಗೆ ಹೋಗಿದ್ದುವು.

ಈ ಸಮಯದಲ್ಲಿ ನಾನು ಗುಜರಾತ್ ಸಭೆಯ ಅಧ್ಯಕ್ಷನಾಗಿದ್ದೆನು. ಈ ಸಭೆಯು ಸರಕಾರಕ್ಕೆ ಅರ್ಜಿಗಳನ್ನೂ ತಾರುಗಳನ್ನೂ ಕಳುಹಿಸಿತು, ಕಮಿಷನರ ಬೈಗಳನ್ನೂ ಬೆದರಿಕೆಗಳನ್ನೂ ಕೂಡ ತಾಳ್ಮೆಯಿಂದ ನುಂಗಿತು. ಆ ಸಂದರ್ಭದಲ್ಲಿ ಅಧಿಕಾರವರ್ಗದವರ ನಡತೆಯು ಎಷ್ಟು

ನಗೆಗೇಡಾಗಿಯೂ ಮರ್ಯಾದೆಗೇಡಾಗಿಯೂ ಇದ್ದಿತೆಂಬುದನ್ನು ನೆನಸಿ ಕೊಂಡರೆ ಈಗ ಅದನ್ನು ನಂಬುವಹಾಗಿಲ್ಲ.

ರೈತರು ಕೇಳುವುದು ಹಗಲಿನ ಬೆಳಕಿನಷ್ಟು ಸ್ಪಷ್ಟವಾಗಿದ್ದಿತು. ಅದು ಎಷ್ಟು ಕಡಮೆಯಾಗಿದ್ದಿತೆಂದರೆ ಸರಕಾರದವರು ಅದಕ್ಕೆ ಒಪ್ಪಿಕೊಳ್ಳಲು ಯಾವ ಅಡಚಣೆಯೂ ಇರುವಂತಿರಲಿಲ್ಲ. ಭೂಗಂದಾಯದ ನಿಯಮಗಳ ಪ್ರಕಾರ ನಾಲ್ಕಾಣೆಗಿಂತ ಕಡಮೆಯಾಗಿ ಪೈರಾದರೆ ಆ ವರ್ಷದ ಭೂಗಂದಾಯವನ್ನು ಪೂರ್ತಿಯಾಗಿ ನಿಲ್ಲಿಸಬೇಕೆಂದು ರೈತರು ಕೇಳಬಹುದಾಗಿದ್ದಿತು ಸರಕಾರದವರು ತಮ್ಮ ಲೆಕ್ಕಾಚಾರದ ಪ್ರಕಾರ ಬೆಳೆಯು ನಾಲ್ಕಾಣೆಗಿಂತ ಹೆಚ್ಚೆಂದು ಹೇಳುತ್ತಿದ್ದರು ರೈತರಾದರೋ ನಾಲ್ಕಾಣೆಗಿಂತ ಕಡಮೆ ಯೆಂದು ವಾದಿಸುತ್ತಿದ್ದರು. ಆದರೆ ಸರಕಾರದ ವರು ಜನರ ಮಾತಿಗೆ ಕಿವಿಗೊಡುವಂತಿರಲಿಲ್ಲ ಪಂಚಾಯಿತರನ್ನು ನೇಮಿಸಬೇಕೆಂದು ಜನರು ಕೇಳಲು ಅದು ತಮಗೆ ದ್ರೋಹವೆಂದು ಸರಕಾರ ದವರು ಎಣಿಸಿದರು. ಅರ್ಜಿಗಳಿಂದಲೂ ಬಿನ್ನಹಗಳಿಂದಲೂ ಯಾವ ಪ್ರಯೋಜನವೂ ಆಗದಿರಲು ಕಟ್ಟಕಡೆಗ ನಾನು ನನ್ನ ಸಂಗಡಿಗರ ಸಲಹೆಯನ್ನು ತೆಗೆದುಕೊಂಡು ರೈತರಿಗೆ ಸತ್ಯಾಗ್ರಹ ನಡೆಸುವಂತೆ ಸಲಹೆಕೊಟ್ಟೆನು

ಖೇಡದ ಸ್ವಯಂಸೇವಕರಲ್ಲದೆ ಈ ಹೋರಾಟದಲ್ಲಿ ಶ್ರೀ. ವಲ್ಲಭಭಾಯೀ ಪಟೇಲ್, ಶಂಕರಲಾಲ ಬ್ಯಾಂಕರ್, ಶ್ರೀಮತೀ ಅನಸೂಯಾಬಾಯಿ ಮತ್ತು ಶ್ರೀ ಇಂದುಲಾಲ್ ಕನ್ಹೈಯಾಲಾಲ್ ಯಾಜ್ಞಿಕ್, ಮಹದೇವ ದೇಶಾಯಿ ಮುಂತಾದವರು ನನ್ನ ಸಂಗಾತಿಗಳಾಗಿದ್ದರು ಈ ಕದನದಲ್ಲಿ ತೊಡಗುವುದಕ್ಕಾಗಿ ಶ್ರೀ ವಲ್ಲಭಭಾಯಿಯವರು ಸೊಗಸಾಗಿ ನಡೆಯುತ್ತಲೂ ವೃದ್ಧಿಯಾಗುತ್ತಲೂ ಇದ್ದ ತಮ್ಮ ವಕೀಲಿ ಕೆಲಸವನ್ನು ನಿಲ್ಲಿಸಬೇಕಾಯಿತು. ಇದನ್ನು ಅವರು ಪುನಃ ಪ್ರಾರಂಭಿಸಲಾಗಲೇ ಇಲ್ಲವೆಂದು ಹೇಳಬಹುದು

ನಾವೆಲ್ಲರೂ ತಂಗುವುದಕ್ಕೆ ಸಾಕಾದಷ್ಟು ಜಾಗವಿರುವ ಇನ್ನಾವ ಸ್ಥಳವೂ ದೊರಕದುದರಿಂದ ನಾವು ನಡಿಯಾದದ ಅನಾಥಾಶ್ರಮದಲ್ಲಿ ನಮ್ಮ ಕಾರ್ಯಕೇಂದ್ರವನ್ನು ಹೂಡಿದೆವು

ಸತ್ಯಾಗ್ರಹಿಗಳು ಈ ಕೆಳಗಿನ ಪ್ರಮಾಣಕ್ಕೆ ಸಹಿ ಹಾಕಿದರು :

"ನಮ್ಮ ಹಳ್ಳಿಗಳಲ್ಲಿ ಬೆಳೆಯು ನಾಲ್ಕಾಣೆಗಿಂತ ಕಡಮೆಯಾದುದನ್ನು ತಿಳಿದುಕೊಂಡು ನಾವು ಸರಕಾರದವರನ್ನು ಮುಂದಿನ ವರ್ಷದವರೆಗೂ ಕಂದಾಯವನ್ನು ಎತ್ತಬೇಡಿರೆಂದು ಕೇಳಿಕೊಂಡೆವು ಆದರೆ ಸರಕಾರದವರು ನಮ್ಮ ಬಿನ್ನಹವನ್ನು ಮನ್ನಿಸಿಲ್ಲ. ಆದುದರಿಂದ ಈ ಕೆಳಗೆ ಸಹಿಹಾಕಿರುವ ನಾವು ಸರಕಾರಕ್ಕೆ ನಾವಾಗಿ ನಾವೇ ಪೂರ್ತಿ ಕಂದಾಯವನ್ನಾಗಲಿ ಅಥವಾ ಈ ವರ್ಷ ಉಳಿದ ಬಾಕಿಯನ್ನಾಗಲಿ ಕೊಡುವುದಿಲ್ಲವೆಂದು ಈ ಮೂಲಕ ಪ್ರಮಾಣವಾಗಿ ಹೇಳುತ್ತೇವೆ ಸರಕಾರದವರು ತಮಗೆ ಸೂಕ್ತ ತೋರಿದ ವ್ಯವಹಾರ ನಡೆಸಲು ನಾವು ಅಡ್ಡಿಮಾಡುವುದಿಲ್ಲ. ನಾವು ಕಂದಾಯ ಕೊಡದಿರುವುದರ ಪರಿಣಾಮವನ್ನು ಸಂತೋಷದಿಂದ ಅನುಭವಿಸುತ್ತೇವೆ ನಾವಾಗಿ ನಾವೇ ಕಂದಾಯ ತೆರುವುದರಿಂದ ನಾವು ವಾದಿಸುವ ಪಕ್ಷವು ಸುಳ್ಳೆಂದೆಣಿಸಲು ಅವಕಾಶ ಕೊಡುವುದಕ್ಕಾಗಲಿ ಅಥವಾ ನಮ್ಮ ಆತ್ಮಗೌರವಕ್ಕೆ ಕಳಂಕತರುವುದಕ್ಕಾಗಲಿ ಬದಲಾಗಿ ನಾವು ನಮ್ಮ ಭೂಮಿಯನ್ನು ಸರಕಾರವು ಮುಟ್ಟುಗೋಲು ಹಾಕಿ ಕಿತ್ತುಕೊಳ್ಳುವುದೇ ಲೇಸೆಂದೆಣಿಸುತ್ತೇವೆ. ಆದರೆ ಸರಕಾರದವರು ಈ ಜಿಲ್ಲೆಯಲ್ಲೆಲ್ಲಾ ಕಂದಾಯದ ಎರಡನೆಯ ಕಂತನ್ನು ಕೂಡಿಸುವುದನ್ನು ನಿಲ್ಲಿಸಲು ಒಪ್ಪಿದರ ನಮ್ಮಲ್ಲಿ ಹಣವನ್ನು ಕೊಡುವ ಚೈತನ್ಯವುಳ್ಳವರು ಪೂರ್ತಿ ಕಂದಾಯವನ್ನಾಗಲಿ ಸಲ್ಲಬೇಕಾದ ಬಾಕಿಯನ್ನಾಗಲಿ ಕೊಟ್ಟುಬಿಡುತ್ತೇವೆ. ಕೊಡಲು ಚೈತನ್ಯವಿರುವವರು ಏತಕ್ಕೆ ತೆರುವುದಿಲ್ಲವೆಂದರೆ ಅವರು ತೆತ್ತರೆ ಇನ್ನೂ ಬಡವರಾದ ರೈತರು ದಿಗಿಲು ಬಿದ್ದು ತಾವು ಕೊಡಬೇಕಾದುದನ್ನು ಸಲ್ಲಿಸುವುದಕ್ಕಾಗಿ ತಮ್ಮ ಪಾತ್ರಪದಾರ್ಥಗಳನ್ನು ಮಾರಿಯೋ ಅಥವಾ ಸಾಲವನ್ನು ಮಾಡಿಯೋ ತಮ್ಮಮೇಲೆ ತೊಂದರೆಯನ್ನು ತಂದು ಹಾಕಿಕೊಂಡಾರೆಂಬುದೇ ತೆರುವ ಚೈತನ್ಯವುಳ್ಳವರು ಕೂಡ ಕಂದಾಯವನ್ನು ಕೊಡದೆ ಇರುವುದೇ ಇಂತಹ ಸನ್ನಿವೇಶದಲ್ಲಿ ಬಡವರ ಸಲುವಾಗಿ ಅವರ ಕರ್ತವ್ಯವೆಂದು ನಮಗೆ ತೋರುತ್ತದೆ"

ಈ ಹೋರಾಟದ ವಿಷಯವಾಗಿ ನಾನು ಅನೇಕ ಅಧ್ಯಾಯಗಳನ್ನು ಬರೆಯಲಾಗುವುದಿಲ್ಲ. ಆದುದರಿಂದ ಇದಕ್ಕೆ ಸಂಬಂಧಪಟ್ಟ ಎಷ್ಟೋ

ಮಧುರಸಂಸ್ಮರಣಗಳನ್ನು ಬಿಟ್ಟುಬಿಡಬೇಕಾಗುವುದು ಈ ಮುಖ್ಯವಾದ ಕದನಕ್ಕೆ ಸಂಬಂಧಪಟ್ಟ ವಿಷಯಗಳನ್ನು ಇನ್ನೂ ಸಂಪೂರ್ಣವಾಗಿ ಮತ್ತು ಇನ್ನೂ ಚೆನ್ನಾಗಿ ತಿಳಿದುಕೊಳ್ಳಲಿಚ್ಛಿಸುವವರು ಖೇಡಾ ಪ್ರಾಂತದಲ್ಲಿರುವ ಕಥಲಾಲದ ಶ್ರೀ. ಶಂಕರಲಾಲ ಪರೀಖರು ಬರೆದು ಪ್ರಕಟಿಸಿರುವ ಖೇಡಾಸತ್ಯಾಗ್ರಹದ ಸಂಪೂರ್ಣ ಮತ್ತು ವಿಶ್ವಸನೀಯ ಇತಿಹಾಸವನ್ನು ಓದಬೇಕೆಂದು ನನ್ನ ಸೂಚನೆ [ಪುಸ್ತಕವು ಗುಜರಾತಿಯಲ್ಲಿದೆ, ಇದು ಇನ್ನೂ ಇತರ ಭಾಷೆಗಳಿಗೆ ಪರಿವರ್ತಿತವಾಗಿಲ್ಲ ]

———

## ೨೪

## 'ನೀರುಳ್ಳಿಯ ಕಳ್ಳ.'

ಚಂಪಾರಣ್ಯವು ಭರತಖಂಡದ ಬಹುದೂರದ ಮೂಲೆಯೊಂದರಲ್ಲಿರುವುದರಿಂದಲೂ ವೃತ್ತಪತ್ರಿಕೆಗಳ ಪ್ರತಿನಿಧಿಗಳನ್ನು ಆ ಕದನದ ಹೊರಗಿಟ್ಟುದರಿಂದಲೂ ಆಗ ಬಹುಮಂದಿ ಹೊರಗಿನ ಪ್ರೇಕ್ಷಕರು ಆಕರ್ಷಿತರಾಗಲಿಲ್ಲ. ಆದರೆ ಖೇಡಾ ಸಂಗ್ರಾಮದ ವಿಷಯವು ಬೇರೆಯಾಗಿದ್ದಿತು ಇದರ ಘಟನೆಗಳು ದಿನಂಪ್ರತಿ ವೃತ್ತಪತ್ರಿಕೆಗಳಲ್ಲಿ ಪ್ರಕಟವಾಗುತ್ತಿದ್ದುವು.

ಗುಜರಾತಿಗಳು ಈ ಹೋರಾಟದಲ್ಲಿ ಬಹು ಕುತೂಹಲವುಳ್ಳವರಾಗಿದ್ದರು. ಇದರಲ್ಲಿ ವಿಜಯವನ್ನು ಪಡೆಯಲೋಸುಗ ಅವರು ತಮ್ಮ ಐಶ್ವರ್ಯವನ್ನು ಸುರಿಯಲು ಸಿದ್ಧರಾಗಿದ್ದರು. ಕೇವಲ ಧನಸಹಾಯದಿಂದ ಸತ್ಯಾಗ್ರಹವನ್ನು ನಡೆಸಲಾಗುವುದಿಲ್ಲವೆಂಬುದನ್ನು ತಿಳಿದುಕೊಳ್ಳುವುದು ಅವರಿಗೆ ಸುಲಭವಾಗಿರಲಿಲ್ಲ ಸತ್ಯಾಗ್ರಹದ ಸಾಧನಗಳಲ್ಲಿ ಹಣಕ್ಕಿಂತ ಕಡಮೆ ಬೆಲೆಯುಳ್ಳದು ಯಾವುದೂ ಇಲ್ಲ. ಎಷ್ಟು ಹೇಳಿದರೂ ಮುಂಬಯಿಯ ಸಾಹುಕಾರರು ನಮಗೆ ಅಗತ್ಯವಿದ್ದುದಕ್ಕಿಂತ ಹೆಚ್ಚಾಗಿ ಹಣವನ್ನು ಕಳುಹಿಸಿದರು ಇದರ ಫಲವೇನಾಯಿತೆಂದರೆ ಕದನವು ಕೊನೆಗಂಡಾಗ ನಮ್ಮ ಕೈಯಲ್ಲಿ ಇನ್ನೂ ಹಣವು ಉಳಿದಿದ್ದಿತು.

ಇದರೊಂದಿಗೆ ಸತ್ಯಾಗ್ರಹಿಗಳಾದ ಸ್ವಯಂಸೇವಕರು ಸರಳಜೀವನದ ಹೊಸಪಾಠವನ್ನು ಕಲಿಯಬೇಕಾಗಿದ್ದಿತು ಅವರು ಅದನ್ನು ಸಂಪೂರ್ಣವಾಗಿ ಗ್ರಹಿಸಿದರೆಂದು ನಾನು ಹೇಳಲಾರೆನು. ಆದರೆ ಅವರು ತಮ್ಮ ಜೀವನಕ್ರಮವನ್ನು ಬಹುಮಟ್ಟಿಗೆ ತಿದ್ದಿಕೊಂಡರು.

ರೈತರಿಗೆ ಕೂಡ ಈ ಹೋರಾಟವು ತೀರ ಹೊಸವಿಷಯವಾಗಿದ್ದಿತು. ಆದುದರಿಂದ ನಾವು ಹಳ್ಳಿಯಿಂದ ಹಳ್ಳಿಗೆ ಹೋಗಿ ಸತ್ಯಾಗ್ರಹದ ತತ್ವಗ

ಳನ್ನು ವಿವರಿಸಬೇಕಾಯಿತು. ಅಧಿಕಾರವರ್ಗದವರು ಜನರು ತೆರುವ ತೆರಿಗೆಗಳಿಂದ ಸಂಬಳವನ್ನು ಪಡೆಯುವುದರಿಂದ ಅವರು ಪ್ರಜೆಗಳ ಆಳುಗಳಲ್ಲದೆ ಒಡೆಯರಲ್ಲವೆಂಬುದನ್ನು ರೈತರು ಮನಗಂಡು ತಮ್ಮ ಭೀತಿಯನ್ನು ನೀಗುವಂತೆ ಮಾಡುವುದೇ ಮುಖ್ಯವಾದ ವಿಷಯವಾಗಿದ್ದಿತು. ಮತ್ತು ನಿರ್ಭಯದ ಜೊತೆಗೆ ವಿನಯವನ್ನು ಕೂಡ ಇಟ್ಟುಕೊಂಡಿರುವುದು ತಮ್ಮ ಕರ್ತವ್ಯವೆಂದು ಅವರಿಗೆ ಮನವರಿಕೆಯಾಗುವಂತೆ ಮಾಡುವುದು ಅಸಾಧ್ಯವೆಂಬಂತೆ ತೋರಿತು. ಅವರು ಅಧಿಕಾರಿಗಳ ಭೀತಿಯನ್ನು ಒಂದುಸಲ ಕಳೆದುಕೊಂಡಮೇಲೆ ತಮಗೆ ಅಪಮಾನವಾದರೆ ಅದಕ್ಕೆ ಪ್ರತೀಕಾರಮಾಡದಿರುವಂತೆ ಅವರನ್ನು ತಡೆಯುವುದೆಂತು ? ಆದರೆ ಅವರು ಅವಿನಯದಿಂದ ವರ್ತಿಸಿದರೆ ಅದು ಹಾಲಿನ ಕೊಡದೊಳಗಿರುವ ವಿಷಬಿಂದುವಿನಂತೆ ಸತ್ಯಾಗ್ರಹವನ್ನು ಕೆಡಿಸಿಬಿಡುವುದು. ಅವರು ವಿನಯವರ್ತನೆಯ ಪಾಠವನ್ನು ನಾನು ನಿರೀಕ್ಷಿಸಿದಷ್ಟು ಚೆನ್ನಾಗಿ ಕಲಿತುಕೊಂಡಿರಲಿಲ್ಲವೆಂದು ನನಗೆ ಆಮೇಲೆ ಗೋಚರಕ್ಕೆ ಬಂದಿತು ವಿನಯವೇ ಸತ್ಯಾಗ್ರಹದ ಅತ್ಯಂತ ಕಠಿಣ ಅಂಶವೆಂದು ನನಗೆ ಅನುಭವದಿಂದ ಮಂದಟ್ಟಾಗಿದೆ. ಇಲ್ಲಿ ವಿನಯವೆಂದರೆ ಇದಿರುಪಕ್ಷದವರಿಗೆ ಒಳಿತನ್ನೆಸಗಬೇಕೆಂಬ ಆಸೆಯೂ ನೈಜ ಮಾಧುರ್ಯವೂ ಅಲ್ಲದೆ ಸಮಯಾನುಕೂಲಕ್ಕಾಗಿ ಅಭ್ಯಾಸಮಾಡಿದ ಕೇವಲ ಹೊರಗಣ ಮದುನುಡಿಯಲ್ಲ ಇವು ಸತ್ಯಾಗ್ರಹಿಯ ಪ್ರತಿಯೊಂದು ಕಾರ್ಯದಲ್ಲಿಯೂ ರೂಪುಗೊಳ್ಳಬೇಕು.

ಮೊದಲು ಜನರು ಬಹು ಧೈರ್ಯದಿಂದ ನಡೆದರೂ ಸರಕಾರದವರು ಪ್ರಬಲವಾಗಿ ದಂಡಿಸಲು ಇಷ್ಟವುಳ್ಳವರಂತೆ ಕಾಣಲಿಲ್ಲ ಆದರೆ ಜನರ ಮನಸ್ಸ್ಥೈರ್ಯವು ಕದಲದಿರುವಂತಿದ್ದುದನ್ನು ಕಂಡು ಸರಕಾರವು ಉಗ್ರತರವಾದ ದಂಡನೆಯನ್ನು ಪ್ರಾರಂಭಮಾಡಿತು. ಜಫ್ತಿ ಅಧಿಕಾರಿಗಳು ಜನರ ದನಕರುಗಳನ್ನು ಮಾರಿದುದಲ್ಲದೆ ತಮ್ಮ ಕೈಗೆ ಸಿಕ್ಕಿದ ಚರಸ್ವತ್ತುಗಳನ್ನೆಲ್ಲಾ ಬಾಚಿಕೊಂಡರು. ಜುಲ್ಮಾನೆಯ ನೋಟೀಸುಗಳನ್ನು ಜಾರಿಮಾಡಿದರು. ಕೆಲವು ಕಡೆ ಬೆಳೆದಿದ್ದ ಪೈರನ್ನು ಜಫ್ತಿಮಾಡಿದರು. ಇದರಿಂದ ರೈತರು ಧೈರ್ಯಗೆಟ್ಟು ಅವರಲ್ಲಿ ಕೆಲವರು ತಮ್ಮ ಬಾಕಿಯನ್ನು

ಸಲ್ಲಿಸಿದರು , ಇತರರು ಅಧಿಕಾರಿಗಳು ತಮ್ಮ ಚರಸ್ವತ್ತುಗಳನ್ನು ಜಫ್ತಿ ಮಾಡಿ ಬಾಕಿಯನ್ನು ವಸೂಲುಮಾಡಿಕೊಳ್ಳುವಂತೆ ತಮ್ಮ ಸಾಮಾನುಗಳು ಅಧಿಕಾರಿಗಳ ಕೈಗೆ ಸಿಕ್ಕುವಂತೆ ಇಡಲು ಇಚ್ಛಿಸಿದರು. ಇನ್ನೊಂದು ಕಡೆಯಾದರೋ ಕೆಲವರು ಕಟ್ಟಕಡೆಯವರೆಗೂ ಹೋರಾಡಲು ಸಿದ್ಧರಾಗಿದ್ದರು

ಈ ಘಟನೆಗಳು ನಡೆಯುತ್ತಿರಲು ಶ್ರೀ. ಶಂಕರಲಾಲ ಪರೀಖರ ರೈತರಲ್ಲೊಬ್ಬನು ತಾನು ಉಳುತ್ತಿದ್ದ ಭೂಮಿಯ ಕಂದಾಯವನ್ನು ಕೊಟ್ಟುಬಿಟ್ಟನು. ಇದರಿಂದ ಕಲಕಲವೆದ್ದಿತು. ಶಂಕರಲಾಲ ಪರೀಖರು ಆ ಭೂಮಿಯನ್ನು ಧರ್ಮಕಾರ್ಯಕ್ಕಾಗಿ ದಾನವಿತ್ತು ತಮ್ಮ ರೈತನು ಮಾಡಿದ ತಪ್ಪನ್ನು ಒಡನೆಯೇ ತಿದ್ದಿದರು. ಹೀಗೆ ಅವರು ತಮ್ಮ ಮಾನವನ್ನು ರಕ್ಷಿಸಿಕೊಂಡುದಲ್ಲದೆ ಇತರರಿಗೂ ಒಳ್ಳೆಯ ಮೇಲ್ಪಂಕ್ತಿಯನ್ನು ಹಾಕಿದರು.

ದಿಗಿಲುಗೊಂಡಿದ್ದವರ ಎದೆಯನ್ನು ಕಲ್ಲುಮಾಡುವುದಕ್ಕಾಗಿ ನಾನು ಜನರಿಗೆ ಅವರು ಮೋಹನಲಾಲ್ ಪಂಡ್ಯಾರವರ ಮುಂದಾಳುತನದಲ್ಲಿ ಒಂದು ಹೊಲದಲ್ಲಿನ ನೀರುಳ್ಳಿ ಪೈರನ್ನು ಕೀಳಬೇಕೆಂದು ಸಲಹೆ ಕೊಟ್ಟೆನು. ನನ್ನ ಅಭಿಪ್ರಾಯದಲ್ಲಿ ಆ ಭೂಮಿಯನ್ನು ಜಫ್ತಿಮಾಡಿದ್ದುದು ಅನ್ಯಾಯವಾಗಿದ್ದಿತು. ಇದನ್ನು ನಾನು ಕಾನೂನಿನ ಸವಿನಯ ಭಂಗವೆಂದೆಣಿಸಲಿಲ್ಲ. ಒಂದು ವೇಳೆ ಹಾಗಾಗಿದ್ದರೂ ಬೆಳೆದ ಪೈರುಗಳನ್ನು ಹೀಗೆ ಜಫ್ತಿಮಾಡಿರುವುದು ಅಕ್ಷರಶಃ ಕಾನೂನನ್ನನುಸರಿಸಿದ್ದರೂ ನೈತಿಕ ದೃಷ್ಟಿಯಿಂದ ಅದು ತಪ್ಪೆಂದೂ ಅದು ಲೂಟಿಯೇ ಹೊರತು ಬೇರೆಯಲ್ಲವೆಂದೂ ಆದುದರಿಂದ ಜಫ್ತಿಯ ಅಪ್ಪಣೆಯನ್ನು ಲೆಕ್ಕಿಸದೆ ನೀರುಳ್ಳಿಯನ್ನು ಕೀಳುವುದು ಜನರ ಧರ್ಮವೆಂದೂ ನಾನು ಸೂಚಿಸಿದೆನು. ಈ ರೀತಿಯ ಕಾಯಿದೆಯ ಭಂಗದಿಂದ ತಪ್ಪದೆ ಫಲಿಸುವ ಕಾರಾಗೃಹವಾಸವನ್ನಾಗಲೀ ಜುಲ್ಮಾನೆಯನ್ನಾಗಲೀ ಜನರು ತಾವಾಗಿಯೇ ಪಡೆಯುವ ಪಾಠವನ್ನು ಕಲಿಯಲು ಇದು ಸುಸಂಧಿಯಾಗಿದ್ದಿತು. ಶ್ರೀ. ಮೋಹನಲಾಲ ಪಂಡ್ಯರಿಗಂತು ಇಂತಹ ಅನುಭವವು ಅತ್ಯಾದರದ ವಿಷಯವಾಗಿ

ದ್ದಿತು. ಸತ್ಯಾಗ್ರಹದ ತತ್ವಕ್ಕನುಸಾರವಾಗಿ ನಡೆಸಿದ ಯಾವುದಾದರೊಂದು ಕಾರ್ಯಕ್ಕಾಗಿ ಯಾರಾದರೂ ಸೆರೆಮನೆಯ ಶಿಕ್ಷೆಯನ್ನನುಭವಿಸದೆ ಈ ಹೋರಾಟವು ಕಡೆಗಾಣುವುದು ಅವರಿಗೆ ರುಚಿಕರವಾಗಿರಲಿಲ್ಲ. ಆದುದರಿಂದ ಅವರು ತಾವೇ ಹೊಲದಿಂದ ನೀರುಳ್ಳಿಯನ್ನು ಸಾಗಿಸುವೆವೆಂದು ಮುಂದೆಬಂದರು ಈ ಕೆಲಸದಲ್ಲಿ ಏಳೆಂಟು ಮಂದಿ ಮಿತ್ರರು ಅವರೊಡನೆ ಸೇರಿದರು.

ಸರಕಾರದವರು ಇವರನ್ನು ಸುಮ್ಮನೆ ಬಿಟ್ಟುಬಿಡುವುದೆಂತು? ಶ್ರೀ ಮೋಹನಲಾಲ ಮತ್ತು ಇವರ ಮಿತ್ರರನ್ನು ಸರಕಾರದವರು ಹಿಡಿದುದರಿಂದ ಜನರ ಉತ್ಸಾಹವೇರಿತು. ಸೆರೆಮನೆಯ ದಿಗಿಲು ಹಾರಿಹೋದ ಮೇಲೆ ದಂಡನೆಯ ಉಗ್ರತೆಯು ಹೆಚ್ಚಿದಷ್ಟೂ ಜನರ ಧೈರ್ಯವೂ ಉತ್ಸಾಹವೂ ವರ್ಧಿಸುತ್ತವೆ. ವಿಚಾರಣೆಯದಿನ ಜನರು ತಂಡತಂಡವಾಗಿ ನ್ಯಾಯಸ್ಥಾನವನ್ನು ಮುತ್ತಿದರು ಪಂಡ್ಯರೂ ಅವರಜೊತೆಗಾರರೂ ತಪ್ಪಿತಸ್ಥರೆಂದು ನಿರ್ಣಯವಾಗಿ ಅವರಿಗ ಅಲ್ಪಕಾಲ ಕಾರಾಗೃಹವಾಸದ ಶಿಕ್ಷೆಯನ್ನು ಕೊಟ್ಟರು. ನೀರುಳ್ಳಿಯನ್ನು ಸಾಗಿಸಿದುದು ಪೀನಲ್‌ಕೋಡಿನ 'ಕಳವು' ಎಂಬ ಅಪರಾಧದ ಲಕ್ಷಣಗಳನ್ನು ಹೊಂದಿಲ್ಲದುದರಿಂದ ನ್ಯಾಯಾಧೀಶರ ತೀರ್ಮಾನವು ತಪ್ಪೆಂದು ನಾನು ಅಭಿಪ್ರಾಯಪಟ್ಟೆನು ಆದರೆ ನ್ಯಾಯಸ್ಥಾನಗಳನ್ನು ಸಾಧ್ಯವಾದ ಮಟ್ಟಿಗೆ ವರ್ಜಿಸುವುದುದೇ ನಮ್ಮ ನೀತಿಪದ್ಧತಿಯಾಗಿದ್ದುದರಿಂದ ನಾವು ಈ ತೀರ್ಮಾನದಮೇಲೆ 'ಅಪ್ಪೀಲು' ಮಾಡಲಿಲ್ಲ

ಈ 'ಅಪರಾಧಿ'ಗಳನ್ನು ಜನರು ಮೆರವಣಿಗೆ ಮಾಡಿಕೊಂಡು ಸೆರೆಮನೆಗೆ ಕರೆದುಕೊಂಡು ಹೋದರು ಆ ದಿನ ಶ್ರೀ ಮೋಹನಲಾಲ್ ಪಂಡ್ಯರು ಜನರಿಂದ 'ನೀರುಳ್ಳಿಯ ಕಳ್ಳ' ಎಂಬ ಹೆಮ್ಮೆಯಬಿರುದನ್ನು ಗಳಿಸಿದರು. ಆ ಸನ್ಮಾನವು ಅವರಿಗೆ ಇಂದೂ ನಡೆಯುತ್ತಿದೆ.

ಖೇಡಾಸತ್ಯಾಗ್ರಹದ ಪರಿಸಮಾಪ್ತಿಯನ್ನು ಮುಂದಿನ ಅಧ್ಯಾಯದಲ್ಲಿ ವಿವರಿಸುತ್ತೇನೆ.

# ೨೫

## ಖೇಡಾ ಸತ್ಯಾಗ್ರಹವು ಮುಗಿದುದು

ಸತ್ಯಾಗ್ರಹಕದನದ ಅಂತ್ಯವು ಅನಿರೀಕ್ಷಿತವಾಗಿ ಒದಗಿತು. ಜನರು ಬಸವಳಿದುಬಿಟ್ಟಿದ್ದರೆಂಬುದು ಸ್ಪಷ್ಟವಾಗಿದ್ದಿತು. ಅತಿ ದೃಢರಾಗಿದ್ದವರು ನುಗ್ಗಿ ತೀರ ಹಾಳಾಗಿ ಹೋಗುವುದಕ್ಕೆ ಅವರನ್ನು ಬಿಡಲು ನಾನು ಹಿಂಜರಿದೆನು. ಹೋರಾಟವನ್ನು ನಿಲ್ಲಿಸಲು ಸತ್ಯಾಗ್ರಹಿಯು ಒಪ್ಪಿಗೆಗೆ ಬರುವ ಯಾವುದಾದರೊಂದು ಒಳಿತಾದ ಮಾರ್ಗವನ್ನು ನಾನು ಹುಡುಕುತ್ತಿದ್ದೆನು ಇಂತಹದೊಂದು ಕೇವಲ ಅನಿರೀಕ್ಷಿತವಾಗಿ ಲಭಿಸಿತು. ನಡಿಯಾದ್ ತಾಲ್ಲೂಕಿನ ಅಮಲ್ದಾರರು ಧನವಂತರಾದ ರೈತರು ಹಣವನ್ನು ಕೊಟ್ಟರೆ ಬಡರೈತರವನ್ನು ನಿಲ್ಲಿಸುವುದಾಗಿ ನನಗೆ ಹೇಳಿಕಳುಹಿಸಿದರು ಇದನ್ನು ನನಗೆ ಬರೆದುಕೊಡಬೇಕೆಂದು ಕೇಳಲು ಅವರು ಹಾಗೆಯೇ ಮಾಡಿದರು ಆದರೆ ಅಮಲ್ದಾರರ ಜವಾಬ್ದಾರಿಯು ತಮ್ಮ ತಾಲ್ಲೂಕಿಗೆ ಮಾತ್ರ ಅನ್ವಯಿಸುತ್ತಿದ್ದುದರಿಂದಲೂ ಜಿಲ್ಲಾಧಿಕಾರಿಗಳೇ ಆ ಜಿಲ್ಲೆಯ ಎಲ್ಲಾ ಭಾಗಗಳ ಸಂಬಂಧವಾಗಿ ಮಾತುಕೊಡುವ ಅಧಿಕಾರವುಳ್ಳವರಾಗಿದ್ದುದರಿಂದಲೂ ನಾನು ಮೇಲೆ ತಿಳಿಸಿದ ಏರ್ಪಾಟು ಜಿಲ್ಲೆಗೆಲ್ಲಾ ಅನ್ವಯಿಸುವುದೆ ಇಲ್ಲವೆ ಎಂದು ವಿಚಾರಿಸಿ ಬರೆದೆನು. ಅದಕ್ಕೆ ಅವರು ಆ ರೀತಿಯ ಆಜ್ಞೆಯು ಎಲ್ಲಾ ಕಡೆಗೂ ಆಗಲೇ ಹೋಗಿದ್ದಿತೆಂದು ಉತ್ತರವಿತ್ತರು ನನಗೆ ಇದು ಗೊತ್ತಿರಲಿಲ್ಲ ಆದರೆ ಅದು ನಿಜವಾಗಿದ್ದರೆ ಜನರ ಪ್ರತಿಜ್ಞೆಯು ಪೂರ್ಣವಾಗಿದ್ದಿತು ನಮ್ಮ ಪ್ರತಿಜ್ಞೆಯ ಉದ್ದೇಶವೂ ಇದೇ ಆಗಿದ್ದಿತೆಂದು ವಾಚಕರಿಗೆ ನೆನಪಿರಬಹುದು ಆದುದರಿಂದ ನಾವು ಈ ಆಜ್ಞೆಯಿಂದ ನಮಗೆ ತೃಪ್ತಿಯಾಯಿತೆಂದು ವ್ಯಕ್ತಪಡಿಸಿದೆವು.

ಆದರೆ ಈ ಸಮಾಪ್ತಿಯಿಂದ ನನಗೆ ಸಂತೋಷವೇನೂ ಉಂಟಾಗಲಿಲ್ಲ. ಏಕೆಂದರೆ ಪ್ರತಿಯೊಂದು ಸತ್ಯಾಗ್ರಹಯುದ್ಧದ ಕೊನೆಯಲ್ಲಿಯೂ

ಇರಬೇಕಾದ ಮಾಧುರ್ಯವು ಇದರಲ್ಲಿರಲಿಲ್ಲ. ಜಿಲ್ಲಾಧಿಕಾರಿಗಳು ತಾವು ಯಾವರೀತಿಯ ಸಂಧಿಯನ್ನೂ ನಡೆಸದವರಂತೆ ವರ್ತಿಸಿದರು. ಬಡವರಿಂದ ಕಂದಾಯವನ್ನು ಕೂಡಿಸುವುದಿಲ್ಲವೆಂದು ಆಜ್ಞೆಯಾಗಿದ್ದಿತು. ಆದರೆ ಇದರಿಂದ ಅತ್ಯಲ್ಪವುಂದಿಗೆ ಮಾತ್ರ ಅನುಕೂಲವಾಯಿತು. ಯಾರು ಬಡವರೆಂಬುದನ್ನು ನಿರ್ಧರಿಸುವುದು ಜನರ ಅಧಿಕಾರವಾಗಿದ್ದಿತು. ಆದರೆ ಅವರು ಇದನ್ನು ನಡೆಸಲಾಗಲಿಲ್ಲ ಅದನ್ನು ನಡೆಸುವ ಚೈತನ್ಯವು ಅವರಲ್ಲಿಲ್ಲವೆಂದು ನಾನು ದುಃಖಿತನಾದೆನು. ಆದುದರಿಂದ ಈ ಯುದ್ಧದ ಸಮಾಪ್ತಿಯು ಸತ್ಯಾಗ್ರಹದ ವಿಜಯವೆಂದು ಜನರು ವಿಜೃಂಭಣೆ ಪಟ್ಟರಾದರೂ ನಾನು ಅದರಲ್ಲಿ ಉತ್ಸಾಹಗೊಳ್ಳುವಂತಿರಲಿಲ್ಲ ಏಕೆಂದರೆ ಪೂರ್ಣವಿಜಯದ ಮುಖ್ಯಾಂಶಗಳು ಇದರಲ್ಲಿರಲಿಲ್ಲ

ಸತ್ಯಾಗ್ರಹಿಗಳು ಆರಂಭದಲ್ಲಿದ್ದುದಕ್ಕಿಂತ ಅಂತ್ಯದಲ್ಲಿ ಹೆಚ್ಚು ಶಕ್ತಿವಂತರೂ ತೇಜೋವಂತರೂ ಆಗಿ ಕಂಡು ಒಂದರೆ ಅಂತಹ ಸತ್ಯಾಗ್ರಹ ಯುದ್ಧವು ಯೋಗ್ಯವಾದುದೆಂದು ಹೇಳಬಹುದು

ಹೀಗಾದರೂ ಇದರಿಂದ ಅಪ್ರತ್ಯಕ್ಷವಾದ ಸತ್ಪರಿಣಾಮಗಳಾಗದೆ ಇರಲಿಲ್ಲ ಇವು ಈಗ ನಮ್ಮ ಗೋಚರಕ್ಕೆ ಬರುತ್ತಿವೆ ಇವುಗಳ ಫಲವನ್ನು ನಾವು ಇಂದು ಸವಿಯುತ್ತಿದ್ದೇವೆ ಖೇಡಾ ಸತ್ಯಾಗ್ರಹವೇ ಗುಜರಾತಿನ ರೈತರ ಜಾಗ್ರುತಿಯ ಉದಯದ ಚಿಹ್ನೆ, ಅದೇ ಅವರ ನಿಜವಾದ ರಾಜಕೀಯ ಶಿಕ್ಷಣದ ಅಕ್ಷರಾಭ್ಯಾಸ

ಡಾ. ಬೆಸಂಟರ 'ಹೋಮ್‌ರೂಲ್' ಚಳಿವಳಿಯು ರೈತರನ್ನು ಮುಟ್ಟಿದ್ದಿತೆಂಬುದೇನೋ ನಿಜ ಆದರೆ ಖೇಡಾಸತ್ಯಾಗ್ರಹವೇ ಸುಶಿಕ್ಷಿತರಾದ ಸಾರ್ವಜನಿಕ ಸೇವಕರು ರೈತರ ಜೀವನದೊಂದಿಗೆ ಸಂಪರ್ಕವನ್ನು ಬೆಳೆಸುವಂತೆ ಮಾಡಿದುದು. ಇದರಿಂದ ಈ ರಾಷ್ಟ್ರಸೇವಕರು ತಾವೂ ರೈತರೂ ಒಂದೇ ಎಂಬುದನ್ನು ಕಲಿತುಕೊಂಡರು ತಮ್ಮ ಕಾರ್ಯಕ್ಕೆ ಯೋಗ್ಯವಾದ ಕ್ಷೇತ್ರವು ಅವರಿಗೆ ದೊರಕಿತು. ಅವರ ತ್ಯಾಗಶಕ್ತಿಯು ಹೆಚ್ಚಿತು ಶ್ರೀ ವಲ್ಲಭಭಾಯಿಯು ಈ ಕದನದಲ್ಲಿ ತಮ್ಮನ್ನು ತಾವು

ಅರಿತುಕೊಂಡರೆಂಬುದೇನೂ ಅಲ್ಪಲಾಭವಲ್ಲ. ಕಳೆದವರ್ಷ ಗುಜರಾತಿನಲ್ಲಿ ಅತಿವೃಷ್ಟಿಯಿಂದ ಅನಾಹುತವಾದಾಗ ಜನರಿಗೆ ಸಹಾಯವೊದಗಿಸಿದಾಗಲೂ ಈ ವರ್ಷ ಬಾರ್ದೋಲೀ ಸತ್ಯಾಗ್ರಹವು ನಡೆದಾಗಲೂ ಇದರ ಆಳತೆಯು ನಮಗೆ ಗೊತ್ತಾಯಿತು ಗುಜರಾತಿನ ಜನಜೀವನದಲ್ಲಿ ಹೊಸ ಕಳೆಯೂ ಹುರುಪೂ ತುಂಬಿದುವು ಅಲ್ಲಿನ ರೈತನಿಗೆ ತಾನು ಎಂದೂ ಮರೆಯದಂತೆ ತನ್ನ ಶಕ್ತಿಯ ಅರಿವುಂಟಾಯಿತು ತಮ್ಮ ಮುಕ್ತಿಯು ತಮ್ಮ ಕೈಯ್ಯಲ್ಲಿಯೇ ಇದೆ, ಮತ್ತು ತಮಗಿರುವ ಸಹನಶಕ್ತಿಯನ್ನೂ ತ್ಯಾಗಶಕ್ತಿಯನ್ನೂ ಹೊಂದಿಕೊಂಡಿದೆ, ಎಂಬ ಪಾಠವು ಎಂದೂ ಅಳಿಸಿ ಹೋಗದಂತೆ ಜನರ ಮನಸ್ಸಿನಲ್ಲಿ ನಿಂತಿತು ಖೇಡಾಕದನದ ಮೂಲಕ ಸತ್ಯಾಗ್ರಹವು ಗುಜರಾತಿನ ನೆಲದಲ್ಲಿ ದೃಢವಾಗಿ ಬೇರೂರಿತು.

ಹೀಗೆ ನನಗೆ ಸತ್ಯಾಗ್ರಹದ ಪರಿಸಮಾಪ್ತಿಯಲ್ಲಿ ಸಂತಸಗೊಳ್ಳಲು ಏನೂ ಕಾಣಬರಲಿಲ್ಲವಾದರೂ ಖೇಡಾ ರೈತರು ಅತ್ಯುತ್ಸಾಹಗೊಂಡರು ಏಕೆಂದರೆ ತಮ್ಮ ಪ್ರಯತ್ನಕ್ಕೆ ತಕ್ಕ ಫಲವು ದೊರಕಿತೆಂದು ಅವರಿಗೆ ಗೊತ್ತಾಗಿದ್ದಿತು, ಮತ್ತು ತಮ್ಮ ದುಃಖನಿವಾರಣೆಗೆ ನಿಜವಾದ ಮತ್ತು ರಾಮಬಾಣದಂತಿರುವ ಮಾರ್ಗವನ್ನು ಕಂಡುಹಿಡಿದಿದ್ದರು ಅವರ ಉತ್ಸಾಹಕ್ಕೆ ಈ ಅರಿವು ಸಾಕಾದಷ್ಟು ಕಾರಣವಾಗಿದ್ದಿತು.

ಆದರೂ ಖೇಡಾ ರೈತರು ಸತ್ಯಾಗ್ರಹದ ಅಂತಸ್ಸ್ವರೂಪವನ್ನು ಪೂರ್ತಿ ತಿಳಿದುಕೊಂಡಿರಲಿಲ್ಲ ಇದರ ಕಟು ಅನುಭವವು ಮುಂದೆ ಅವರಿಗುಂಟಾಯಿತು ಇದು ಮುಂದಿನ ಅಧ್ಯಾಯಗಳಲ್ಲಿ ವಿವರಿಸಲ್ಪಡುವುದು.



# ಐಕ್ಯಕ್ಕಾಗಿ ಪ್ರಬಲಾಪೇಕ್ಷೆ

ಖೇಡಾಸತ್ಯಾಗ್ರಹವನ್ನು ಹೂಡಿದಾಗ ಯುರೋಪಿನ ಘೋರ ಯುದ್ಧವು ಇನ್ನೂ ನಡೆಯುತ್ತಾ ಇದ್ದಿತು. ಈಗ ಗಂಡಾಂತರ ಒದಗಿದ್ದಿತು. ವೈಸ್‌ರಾಯರು ದಿಲ್ಲಿಯಲ್ಲಿ ಯುದ್ಧಸಭೆಯನ್ನೇರ್ಪಡಿಸಿ ಅದಕ್ಕೆ ಅನೇಕ ಮುಂದಾಳುಗಳನ್ನು ಕರೆದಿದ್ದರು ನನ್ನನ್ನೂ ಆ ಸಭೆಗೆ ಹೋಗಲು ಒತ್ತಾಯಪಡಿಸಿದ್ದರು ವೈಸ್‌ರಾಯರಾದ ಲಾರ್ಡ್ ಛೆಮ್ಸ್‌ಫರ್ಡರೊಡನೆ ನನಗಿದ್ದ ಸ್ನೇಹಸಂಬಂಧವನ್ನು ನಾನು ಹಿಂದೆಯೇ ತಿಳಿಸಿದ್ದೇನೆ.

ಆಮಂತ್ರಣವನ್ನು ಸ್ವೀಕರಿಸಿ ನಾನು ದಿಲ್ಲಿಗೆ ಹೋದೆನು. ಆದರೆ ಸಭೆಯಲ್ಲಿ ಸೇರಲು ನನಗೆ ಅಭ್ಯಂತರಗಳಿದ್ದುವು ಅಲೀ ಸಹೋದರರಂತಹ ನಾಯಕರನ್ನು ಸಭೆಗೆ ಕರೆಯದಿದ್ದುದೇ ಅವುಗಳಲ್ಲಿ ಮುಖ್ಯವಾದುದಾಗಿದ್ದಿತು. ಅವರು ಆಗ ಸೆರೆಮನೆಯಲ್ಲಿದ್ದರು. ನಾನು ಅವರ ವಿಷಯವಾಗಿ ಹೆಚ್ಚು ಕೇಳಿದ್ದರೂ ಅವರನ್ನು ಒಂದೆರಡು ಬಾರಿ ಮಾತ್ರ ನೋಡಿದ್ದೆನು ಪ್ರತಿಯೊಬ್ಬರೂ ಅವರ ರಾಷ್ಟ್ರಸೇವೆಯನ್ನೂ ಧೈರ್ಯವನ್ನೂ ಸ್ತುತಿಸಿದ್ದರು. ನನಗೆ ಹಕೀಮ ಸಾಹೇಬರ ನಿಕಟಪರಿಚಯವು ಆಗ ಇನ್ನೂ ಉಂಟಾಗಿರಲಿಲ್ಲ. ಆದರೆ ದಿವಂ. ಅಧ್ಯಾಪಕ ರುದ್ರರೂ ದೀನಬಂಧು ಆಂಡ್ರೂಸರೂ ಅವರನ್ನು ಬಹುವಾಗಿ ಪ್ರಶಂಸಿಸಿದ್ದರು. ಕಲ್ಕತ್ತಾದಲ್ಲಿ ನೆರೆದ 'ಮುಸ್ಲಿಂ ಲೀಗ್' (ಮುಸಲ್ಮಾನರ ಮಹಾಸಭೆ) ನ ಅಧಿವೇಶನದಲ್ಲಿ ನಾನು ಎಂ ಶ್ವೇಬ್ ಖುರೇಷಿಯವರನ್ನೂ ಬ್ಯಾರಿಸ್ಟರ್ ಖ್ವಾಜಾರವರನ್ನೂ ಕಂಡಿದ್ದೆನು. ಡಾ ಅನ್ಸಾರಿ ಮತ್ತು ಡಾ. ಅಬ್ದುರ್ ರಹಮಾನರ ಪರಿಚಯವೂ ನನಗೆ ಆಗಿದ್ದಿತು. ನಾನು ಮುಸಲ್ಮಾನ ಸಜ್ಜನರ ಮೈತ್ರಿಯನ್ನರಸುತ್ತಿದ್ದೆನು ಈವರಲ್ಲಿ ಅತ್ಯಂತ ಪರಿಶುದ್ಧರೂ ದೇಶಭಕ್ತರೂ ಆದವರ ಸಂಪರ್ಕದ ಮೂಲಕ ಮುಸಲ್ಮಾನರ

ಮನಸ್ಸನ್ನರಿತುಕೊಳ್ಳಲು ನನಗೆ ತೀವ್ರವಾದ ಇಚ್ಛೆಯಿದ್ದಿತು. ಆದುದರಿಂದ ಅವರೊಡನೆ ಗಾಢಸಂಬಂಧವನ್ನು ಬೆಳೆಸಲೋಸುಗ ನಾನು ಅವರನ್ನನ್ನು ಕರೆದೊಯ್ದಲ್ಲಿಗೆ ಹೋಗುತ್ತಿದ್ದೆನು. ನನಗೆ ಒತ್ತಾಯವೇ ಬೇಕಾಗಿರಲಿಲ್ಲ.

ಹಿಂದೂಗಳಿಗೂ ಮುಸಲ್ಮಾನರಿಗೂ ಅಚ್ಚವಾದ ಗೆಳೆತನವೇನೂ ಇರಲಿಲ್ಲವೆಂಬುದು ನನಗೆ ದಕ್ಷಿಣ ಆಫ್ರಿಕದಲ್ಲಿ ಸ್ವಲ್ಪಕಾಲದಲ್ಲಿಯೇ ಮನವರಿಕೆಯಾಗಿದ್ದಿತು. ಐಕ್ಯದ ದಾರಿಯಲ್ಲಿದ್ದ ಅಡಚಣೆಗಳನ್ನು ನಿರ್ಮೂಲ ಮಾಡಲು ನಾನು ಒಂದು ಅವಕಾಶವನ್ನೂ ಕಳೆದುಕೊಳ್ಳುತ್ತಿರಲಿಲ್ಲ. ಯಾರನ್ನಾಗಲಿ ಸ್ತುತಿಸಿ ಅಥವಾ ಸ್ವಗೌರವವನ್ನು ಕಳೆದುಕೊಂಡು ಇತರರನ್ನು ಮೆಚ್ಚಿಸುವುದು ನನ್ನ ಸ್ವಭಾವದಲ್ಲಿರಲಿಲ್ಲ ಆದರೆ ನನ್ನ ಅಹಿಂಸಾತತ್ವಕ್ಕೆ ಈ ಹಿಂದೂಮುಸಲ್ಮಾನ ಐಕ್ಯತೆಯ ಪ್ರಶ್ನೆಯೇ ಅತಿ ಕಠಿಣವಾದ ಒರೆಗಲ್ಲಾಗುವುದೆಂದೂ ಅಹಿಂಸಾಪ್ರಯೋಗಗಳಿಗೆ ಅದೇ ಅತ್ಯಂತ ವಿಶಾಲಕ್ಷೇತ್ರವೆಂದೂ ದಕ್ಷಿಣ ಆಫ್ರಿಕದಲ್ಲಿ ಒದಗಿದ ಅನುಭವಗಳಿಂದ ನನ್ನ ಮನಸ್ಸಿಗೆ ದೃಢವಾಗಿದ್ದಿತು ಇಂದು ಕೂಡ ಇದೇ ನನ್ನ ಅಭಿಪ್ರಾಯ. ದೇವರು ನನ್ನನ್ನು ಪರೀಕ್ಷಿಸುತ್ತಿರುವನೆಂದು ನನ್ನ ಜೀವನದ ಪ್ರತಿಕ್ಷಣವೂ ನನಗೆ ಗೊತ್ತಾಗುತ್ತದೆ

ನಾನು ದಕ್ಷಿಣ ಆಫ್ರಿಕದಿಂದ ಹಿಂತಿರುಗಿದಾಗ ಈ ವಿಷಯದಲ್ಲಿ ಇಂತಹ ದೃಢವಾದ ಅಭಿಪ್ರಾಯಗಳನ್ನಿಟ್ಟುಕೊಂಡಿದ್ದುದರಿಂದ ಅಲೀ ಭ್ರಾತೃಗಳೊಡನೆ ಉಂಟಾದ ಸಂಬಂಧವನ್ನು ನಾನು ಅಮೂಲ್ಯವೆಂದೆಣಿಸಿದೆನು. ಆದರೆ ಇನ್ನೂ ಹೆಚ್ಚಿನ ಮೈತ್ರಿಯು ಬೆಳೆಯುವುದಕ್ಕೆ ಮುಂಚೆಯೇ ಸರಕಾರದವರು ಅವರನ್ನು ಜನಸಂಪರ್ಕದಿಂದ ದೂರವಾಗಿಟ್ಟರು ಮೌಲಾನಾ ಮಹಮ್ಮದಲಿಯವರು ತಮಗೆ ಸೆರೆಮನೆಯ ಅಧಿಕಾರಿಗಳ ಅಪ್ಪಣೆ ದೊರೆತಾಗಲೆಲ್ಲಾ ನನಗೆ ಬೇತುಲದಿಂದಲೂ ಛಿಂದವಾಡಾದಿಂದಲೂ ಉದ್ದವಾದ ಕಾಗದಗಳನ್ನು ಬರೆಯುತ್ತಿದ್ದರು ಅಲೀಸಹೋದರರನ್ನು ನೋಡಲು ಅಪ್ಪಣೆ ಕೊಡಬೇಕೆಂದು ನಾನು ಸರಕಾರಕ್ಕೆ ಅರ್ಜಿ ಹಾಕಿದೆನು. ಆದರೆ ಅದು ನಿಷ್ಫಲವಾಯಿತು.

ಈ ಸಹೋದರರನ್ನು ಬಂಧಿಸಿದ ಮೇಲೆ ಕಲ್ಕತ್ತಾದಲ್ಲಿ ನೆರೆದ 'ಮುಸ್ಲಿಮ್ ಲೀಗ್' ಅಧಿವೇಶನಕ್ಕೆ ಮುಸಲ್ಮಾನ ಮಿತ್ರರು ನನ್ನನ್ನು ಕರೆದರು. ಮಾತನಾಡಬೇಕೆಂದು ನನ್ನನ್ನು ಕೇಳಲು ನಾನು ಅಲೀಭ್ರಾತೃ ಗಳನ್ನು ಸೆರೆಯಿಂದ ಬಿಡಿಸುವ ಕರ್ತವ್ಯವನ್ನು ಕುರಿತು ಭಾಷಣ ಮಾಡಿದೆನು. ಇದಾದ ಸ್ವಲ್ಪ ಕಾಲದಲ್ಲಿ ಈ ಮಿತ್ರರು ನನ್ನನ್ನು ಅಲೀಗಢದ ಮುಸ್ಲಿಮ್ ವಿದ್ಯಾಶಾಲೆಗೆ ಕರೆದುಕೊಂಡುಹೋದರು. ಅಲ್ಲಿನ ಯುವಕರಿಗೆ ನಾನು ದೇಶಸೇವೆಯಲ್ಲಿ ತೊಡಗಿದ ಫಕೀರರಾಗಿರಲು ಆಹ್ವಾನವಿತ್ತೆನು.

ಅನಂತರ ಅಲೀಭ್ರಾತೃಗಳ ಬಂಧವಿಮೋಚನೆಗಾಗಿ ಸರಕಾರದೊ ಡನೆ ಪತ್ರವ್ಯವಹಾರವನ್ನು ಆರಂಭಿಸಿದೆನು ಈ ಸಂಬಂಧವಾಗಿ ನಾನು ಖಿಲಾಫತ್ತಿನ ವಿಷಯದಲ್ಲಿ ಅಲೀ ಸಹೋದರರ ಅಭಿಪ್ರಾಯಗಳನ್ನೂ ಅವರು ನಡೆಸಿದ್ದ ಕೆಲಸಗಳನ್ನೂ ಪರಾಮರ್ಶಿಸಿದೆನು. ಮುಸಲ್ಮಾನ ಮಿತ್ರರೊಡನೆ ಅನೇಕವೇಳೆ ಚರ್ಚಿಸಿದೆನು. ನಾನು ಮುಸಲ್ಮಾನರಿಗೆ ನಿಜವಾದ ಮಿತ್ರನಾ ಗಬೇಕಾದರೆ ಅಲೀ ಸಹೋದರರ ಬಿಡುಗಡೆಗೂ ಖಿಲಾಫತ್ ಸಮಸ್ಯೆಯು ನ್ನು ನ್ಯಾಯವಾಗಿ ಪೂರಣ ಮಾಡುವುದಕ್ಕೂ ಸಾಧ್ಯವಾದ ಸಹಾಯವ ನ್ನೆಲ್ಲಾ ನಾನು ಮಾಡಬೇಕೆಂದು ನನಗೆ ತೋರಿತು. ಅವರು ಕೇಳುವುದ ರಲ್ಲಿ ನೀತಿವಿರುದ್ಧವಾದುದೇನೂ ಇಲ್ಲದಿದ್ದರೆ ಸಾಕು;ಆ ಪ್ರಶ್ನೆಯ ಸ್ವತಂ ತ್ರ ಗುಣದೋಷಗಳನ್ನೆಣಿಸುವುದು ನನಗಲ್ಲ. ಧರ್ಮಸಂಬಂಧವಾದ ವಿಷ ಯಗಳಲ್ಲಿ ಭಿನ್ನ ನಂಬಿಕೆಗಳಿರುತ್ತವೆ. ಪ್ರತಿಯೊಬ್ಬನಿಗೂ ತನ್ನ ನಂಬಿಕೆಯೇ ಪರಮೋತ್ತಮವಾದುದು ಪ್ರತಿಯೊಂದು ಧಾರ್ಮಿಕ ವಿಷಯದಲ್ಲಿಯೂ ಎಲ್ಲರಿಗೂ ಒಂದೇ ನಂಬಿಕೆಯಿದ್ದರೆ ಪ್ರಪಂಚದಲ್ಲೆಲ್ಲಾ ಒಂದೇ ಧರ್ಮವಿ ರುತ್ತಿದ್ದಿತು. ದಿನವು ಕಳೆದಂತೆಲ್ಲಾ ಖಿಲಾಫತ್ತಿನ ಸಂಬಂಧವಾಗಿ ಮುಸ ಲ್ಮಾನರು ಕೇಳುವುದು ಯಾವ ನೀತಿ ನಿಯಮಕ್ಕೂ ವಿರುದ್ಧವಲ್ಲವೆಂಬು ದಷ್ಟೇ ಅಲ್ಲದೆ ಅದು ನ್ಯಾಯವೆಂಬುದನ್ನು ಬ್ರಿಟಿಷ್ ಪ್ರಧಾನ ಮಂತ್ರಿ ಗಳೇ ಒಪ್ಪಿದ್ದರೆಂಬುದೂ ನನಗೆ ಗೊತ್ತಾಯಿತು. ಆದುದರಿಂದ ಪ್ರಧಾನ ಮಂತ್ರಿಗಳು ತಾವು ಕೊಟ್ಟ ಮಾತನ್ನು ನಡೆಸುವಂತೆ ಮಾಡಲು ನನ್ನ ಕೈಲಾದಮಟ್ಟಿಗೆ ನೆರವೀಯುವುದು ನನ್ನ ಕರ್ತವ್ಯವೆಂದು ತೋರಿತು. ಅವರು ಕೊಟ್ಟ ಮಾತು ಕೂಡ ಎಷ್ಟು ಸ್ಪಷ್ಟವಾಗಿದ್ದಿತೆಂದರೆ ಮುಸಲ್ಮಾ

ನರ ಕೇಳಿಕೆಯ ಗುಣದೋಷಗಳ ವಿಮರ್ಶೆಯು ಬೇಕಾಗಿದ್ದುದು ಕೇವಲ ನನ್ನ ಅಂತರಾತ್ಮನ ತೃಪ್ತಿಗಾಗಿಯೇ.

ಮಿತ್ರರೂ ವಿಮರ್ಶಕರೂ ಖಿಲಾಫತ್ ಪ್ರಶ್ನೆಯ ವಿಷಯವಾಗಿ ನನ್ನ ವರ್ತನೆಯನ್ನು ಖಂಡಿಸಿದ್ದಾರೆ. ಆದರೂ ನನ್ನ ಅಭಿಪ್ರಾಯವನ್ನು ಮಾರ್ಪಡಿಸಲಾಗಲಿ ಮುಸಲ್ಮಾನರೊಡನೆ ಸಹಕರಿಸಿದುದಕ್ಕೆ ವಿಷಾದ ಪಡಲಾಗಲಿ ನನಗೆ ಯಾವ ಕಾರಣವೂ ಇಲ್ಲವೆಂದು ತೋರುತ್ತದೆ. ಅಂತಹ ಸಂದರ್ಭವು ಪುನಃ ಒದಗಿದರೆ ನನ್ನ ವರ್ತನೆಯು ಹಿಂದಿನಂತೆಯೇ ಇರುತ್ತದೆ.

ಆದುದರಿಂದ ನಾನು ದಿಲ್ಲಿಗೆ ಹೋದಾಗ ಮುಸಲ್ಮಾನರ ಪಕ್ಷವನ್ನು ವೈಸರಾಯರ ಗಮನಕ್ಕೆ ತರಬೇಕೆಂದು ನನಗೆ ಪೂರ್ಣವಾದ ಉದ್ದೇಶವಿದ್ದಿತು. ಖಿಲಾಫತ್ ಪ್ರಶ್ನೆಯು ಆಮೇಲೆ ತಾಳಿದ ಸ್ವರೂಪವನ್ನು ಆಗ ಇನ್ನೂ ಹೊಂದಿರಲಿಲ್ಲ.

ಆದರೆ ದಿಲ್ಲಿಯನ್ನು ಸೇರುತ್ತಲೇ ನಾನು ಯುದ್ಧ ಸಭೆಯಲ್ಲಿ ಭಾಗಿಯಾಗುವುದರ ವಿಷಯವಾಗಿ ಇನ್ನೊಂದು ಅಡಚಣೆಯಿದ್ದಿತು. ದೀನಬಂಧು ಆಂಡ್ರ್ಯೂಸರು ನಾನು ಯುದ್ಧ ಸಭೆಯಲ್ಲಿ ಸೇರುವುದು ನೀತಿ ವಿರುದ್ಧವಲ್ಲವೆ ಎಂಬ ಪ್ರಶ್ನೆಯನ್ನು ತಂದೊಡ್ಡಿದರು. ಇಂಗ್ಲೆಂಡಿಗೂ ಇಟಲಿಗೂ ಮಧ್ಯೆ ನಡೆದಿದ್ದ ಗುಟ್ಟಾದ ಕೌಲುಗಳನ್ನು ಕುರಿತು ಆಂಗ್ಲ ಪತ್ರಿಕೆಗಳಲ್ಲಿ ಸಾಗಿದ ಚರ್ಚೆಯ ವಿಷಯವನ್ನು ಅವರು ನನಗೆ ತಿಳಿಸಿದರು. ಇಂಗ್ಲೆಂಡ್ ದೇಶವು ಇತರ ಐರೋಪ್ಯ ಸರಕಾರದೊಡನೆ ಗುಪ್ತ ಸಂಧಿಗಳನ್ನು ಮಾಡಿಕೊಂಡಿದ್ದರೆ ನಾನು ಈ ಸಭೆಯಲ್ಲಿ ಭಾಗಿಯಾಗುವುದೆಂತು? ಎಂದು ಆಂಡ್ರ್ಯೂಸರು ಕೇಳಿದರು. ಆದುದರಿಂದ ಸಭೆಗೆ ಹೋಗಲು ನನ್ನ ಸಂಕೋಚವನ್ನು ವಿವರಿಸಿ ನಾನು ಲಾರ್ಡ್ ಚೆಮ್ಸ್‌ಫರ್ಡರಿಗೆ ಪತ್ರ ಬರೆದೆನು. ಆ ಪ್ರಶ್ನೆಯನ್ನು ತಮ್ಮೊಡನೆ ಚರ್ಚಿಸಲು ಅವರು ನನಗೆ ಆಹ್ವಾನವಿತ್ತರು. ಅವರೊಡನೆಯೂ ಅವರ ಆಪ್ತ ಕಾರ್ಯದರ್ಶಿಗಳಾದ ಮಿ. ಮ್ಯಾಫಿಯವರೊಡನೆಯೂ ನಾನು ದೀರ್ಘವಾಗಿ ಚರ್ಚಿಸಿದೆನು. ಇದರ ಫಲವಾಗಿ ನಾನು ಸಭೆಗೆ ಬರಲು ಒಪ್ಪಿದೆನು.

ವೈಸ್‌ರಾಯರು ವಾದಿಸಿದುದು ಹೀಗೆನ್ನಬಹುದು:—"ಬ್ರಿಟಿಷ್ ಮಂತ್ರಿಕೂಟವು ಮಾಡುವುದೆಲ್ಲಾ ವೈಸರಾಯಿಗೆ ಗೊತ್ತೆಂದು ನೀವು ತಿಳಿದುಕೊಂಡಿಲ್ಲವಷ್ಟೆ! ಬ್ರಿಟಿಷ್ ಸರಕಾರವು ಎಂದೆಂದಿಗೂ ತಪ್ಪು ಮಾಡಲಾರದೆಂದು ನಾನಾಗಲಿ ಇನ್ನಾರಾಗಲಿ ಹೇಳುವುದಿಲ್ಲ. ಆದರೆ ಅಧಿಕಾರಾಧಿಪತ್ಯವು ಒಟ್ಟಿನಲ್ಲಿ ಒಳಿತನ್ನೇ ಮಾಡಿದೆ ಎಂದು ನೀವು ಒಪ್ಪುವುದಾದರೆ, ಬ್ರಿಟಿಷ್ ಸಂಬಂಧದಿಂದ ಒಟ್ಟಿನಲ್ಲಿ ಹಿಂದೂಸ್ಥಾನಕ್ಕೆ ಲಾಭವೇ ಆಗಿದೆಯೆಂದು ನೀವು ನಂಬಿರುವುದಾದರೆ, ಸಾಮ್ರಾಜ್ಯಕ್ಕೆ ಸಂಕಟವೊದಗಿರುವಾಗ ಅದಕ್ಕೆ ಸಹಾಯ ಮಾಡುವುದು ಪ್ರತಿಯೊಬ್ಬ ಭಾರತೀಯನ ಕರ್ತವ್ಯವೆಂದು ನೀವು ಒಪ್ಪುವುದಿಲ್ಲವೆ? ಆಂಗ್ಲ ಪತ್ರಿಕೆಗಳು ಒಳಒಪ್ಪಂದಗಳ ವಿಷಯವಾಗಿ ಬರೆದಿರುವುದನ್ನು ನಾನೂ ಓದಿದ್ದೇನೆ. ಅದನ್ನು ಬಿಟ್ಟು ಈ ವಿಷಯವಾಗಿ ನನಗಿನ್ನೇನೂ ಗೊತ್ತಿಲ್ಲವೆಂದು ನಾನು ನಿಮಗೆ ಭರವಸೆ ಕೊಡುತ್ತೇನೆ ಈ ಪತ್ರಿಕೆಗಳು ಆಗಾಗ ಹೊರಡಿಸುವ ಅಬದ್ಧ ಪ್ರೇತಗಳು ನಿಮಗೆ ತಿಳಿದೇ ಇವೆ. ಸಾಮ್ರಾಜ್ಯಕ್ಕೆ ಇಂತಹ ಗಂಡಾಂತರವೊದಗಿರುವಾಗ ಕೇವಲ ವೃತ್ತಪತ್ರಿಕೆಯಲ್ಲಿನ ಸುದ್ದಿಯ ಆಧಾರದ ಮೇಲೆ ನೆರವೀಯುವುದಿಲ್ಲವೆಂದು ಹೇಳುವರಾ? ಯುದ್ಧವು ಮುಗಿದ ಮೇಲೆ ನಿಮಗೆ ಇಷ್ಟಬಂದ ನೈತಿಕ ಪ್ರಶ್ನೆಗಳನ್ನು ತಂದು ನಮ್ಮನ್ನು ಬೇಕಾದಷ್ಟು ಖಂಡಿಸಿರಿ, ಆದರೆ ಈಗ ಬೇಡ."

ಈ ರೀತಿಯ ವಾದವೇನೂ ಹೊಸದಾಗಿರಲಿಲ್ಲ ಆದರೆ ಅದನ್ನು ಹೇಳಿದ ರೀತಿಯಿಂದ, ಆ ಸಂದರ್ಭದ ಮಹಿಮೆಯಿಂದ, ಅದು ನನಗೆ ಹೊಸದಾಗಿ ತೋರಿತು. ನಾನು ಸಭೆಯಲ್ಲಿ ಭಾಗಿಯಾಗಲು ಒಪ್ಪಿದೆನು. ಮುಸಲ್ಮಾನರ ತಗಾದೆಯ ವಿಷಯವಾಗಿ ನಾನು ವೈಸ್‌ರಾಯರಿಗೆ ಕಾಗದ ಬರೆಯಬೇಕೆಂದಿದ್ದೆನು.

# ೨೭

## ಸೈನಿಕರನ್ನು ಸೇರಿಸಿದುದು.

ಹೀಗೆ ನಾನು ಯುದ್ಧ ಸಭೆಗೆ ಹೋದೆನು. ಸೈನಿಕರನ್ನು ಕೂಡಿಸಬೇಕೆಂಬ ಗೊತ್ತುವಳಿಯನ್ನು ನಾನು ಅನುಮೋದಿಸಬೇಕೆಂದು ವೈಸ್‌ರಾಯರು ಬಹು ಆತುರರಾಗಿದ್ದರು. ನಾನು ಹಿಂದೀ–ಹಿಂದುಸ್ತಾನಿಯಲ್ಲಿ ಮಾತನಾಡಲು ಅಪ್ಪಣೆ ಕೇಳಿದೆನು. ವೈಸ್‌ರಾಯರು ಇದಕ್ಕೆ ಸಮ್ಮತಿಸಿದರು ಆದರೆ ನಾನು ಇಂಗ್ಲಿಷಿನಲ್ಲಿಯೂ ಮಾತನಾಡಬೇಕೆಂದು ಸೂಚಿಸಿದರು. ನಾನೇನೂ ಭಾಷಣ ಮಾಡಬೇಕಾದುದಿರಲಿಲ್ಲ. ನಾನು ಒಂದು ವಾಕ್ಯವನ್ನು ಮಾತ್ರ ನುಡಿದೆನು ಅದರ ತಾತ್ಪರ್ಯವೇನೆಂದರೆ — "ಇದರ ಪೂರ್ಣ ಜವಾಬ್ದಾರಿಯನ್ನು ತಿಳಿದುಕೊಂಡು ನಾನು ಈ ಗೊತ್ತುವಳಿಯನ್ನು ಅನುಮೋದಿಸುತ್ತೇನೆ"

ನಾನು ಹಿಂದುಸ್ತಾನಿಯಲ್ಲಿ ಮಾತನಾಡಿದುದಕ್ಕಾಗಿ ಅನೇಕರು ನನ್ನನ್ನು ಅಭಿನಂದಿಸಿದರು. ಅಂತಹ ಸಭೆಯಲ್ಲಿ ಯಾರಾಗಲಿ ಹಿಂದುಸ್ತಾನಿಯಲ್ಲಿ ಮಾತನಾಡಿದುದು ಆ ತಲೆಮಾರಿನ ನೆನಪಿನಲ್ಲಿ ಅದೇ ಮೊದಲನೆಯ ಸಲವೆಂದು ಅವರು ಹೇಳಿದರು. ಈ ಅಭಿನಂದನೆಗಳೂ ವೈಸ್‌ರಾಯರಿದ್ದ ಸಭೆಯಲ್ಲಿ ಹಿಂದುಸ್ತಾನಿಯಲ್ಲಿ ಮಾತನಾಡಲು ನಾನೇ ಮೊದಲಿಗನೆಂಬ ಅರಿವೂ ನನ್ನ ರಾಷ್ಟ್ರೀಯ ಆತ್ಮಗೌರವವನ್ನು ಮುರಿದು ನನ್ನ ಮನಸ್ಸನ್ನು ನೋಯಿಸಿದುವು. ನನಗೆ ಭೂಗರ್ಭದೊಳಕ್ಕಿಳಿದು ಅಡಗಿ ಹೋಗಲೇ ಎನಿಸಿತು. ನಮ್ಮ ದೇಶದ ಕೆಲಸಕ್ಕೇ ಸಂಬಂಧಪಟ್ಟು ನಮ್ಮ ದೇಶದಲ್ಲಿಯೇ ನಡೆಯುವ ಸಭೆಗಳಲ್ಲಿ ನಮ್ಮ ದೇಶದ ಭಾಷೆಗೇ ಬಹಿಷ್ಕಾರ! ನನ್ನಂತಹನಾರೋ ಒಬ್ಬನು ಹಿಂದುಸ್ತಾನಿಯಲ್ಲಿ ಮಾತನಾಡಿದರೆ ಅದು ಅಭಿನಂದನೆಯ ವಿಷಯ! ಇದೆಂತಹ ವಿಷಾದದ ಮಾತು! ಇಂತಹ ಘಟನೆಗಳು ನಾವೆಷ್ಟು ಕೀಳ್ದೆಸೆಗೆ ಇಳಿದಿರುವೆವೆಂಬುದನ್ನು ಜ್ಞಾಪಕಕ್ಕೆ ತರುತ್ತವೆ,

ಸಭೆಯಲ್ಲಿ ನಾನು ನುಡಿದ ಆ ಒಂದು ವಾಕ್ಯವು ನನಗೆ ಬಹು ಅರ್ಥಗರ್ಭಿತವಾಗಿದ್ದಿತು ಸಭೆಯನ್ನಾಗಲಿ ನಾನು ಅನುಮೋದಿಸಿದ ಪ್ರಸ್ತಾಪವನ್ನಾಗಲಿ ನಾನು ಮರೆಯುವಂತಿರಲಿಲ್ಲ. ನಾನು ದಿಲ್ಲಿಯಲ್ಲಿ ರುವಾಗಲೇ ಪೂರೈಸಬೇಕಾದ ಜವಾಬ್ದಾರಿಯೊಂದಿದ್ದಿತು : ನಾನು ವೈಸ್ರಾಯರಿಗೊಂದು ಪತ್ರವನ್ನು ಬರೆಯಬೇಕಾಗಿದ್ದಿತು. ಇದೇನೂ ನನಗೆ ಸುಲಭವಾದ ವಿಷಯವಾಗಿರಲಿಲ್ಲ ನಾನು ಸಭೆಗೆ ಹೋದು ದೆಂತು, ಏಕೆ, ಎಂಬುದನ್ನು ವಿವರಿಸಿ ಸರಕಾರದ ಕಡೆಯಿಂದ ಜನರು ನಿರೀಕ್ಷಿಸುವುದೇನೆಂಬುದನ್ನು ಸ್ಪಷ್ಟವಾಗಿ ತಿಳಿಸಿ ಆ ಕಾಗದವನ್ನು ಬರೆ ಯುವುದು ಸರಕಾರದ ಮತ್ತು ಜನರ ಮೇಲ್ಮೆಗಾಗಿ ನನ್ನ ಕರ್ತವ್ಯವೆಂದು ನನಗೆ ತೋರಿತು.

ಆ ಪತ್ರದಲ್ಲಿ ಸಭೆಗೆ ಲೋಕಮಾನ್ಯ ತಿಲಕರು, ಅಲೀ ಸಹೋದ ರರು ಮುಂತಾದ ಮುಂದಾಳುಗಳನ್ನು ಕರೆಯದಿದ್ದುದಕ್ಕಾಗಿ ನನ್ನ ವಿಷಾದವನ್ನೂ ರಾಜಕೀಯ ಸಂಬಂಧವಾಗಿ ಜನರನ್ನು ಒಪ್ಪಿಸಬೇಕಾದರೆ ಸರಕಾರದವರು ಕನಿಷ್ಠ ಪಕ್ಷಕ್ಕೆ ಮಾಡಬೇಕಾದ ಸುಧಾರಣೆಗಳನ್ನೂ ಯುದ್ಧದಿಂದೊದಗಿದ ಪರಿಸ್ಥಿತಿಯ ವಿಷಯವಾಗಿ ಮುಸಲ್ಮಾನರ ತಗಾ ದೆಯನ್ನೂ ವ್ಯಕ್ತಪಡಿಸಿದೆನು ಅದನ್ನು ಪ್ರಕಟಿಸಲು ವೈಸ್ರಾಯರ ಅನುಜ್ಞೆಯನ್ನು ಕೇಳಲು ಅವರು ಸಂತೋಷದಿಂದಿತ್ತರು.

ಸಭೆಯು ಮುಗಿದೊಡನೆಯೇ ವೈಸ್ರಾಯರು ಸಿಮ್ಲಾಕ್ಕೆ ಹೋಗಿ ದ್ದುದರಿಂದ ಪತ್ರವನ್ನು ಅಲ್ಲಿಗೆ ಕಳುಹಿಸಿಕೊಡಬೇಕಾಗಿದ್ದಿತು. ನನ್ನ ದೃಷ್ಟಿಯಲ್ಲಿ ಅದು ಮಹತ್ತ್ವಪೂರ್ಣವಾದುದಾಗಿದ್ದಿತು. ಅದನ್ನು ಅಂಚೆ ಯಲ್ಲಿ ಕಳುಹಿಸುವುದೆಂದರೆ ತಡವಾಗುತ್ತಿದ್ದಿತು ಕಾಲ ಉಳಿಸಬೇ ಕೆಂದು ನನಗೆ ಇಚ್ಛೆಯಿದ್ದಿತು ಆದರೂ ನನಗೆ ಕೈಗೆ ಸಿಕ್ಕಿದವರ ಮೂ ಲಕ ಅದನ್ನು ಕಳುಹಿಸಿ ಕೊಡಲು ಇಷ್ಟವಿರಲಿಲ್ಲ. ಯಾರಾದರೂ ಪರಿ ಶುದ್ಧ ಹೃದಯರು ಅದನ್ನು ತೆಗೆದುಕೊಂಡು ಹೋಗಿ ವೈಸ್‌ರಾಯರ ಭವನಕ್ಕೆ ತಮ್ಮ ಕೈಯಿಂದಲೇ ಕೊಡಬೇಕೆಂದು ನನ್ನ ಇಚ್ಛೆಯಿದ್ದಿತು. ದೀನಬಂಧು ಆಂಡ್ರ್ಯೂಸರೂ ಮುಖ್ಯಾಧ್ಯಾಪಕ ಸುಶೀಲ ರುದ್ರರೂ ಕೇಂಬ್ರಿಡ್ಜ್ ಮಿಷನಿನ ಪಾದ್ರಿಗಳಾದ ಪರ್ಲೆಂಡರ ಹೆಸರನ್ನು ಸೂಚಿಸಿ

ದರು. ಆ ಸಜ್ಜನರು ತಾವು ಆ ಕಾಗದವನ್ನು ನೋಡಿ ಅದು ತಮಗೆ ಒಳ್ಳೆಯದೆಂದು ತೋರಿದರೆ ತಾವು ಅದನ್ನು ತೆಗೆದುಕೊಂಡು ಹೋಗಲು ಒಪ್ಪಿದರು. ಅದೇನೂ ಏಕಾಂತ ಪತ್ರವಾಗಿರಲಿಲ್ಲವಾದುದರಿಂದ ಇದಕ್ಕೆ ನನಗೆ ಯಾವ ಅಭ್ಯಂತರವೂ ಇರಲಿಲ್ಲ. ಅವರು ಅದನ್ನು ಓದಿದರು. ಅದು ಅವರಿಗೆ ರುಚಿಸಿತು. ಅದನ್ನು ತೆಗೆದುಕೊಂಡು ಹೋಗಿ ಕೊಡಲು ತಮ್ಮ ಒಪ್ಪಿಗೆಯನ್ನು ಅವರು ಸೂಚಿಸಿದರು. ನಾನು ಅವರಿಗೆ ಎರಡನೆಯ ತರಗತಿಯ ರೈಲ್ವೆ ಬಾಡಿಗೆಯನ್ನು ಕೊಡಹೋದೆನು. ಆದರೆ ಅವರು ಅದನ್ನು ತೆಗೆದುಕೊಳ್ಳದೆ ತಮಗೆ ಮಧ್ಯಮ (ಇಂಟರ್‌ಮೀಡಿಯೇಟ್) ತರಗತಿಯಲ್ಲಿ ಪಯಣ ಮಾಡುವ ಅಭ್ಯಾಸವುಂಟೆಂದು ಹೇಳಿದರು. ಅದು ಇರುಳಿನ ಪಯಣವಾದರೂ ಅವರು ಆ ತರಗತಿಯಲ್ಲಿಯೇ ಹೋದರು. ಅವರ ಸರಳತೆಯೂ ಋಜುಸ್ವಭಾವವೂ ನಿಷ್ಕಪಟವಾದ ಮಾತೂ ನನ್ನ ಮನಸ್ಸನ್ನು ಸೆರೆ ಹಿಡಿದುವು ಈ ರೀತಿಯಾಗಿ ಪವಿತ್ರ ಮಾನಸರಾದ ಸಜ್ಜನರ ಮೂಲಕ ಕಳುಹಿಸಿ ಕೊಟ್ಟ ಪತ್ರದಿಂದ ಇಚ್ಛಿಸಿದ ಫಲವೇ ದೊರೆಯಿತೆಂದು ನನಗೆ ತೋರಿತು ಇದರಿಂದ ನನ್ನ ಮನಸ್ಸಿನ ಹೊರೆಯು ಇಳಿಯಿತು, ನನ್ನ ಮಾರ್ಗವು ಸುಗಮವಾಯಿತು.

ಯೋಧರನ್ನು ಕೂಡಿಸುವುದು ನನ್ನ ಎರಡನೆಯ. ಜವಾಬ್ದಾರಿಯಾಗಿದ್ದಿತು. ಖೇಡಾದಲ್ಲಿ ಅಲ್ಲದೆ ನಾನು ಆರಂಭಿಸತಕ್ಕುದಿನ್ನೆಲ್ಲಿ? ನನ್ನ ಜೊತೆಯಲ್ಲಿ ಕೆಲಸ ಮಾಡಿದವರನ್ನಲ್ಲದೆ ಮೊಟ್ಟಮೊದಲು ಯೋದ್ಧರಾಗಲು ಕರೆಯತಕ್ಕುದಿನ್ನಾರನ್ನು? ಆದುದರಿಂದ ನಡಿಯಾದನ್ನು ಮುಟ್ಟುತ್ತಲೇ ನಾನು ವಲ್ಲಭಭಾಯಿ ಮುಂತಾದ ಮಿತ್ರರೊಡನೆ ಈ ವಿಷಯವನ್ನು ಚರ್ಚಿಸಿದೆನು. ಅವರಲ್ಲಿ ಕೆಲವರು ಈ ಗುಳಿಗೆಯನ್ನು ಸುಲಭವಾಗಿ ನುಂಗಲಾಗಲಿಲ್ಲ. ನನ್ನ ಸೂಚನೆಯನ್ನು ಒಪ್ಪಿದವರು ಅದು ಫಲಕಾರಿಯಾಗುವ ವಿಷಯದಲ್ಲಿ ಸಂಶಯಗ್ರಸ್ತರಾಗಿದ್ದರು. ನಾನು ಯಾವ ಜನರ ಬಳಿಗೆ ಹೋಗಿ ಸೈನ್ಯಕ್ಕೆ ಸೇರಿರೆಂದು ಕೇಳಬೇಕೆಂದಿದ್ದೆನೋ ಅವರಿಗೂ ಸರಕಾರಕ್ಕೂ ಮಧ್ಯೆ ಪ್ರೇಮವೇನೂ ಉಕ್ಕಿ ಸುರಿಯುತ್ತಿರಲಿಲ್ಲ ಸರಕಾರದ ನೌಕರರ ಸಂಬಂಧವಾಗಿ ಅವರಿಗುಂಟಾಗಿದ್ದ ಕಟು ಅನುಭವವು ಅವರ ನೆನಪಿನಲ್ಲಿ ಇನ್ನೂ ಹೊಸದಾಗಿದ್ದಿತು.

ಆದರೂ ಅವರು ಕಾರ್ಯಾರಂಭದ ಪರವಾಗಿ ಅಭಿಮತವುಳ್ಳವರಾಗಿದ್ದರು. ನಾನು ಕೆಲಸದಲ್ಲಿ ತೊಡಗುತ್ತಲೇ ನನ್ನ ಕುರುಡುತನವು ಕಳೆಯಿತು. ನನ್ನ ಆಶಾಪ್ರವಾಹಕ್ಕೆ ತಟ್ಟನೆ ಅಡಚಣೆಯೊದಗಿತು. ಖೇಡಾ ಸತ್ಯಾಗ್ರಹದ ಕಾಲದಲ್ಲಿ ಜನರು ತಮ್ಮ ಗಾಡಿಯನ್ನು ಬಾಡಿಗೆಯಿಲ್ಲದೆ ಕೊಡುತ್ತಿದ್ದರು. ಒಬ್ಬ ಸ್ವಯಂಸೇವಕನು ಬೇಕಾದ ಕಡೆ ಇಬ್ಬರು ಮುಂದೆ ಬರುತ್ತಿದ್ದರು. ಈಗಲಾದರೋ ಸ್ವಯಂಸೇವಕರ ಮಾತು ಹಾಗಿರಲಿ, ಬಾಡಿಗೆಗೆ ಕೂಡ ಗಾಡಿ ಸಿಕ್ಕುವುದು ಕಷ್ಟವಾಗಿದ್ದಿತು. ಗಾಡಿಗಳನ್ನು ಬಿಟ್ಟು ಕಾಲ್ನಡಿಗೆಯಲ್ಲಿ ಪಯಣ ಮಾಡಬೇಕೆಂದು ನಾವು ನಿಶ್ಚಯಿಸಿದೆವು. ಇದರಂತೆ ನಾವು ದಿನಕ್ಕೆ ಇಪ್ಪತ್ತು ಮೈಲಿ ನಡೆಯಬೇಕಾಗಿದ್ದಿತು. ಬಂಡಿಗಳು ದೊರಕದಿದ್ದ ಮೇಲೆ ಜನರು ನಮಗೆ ಹಿಟ್ಟು ಹಾಕುವರೆಂದು ನಿರೀಕ್ಷಿಸುವುದು ಹೇಗೆ? ಆಹಾರವನ್ನು ಕೇಳುವುದು ಕೂಡ ಉಚಿತವೆಂದು ಹೇಳುವಂತಿರಲಿಲ್ಲ. ಆದುದರಿಂದ ಪ್ರತಿಯೊಬ್ಬ ಸ್ವಯಂಸೇವಕನೂ ತನ್ನ ಬುತ್ತಿಯನ್ನು ತನ್ನ ಗಂಟಿನಲ್ಲಿ ಕಟ್ಟಿಕೊಳ್ಳಬೇಕೆಂದು ನಿರ್ಧಾರವಾಯಿತು. ಆಗ ಬೇಸಿಗೆಯಾದುದರಿಂದ ಹಾಸಿಗೆಗಾಗಲಿ ದುಪ್ಪಟಿಗಾಗಲಿ ಅಗತ್ಯವಿರಲಿಲ್ಲ.

ನಾವು ಹೋದ ಕಡೆಯಲ್ಲಾ ಸಭೆ ನಡೆಸಿದೆವು. ಜನರೇನೋ ಬರುತ್ತಿದ್ದರು. ಆದರೆ ಒಬ್ಬರಿಬ್ಬರು ಕೂಡ ಸೈನ್ಯಕ್ಕೆ ಸೇರಲು ಮುಂದೆ ಬರುತ್ತಿರಲಿಲ್ಲ. "ನೀವು ಅಹಿಂಸೋಪಾಸಕರು. ಆದರೂ ಕೋವಿಯನ್ನು ಹಿಡಿಯಬೇಕೆಂದು ನಮಗೆ ಹೇಗೆ ಹೇಳುವಿರಿ?" "ನಾವು ಸರಕಾರಕ್ಕೆ ಸಹಾಯ ಮಾಡಲು ಅದು ಹಿಂದೂಸ್ಥಾನಕ್ಕೆ ಮಾಡಿರುವ ಉಪಕಾರವೇನು?"—ಈ ಪ್ರಶ್ನೆಗಳನ್ನೂ ಇದೇ ರೀತಿಯ ಇತರ ಪ್ರಶ್ನೆಗಳನ್ನೂ ಅವರು ಕೇಳುತ್ತಿದ್ದರು.

ಆದರೂ ನಮ್ಮ ನಿರಂತರೋದ್ಯಮವು ಫಲಕಾರಿಯಾಗತೊಡಗಿತು. ಅನೇಕ ಜನರು ತಮ್ಮ ಹೆಸರುಗಳನ್ನು ಕೊಟ್ಟರು. ಮೊದಲನೆಯ ತಂಡವನ್ನು ಕಳುಹಿಸಿದ ಮೇಲೆ ಉಳಿದವುಗಳನ್ನು ತಪ್ಪದೆ ಕಳುಹಿಸಲು ನಮಗೆ ಸಾಧ್ಯವಾಗುವುದೆಂದು ನಾವು ನಿರೀಕ್ಷಿಸಿದೆವು. ಹೀಗೆ ಹೊಸದಾಗಿ ಸೇರಿದವರನ್ನು ಎಲ್ಲಿ ಇಳಿಸಿರುವುದು ಎಂಬ ವಿಷಯವಾಗಿ ನಾನು ಪ್ರಾಂತ

ವಿಭಾಗಾಧಿಕಾರಿಗಳೊಡನೆ ಆಗಲೇ ಮಾತನಾಡತೊಡಗಿದ್ದೆನು. ಪ್ರತಿಯೊಂದು ಪ್ರಾಂತ ವಿಭಾಗದ ಅಧಿಕಾರಿಗಳೂ (ಕಮಿಷನರ್) ದಿಲ್ಲಿಯ ಸಭೆಯಂತಹ ಸಭೆಗಳನ್ನು ನಡೆಸುತ್ತಿದ್ದರು. ಇಂತಹದೊಂದು ಗುಜರಾತಿನಲ್ಲಿ ಕೂಡಿತು ನನ್ನನ್ನೂ ನನ್ನ ಸಂಗಡಿಗರನ್ನೂ ಅದಕ್ಕೆ ಕರೆದರು. ನಾವು ಅಲ್ಲಿಗೆ ಹೋದೆವು ಆದರೆ ನಾನಿರುವುದರ ಔಚಿತ್ಯವು ದಿಲ್ಲಿಗಿಂತಲೂ ಇಲ್ಲಿ ಕಡಮೆಯೆಂದು ತೋರಿತು. ಈ 'ಹುಂ' ಹುಂ' ಗುಟ್ಟುವ ಗುಲಾಮಗಿರಿಯ ವಾತಾವರಣದಲ್ಲಿ ನನಗೆ ಸುಖ ತೋರಲಿಲ್ಲ ನಾನು ಸ್ವಲ್ಪ ದೀರ್ಘವಾಗಿ ಮಾತನಾಡಿದೆನು. ನನ್ನ ಭಾಷಣದಲ್ಲಿ ಅಧಿಕಾರಿಗಳಿಗೆ ರುಚಿಸುವುದೇನನ್ನೂ ಹೇಳಲಾಗಲಿಲ್ಲ ಅಷ್ಟೇ ಅಲ್ಲ, ಒಂದೆರಡು ಕಠಿಣವಾದ ಮಾತುಗಳೂ ಇದ್ದುವು.

ಸೈನ್ಯಕ್ಕೆ ಸೇರಬೇಕೆಂದು ಜನರನ್ನು ಕೇಳಿಕೊಳ್ಳಲು ನಾನು ಚೀಟಿಗಳನ್ನು ಹಂಚಿಸುತ್ತಿದ್ದೆನು ಇವುಗಳಲ್ಲಿ ನಾನು ಉಪಯೋಗಿಸಿದ ಒಂದು ವಾದವು ಕಮಿಷನರಿಗೆ ಅರುಚಿಕರವಾಗಿದ್ದಿತು ಅದೇನೆಂದರೆ — "ಭರತಖಂಡವನ್ನಾಳುವುದರಲ್ಲಿ ಬ್ರಿಟಿಷರು ನಡೆಸಿರುವ ಅನೇಕ ಅಕೃತ್ಯಗಳಲ್ಲಿ "ಇಡೀ ಜನಾಂಗವನ್ನೇ ನಿರಾಯುಧರನ್ನಾಗಿ ಮಾಡಿದ ಕಾಯಿದೆಯು ಅತ್ಯಂತ ಕೇಡಾದ ಅಕೃತ್ಯವೆಂದು ಚರಿತ್ರೆಯಲ್ಲಿ ಗಣಿತವಾಗುತ್ತದೆ. ಈ ಕಾಯಿದೆಯನ್ನು ತೊಲಗಿಸಬೇಕಾದರೆ, ನಾವು ಶಸ್ತ್ರವಿದ್ಯೆಯನ್ನು ಕಲಿಯಬೇಕಾದರೆ, ಇದೋ ಈಗ ಸುಸಮಯವೊದಗಿದೆ. ಮಧ್ಯಮ ತರಗತಿಯ ಜನರು ತಾವಾಗಿಯೇ ಮುಂದೆ ಬಂದು ಸರಕಾರಕ್ಕೆ ಬಂದಿರುವ ಈ ಆಪತ್ಕಾಲದಲ್ಲಿ ನೆರವಿತ್ತರೆ ಅವಿಶ್ವಾಸವು ಮಾಯವಾಗಿ ಶಸ್ತ್ರಧಾರಣೆಗೆ ಅಡಚಣೆಯು ತೊಲಗುವುದು." ಕಮಿಷನರು ಇದನ್ನು ಕುರಿತು ಮಾತನಾಡಿ ನಮ್ಮಿಬ್ಬರಿಗೂ ಮತಭೇದವಿದ್ದರೂ ನಾನು ಸಭೆಗೆ ಬಂದುದರಿಂದ ತಾವು ಸಂತುಷ್ಟರಾದರೆಂದು ಹೇಳಿದರು ನನ್ನ ಅಭಿಪ್ರಾಯವನ್ನು ನಾನು ಸಾಧ್ಯವಾದಷ್ಟು ವಿನಯದಿಂದ ಸಮರ್ಥಿಸಬೇಕಾಯಿತು.

---

[ಈ ಅಧ್ಯಾಯದಲ್ಲಿ ಸೂಚಿತವಾಗಿರುವಂತೆ ಗಾಂಧೀಜಿಯವರು ವೈಸ್ರಾಯರಿಗೆ ಬರೆದ ಪತ್ರದ ಭಾಷಾಂತರವನ್ನು ಈ ಕೆಳಗೆ ಕೊಟ್ಟಿದೆ.]

ತಮಗೆ ಆಗಲೇ ತಿಳಿದಿರುವಂತೆ ನಾನು ಇದೇ ತಿಂಗಳು (ಏಪ್ರಿಲ್) ೨೬ನೆಯ ತಾರೀಖಿನ ಕಾಗದದಲ್ಲಿ ಬರೆದಿರುವ ಕಾರಣಗಳಿಗಾಗಿ ನಾನು (ಯುದ್ಧ) ಸಭೆಗೆ ಬರಲಾಗಲಿಲ್ಲವೆಂದು ತಮಗೆ ಹೇಳಬೇಕಾಗಿ ಬಂದಿತು. ಆದರೆ ತಾವು ದಯೆಯಿಟ್ಟು ನನ್ನ ಭೆಟ್ಟಿಮಾಡಿದ ಮೇಲೆ ಇನ್ನೇತಕ್ಕಿಲ್ಲದಿದ್ದರೂ ನಾನು ತಮ್ಮಲ್ಲಿಟ್ಟಿರುವ ಹೆಚ್ಚು ಮನ್ನಣೆಯ ದೆಸೆಯಿಂದಲಾದರೂ ಆ ಸಭೆಗೆ ಹೋಗಬೇಕೆಂದು ನನ್ನನ್ನು ನಾನೇ ಪ್ರೇರಿಸಿಕೊಂಡೆನು ನಾನು ಸಭೆಗೆ ಬರದಿರಲು ಲೋಕಮಾನ್ಯ ತಿಲಕರು, ಮಿಸೆಸ್ ಬೆಸೆಂಟರು, ಆಲಿ ಭ್ರಾತೃಗಳು (ಇವರೂ ಪ್ರಜಾಭಿಮತದ ಮುಂದಾಳುಗಳಲ್ಲಿ ಅತ್ಯಂತ ಪ್ರಮುಖರೆಂದು ನನ್ನ ಎಣಿಕೆ) ಸಭೆಗೆ ಆಹ್ವಾನಿತರಾಗಲಿಲ್ಲವೆಂಬುದೂ ಒಂದು ಕಾರಣ ಪ್ರಾಯಶಃ ಇದೇ ಅತಿ ಮುಖ್ಯವಾದ ಕಾರಣ. ಅವರನ್ನು ಕರೆಯದಿದ್ದುದು ಅತ್ಯಗಾಧವಾದ ತಪ್ಪೆಂದು ಈಗಲೂ ನಾನು ಎಣಿಸುತ್ತೇನೆ. ಈ ಸಭೆಯಾದ ನಂತರ ಪ್ರಾಂತಗಳಲ್ಲಿಯೂ ಸಭೆಗಳು ನಡೆಯುವುವೆಂದು ನನಗೆ ತಿಳಿದುಬಂದಿದೆ. ಅವುಗಳಿಗೆ ಈ ಮುಖಂಡರನ್ನು ಕರೆದು ಸರ್ಕಾರದವರು ಅವರ ಸಲಹೆಯಿಂದ ಲಾಭ ಹೊಂದಿ ತಮ್ಮ ತಪ್ಪನ್ನು ತಿದ್ದುಕೊಳ್ಳಬಹುದೆಂದು ನಾನು ವಿನಯಪೂರ್ವಕವಾಗಿ ಸೂಚಿಸುತ್ತೇನೆ. ಇವರಂತೆ ಕೋಟ್ಯಂತರ ಪ್ರಜೆಗಳ ಪ್ರತಿನಿಧಿಗಳಾಗಿರುವ ಮುಂದಾಳುಗಳನ್ನು, ಅವರು ಸರ್ಕಾರಕ್ಕೆ ಒಪ್ಪದ ಅಭಿಪ್ರಾಯಗಳುಳ್ಳವರಾಗಿದ್ದರೂ, ಯಾವ ಸರ್ಕಾರವೂ ಅನಾದರದಿಂದ ಕಂಡು ಗೆಲ್ಲಲಾರದೆಂದು ನಾನು ಅರಿಕೆ ಮಾಡಿಕೊಳ್ಳುತ್ತೇನೆ ಆದರೆ ಸಭೆಯ ಉಪಸಮಿತಿಗಳಲ್ಲಿ ಎಲ್ಲಾ ಪಕ್ಷದವರೂ ತಮ್ಮ ಅಭಿಪ್ರಾಯಗಳನ್ನು ನಿರಾಂತಕವಾಗಿ ವ್ಯಕ್ತಪಡಿಸಲವಕಾಶವಿದ್ದಿತೆಂದು ಹೇಳಲು ನನಗೆ

ಸಂತೋಷವಾಗುತ್ತದೆ. ಸಭೆಯಲ್ಲಾಗಲಿ ನಾನಿದ್ದ ಉಪಸಮಿತಿಯ-ಲ್ಲಾಗಲಿ ನನ್ನ ಅಭಿಮತವನ್ನು ನಾನು ಉದ್ದೇಶಪೂರ್ವಕವಾಗಿಯೇ ವ್ಯಕ್ತಪಡಿಸಲಿಲ್ಲ. ಸಭೆಯು ಮುಂದಿಟ್ಟ ಗೊತ್ತುವಳಿಗೆ ಸುಮ್ಮನೆ ಬೆಂಬಲಕೊಡುವುದರಿಂದ ಸಭೆಯ ಉದ್ದೇಶಗಳನ್ನು ನಾನು ಅತ್ಯುತ್ತಮವಾಗಿ ಸಾಧಿಸಬಹುದೆಂದು ನನಗೆ ತೋರಿತು ನಾನು ಯಾವ ಅಡ್ಡಿಯೂ ಇಲ್ಲದೆ ಹಾಗೆ ಮಾಡಿದ್ದೇನೆ. ಇದರೊಡನೆ ಕಳುಹಿಸಿರುವ ಪ್ರತ್ಯೇಕ ಪತ್ರದಲ್ಲಿ ತಿಳಿಸಿರುವ ಸೂಚನೆಯನ್ನು ಸರಕಾರದವರು ಎಷ್ಟು ಶೀಘ್ರದಲ್ಲಿ ಸ್ವೀಕರಿಸಲು ಮನಸ್ಸು ಮಾಡಿದರೆ ಅಷ್ಟು ಜಾಗ್ರತೆಯಾಗಿ ನಾನು ನನ್ನ ಮಾತನ್ನು ಕಾರ್ಯರೂಪಕ್ಕೆ ತರುವ ಆಸೆಯಿಟ್ಟುಕೊಂಡಿದ್ದೇನೆ.

ಇನ್ನು ಕೆಲವು ಕಾಲದಲ್ಲಿಯೇ ನಾವು ಇತರ ಸ್ವತಂತ್ರ ಸ್ವಾಸ್ಥ್ಯಗಳಂತೆಯೇ ಬ್ರಿಟಿಷ್ ಚಕ್ರಾಧಿಪತ್ಯದ ಸ್ವತಂತ್ರ ಪಾಲುಗಾರರಾಗುವೆವೆಂಬ ಆಶಯವನ್ನಿಟ್ಟುಕೊಂಡಿದ್ದೇವೆ. ಆ ಚಕ್ರಾಧಿಪತ್ಯಕ್ಕೆ ಸಂಕಟವೊದಗಿರುವಾಗ ನಾವು ಧಾರಾಳವಾಗಿಯೂ ನಿರಾತಂಕವಾಗಿಯೂ ನೆರವೀಯತಕ್ಕುದು ನಮ್ಮ ಧರ್ಮವೆಂದು ನಾನು ಒಪ್ಪಿಕೊಳ್ಳುತ್ತೇನೆ. ಹಾಗೆ ಬೆಂಬಲ ಕೊಡಬೇಕೆಂದು ನಾವು ನಿಶ್ಚಯಿಸಿಯೂ ಇದ್ದೇವೆ. ಆದರೆ ನಮ್ಮ ಅಭೀಷ್ಟವು ಇನ್ನೂ ತ್ವರಿತವಾಗಿ ಸಿದ್ಧಿಸುವುದೆಂಬ ನಿರೀಕ್ಷಣೆಯೇ ಈ ಪ್ರವರ್ತನೆಗೆ ಕಾರಣವೆಂಬುದು ಕೇವಲ ಸತ್ಯವೇ ಹೊರತು ಇನ್ನೇನೂ ಅಲ್ಲ. ಆದುದರಿಂದ, ಕರ್ತವ್ಯವನ್ನು ನಡೆಸುವುದು ತಾನಾಗಿಯೇ ಅದಕ್ಕುಚಿತವಾದ ಅಧಿಕಾರವನ್ನು ಸಂಪಾದಿಸಿಕೊಡುವಂತೆ, ಇಷ್ಟರಲ್ಲಿಯೇ ಆಗಲಿರುವುವೆಂದು ತಾವು ತಮ್ಮ ಭಾಷಣದಲ್ಲಿ ಸೂಚಿಸಿರುವ ರಾಜಕೀಯ ಸುಧಾರಣೆಗಳು ರಾಷ್ಟ್ರಮಹಾಸಭೆ ಮತ್ತು ಮುಸಲ್ಮಾನ ಮಹಾಸಭೆ, ಇವು ಒಟ್ಟುಗೂಡಿ ರಚಿಸಿರುವ ಆಡಳಿತ ಕ್ರಮವನ್ನು ಸ್ಥೂಲವಾಗಿ ಅನುಸರಿಸುವುವೆಂದು ಜನರು ನಿರೀಕ್ಷಿಸುವುದು ನ್ಯಾಯವೇ ಆಗಿದೆ. ಯುದ್ಧ ಸಭೆಯ ಅನೇಕ ಮಂದಿ ಸದಸ್ಯರು ತಮ್ಮ ಹೃದಯಪೂರ್ವಕ ಸಹಕಾರವನ್ನೊಡ್ಡಲಿಕ್ಕೆ ಈ ಭರವಸೆಯೇ ಆಧಾರವಾಗಿದೆಯೆಂದು ನನ್ನ ನಂಬಿಕೆ.

ನಮ್ಮ ನಾಡಿನ ಜನರು ಹಿಮ್ಮೆಟ್ಟುವಂತೆ ಮಾಡಲು ನನಗೆ ಶಕ್ತಿಯಿದ್ದರೆ ಅವರು ಮಹಾಸಭೆಯಲ್ಲಿನ ಗೊತ್ತುವಳಿಗಳನ್ನೆಲ್ಲಾ ಹಿಂದಕ್ಕೆ ತೆಗೆದುಕೊಂಡು ಯುದ್ಧವು ಮುಗಿಯುವ ಪರ್ಯಂತ 'ಹೋಂವ್ ರೂಲ್' (ಸ್ವರಾಜ್ಯ) ಅಥವಾ 'ಪ್ರಜಾಪ್ರಾತಿನಿಧ್ಯ' ವೆಂಬುದನ್ನೇ ಉಚ್ಚರಿಸದಂತೆ ಮಾಡುತ್ತಿದ್ದೆನು. ಸಾಮ್ರಾಜ್ಯಕ್ಕೆ ಈ ವಿಷಮುಘಳಿಗೆಯೊದಗಿರುವಾಗ ಭರತಖಂಡವು ತನ್ನ ಸುದೃಢ ಯುವಕರನ್ನೆಲ್ಲಾ ಸಾಮ್ರಾಜ್ಯದ ಸಲುವಾಗಿ ಆಹುತಿಕೊಡುವಂತೆ ಮಾಡುತ್ತಿದ್ದೆನು. ಈ ಕಾರ್ಯವೊಂದರಿಂದಲೇ ಹಿಂದೂಸ್ಥಾನವು ಚಕ್ರಾಧಿಪತ್ಯದಲ್ಲೆಲ್ಲಾ ಅತ್ಯಂತ ಆದರಪಾತ್ರವಾದ ಅಂಗವಾಗಿ ಬಣ್ಣದ ಭೇದವೂ ಕುಲದ ಭೇದವೂ ಅಳಿಸಿ ಹೋಗುತ್ತಿದ್ದುವೆಂದು ನನಗೆ ಗೊತ್ತು. ಆದರೆ ಹೆಚ್ಚು ಕಡಮೆ ಭಾರತದ ಸುಶಿಕ್ಷಿತ ಜನರೆಲ್ಲಾ ಇದಕ್ಕಿಂತ ಅಲ್ಪ ಪರಿಣಾಮವುಳ್ಳ ಮಾರ್ಗವನ್ನನುಸರಿಸಲು ನಿಶ್ಚಯಿಸಿದ್ದಾರೆ. ಮತ್ತು ಶಿಕ್ಷಿತವರ್ಗವು ಜನಸಮಾಜದ ಮೇಲೆ ಪ್ರಭಾವವುಳ್ಳುದಾಗಿಯೇ ಇಲ್ಲವೆಂದು ಇಂದು ಹೇಳುವಹಾಗಿಲ್ಲ. ದಕ್ಷಿಣ ಆಫ್ರಿಕದಿಂದ ಹಿಂದೂಸ್ಥಾನಕ್ಕೆ ಹಿಂತಿರುಗಿದಾಗಿನಿಂದ ನನಗೆ ರೈತರೊಡನೆ ಅತ್ಯಂತ ಗಾಢ ಸಂಪರ್ಕವುಂಟಾಗುತ್ತಿದೆ. ಅವರಲ್ಲಿ ಸ್ವರಾಜ್ಯದ ಗೀಳು ವಿಶಾಲವಾಗಿ ಹರಡಿದೆಯೆಂದು ನಾನು ತಮಗೆ ಒತ್ತಿ ಹೇಳಬಲೆಳಸುತ್ತೇನೆ. ಹೋದ ಸಲ ಮಹಾಸಭೆಯು ನೆರೆದಾಗ ಕಾಯಿದೆಯಿಂದ ನಿರ್ಧಾರಮಾಡಿ ಗೊತ್ತಾದ ಕಾಲಾವಧಿಯಲ್ಲಿ ಬ್ರಿಟಿಷ್ ಹಿಂದೂಸ್ಥಾನಕ್ಕೆ ಪ್ರಜಾ ಪ್ರಾತಿನಿಧ್ಯವನ್ನು ಕೊಡಬೇಕೆಂಬ ಗೊತ್ತುವಳಿಗೆ ನಾನೂ ಭಾಗಿಯಾಗಿದ್ದೆನು. ಇದು ದೊಡ್ಡ ಗುಂಡಿಗೆಯ ಕೆಲಸವೇ ಆಹುದೆಂದು ನಾನು ಒಪ್ಪಿಕೊಳ್ಳುತ್ತೇನೆ. ಆದರೆ ಅದಷ್ಟು ಶೀಘ್ರವಾಗಿ ಪ್ರಾಪ್ತವಾಗುವ ಸ್ವರಾಜ್ಯದ ನಿಷ್ಕೃಷ್ಟವಾದ ಕನಸಿಗಿಂತ ಕಡಮೆಯಾದ ಇನ್ನೇತರಿಂದಲೂ ಭರತಖಂಡದ ಪ್ರಜೆಗಳಿಗೆ ತೃಪ್ತಿಯಾಗುವುದಿಲ್ಲವೆಂದು ನನಗೆ ಚೆನ್ನಾಗಿ ಮನವರಿಕೆಯಾಗಿದೆ. ಈ ಧ್ಯೇಯವನ್ನು ಸಾಧಿಸಲು ಯಾವ ಆಹುತಿಯೂ ಹೆಚ್ಚಲ್ಲವೆಂದೆಣಿಸುವವರನೇಕರು ಭಾರತದಲ್ಲಿರುವರೆಂದು ನನಗೆ ಗೊತ್ತು. ಯಾವ ಸಾಮ್ರಾಜ್ಯದಲ್ಲಿ ತಮ್ಮ ಅತ್ಯುಚ್ಚವಾದ ಅಂತಸ್ತನ್ನು ಪಡಬೇಕೆಂಬ ಇಚ್ಛೆಯನ್ನೂ ಆಸೆಯನ್ನೂ

ಇಟ್ಟುಕೊಂಡಿರುವವರೋ ಅಂತಹದಕ್ಕಾಗಿ ತಮ್ಮನ್ನೇ ತಾವು ಯಜ್ಞವಾಗಿ ಅರ್ಪಿಸಲು ಸಿದ್ಧರಾಗಿರಬೇಕೆಂಬುದನ್ನು ತಿಳಿದುಕೊಳ್ಳುವುದಕ್ಕೆ ಸಾಕಾದಷ್ಟು ಜಾಗ್ರತಿಯು ಅವರಲ್ಲಿ ಉಂಟು. ಆದುದರಿಂದ ಈ ಚಕ್ರಾಧಿಪತ್ಯಕ್ಕೆ ಬಂದಿರುವ ಅಪಾಯದಿಂದ ಅದನ್ನು ಪಾರುಮಾಲು ನಿಶ್ಶಬ್ದವಾಗಿ ಆಡಂಬರವಿಲ್ಲದೆ ನಾವು ಕಾಯಾ ವಾಚಾ ಮನಸಾ ಕೆಲಸಮಾಡುವುದರಿಂದ ನಮ್ಮ ಗುರಿಯ ಹತ್ತಿರಕ್ಕೆ ವೇಗವಾಗಿ ಹೋಗುವೆವೇ ಹೊರತು ಬೇರೆಯಲ್ಲ. ಈ ಸುಲಭ ಸತ್ಯವನ್ನು ಲೆಕ್ಕಿಸದಿರುವುದು ರಾಷ್ಟ್ರೀಯ ಆತ್ಮಹತ್ಯೆಯಾಗುವುದು. ಸಾಮ್ರಾಜ್ಯವನ್ನುಳಿಸುವ ಯತ್ನದಲ್ಲಿ ನಾವು ಭಾಗಿಗಳಾದರೆ ಆ ಕಾರ್ಯದಲ್ಲಿಯೇ ಸ್ವರಾಜ್ಯವನ್ನು ಸಾಧಿಸಿರುವೆವೆಂಬುದನ್ನು ನಾವು ಅರಿಯಬೇಕು

ಆದುದರಿಂದ ನಮ್ಮಲ್ಲಿ ದೊರಕುವ ಪ್ರತಿಯೊಬ್ಬನನ್ನೂ ಸಾಮ್ರಾಜ್ಯ ಸಂರಕ್ಷಣೆಗಾಗಿ ಒಪ್ಪಿಸಬೇಕೆಂದು ನನಗೆ ಸ್ಪಷ್ಟವಾಗಿದೆ ಆದರೆ ಆರ್ಥಿಕ ಸಹಾಯದ ವಿಷಯವಾಗಿ ಅದೇ ಮಾತನ್ನು ಹೇಳಲಾರೆನು. ಭರತಖಂಡವು ಸಾಮ್ರಾಜ್ಯದ ಬೊಕ್ಕಸಕ್ಕೆ ಆಗಲೇ ತನ್ನ ಯೋಗ್ಯತೆಯನ್ನು ಮೀರಿ ರೊಕ್ಕವನ್ನು ಕೊಟ್ಟಿದೆಯೆಂದು ನನಗೆ ರೈತರೊಡನೆ ಉಂಟಾಗಿರುವ ನಿಕಟ ಸಂಪರ್ಕದಿಂದ ಮನವರಿಕೆಯಾಗಿದೆ. ಹೀಗೆ ಹೇಳುವುದರಲ್ಲಿ ನಾನು ನನ್ನ ದೇಶಬಾಂಧವರಲ್ಲಿ ಹೆಚ್ಚು ಭಾಗದವರ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಿರುವೆನೆಂದು ನನಗೆ ಗೊತ್ತು.

ನಮ್ಮೆಲ್ಲರ ಆಶಯವನ್ನು ಸಾಧಿಸುವುದಕ್ಕಾಗಿ ನಾವು ನಮ್ಮ ಜೀವನವನ್ನು ಧಾರೆಯೆರೆಯುವುದರಲ್ಲಿ ಈ ಸಭೆಯು ಒಂದು ಹೆಜ್ಜೆಯೆಂದು ನನ್ನ ಎಣಿಕೆ ನಮ್ಮಲ್ಲಿ ಇತರರನೇಕರೂ ಹಾಗೆಯೇ ಭಾವಿಸುವರೆಂದು ನಾನು ನಂಬುತ್ತೇನೆ. ಆದರೆ ನಮ್ಮ ಪರಿಸ್ಥಿತಿಯು ವಿಚಿತ್ರವಾಗಿದೆ. ಇಂದು ನಾವು ಚಕ್ರಾಧಿಪತ್ಯದಲ್ಲಿ ಇದ್ದೇವೆಯೇ ಹೊರತು ನಮಗೆ ಅದರಲ್ಲಿ ಪಾಲುಗಾರರ ಅಧಿಕಾರವಿಲ್ಲ ಮುಂದಾದರೂ ಪರಿಸ್ಥಿತಿಯು ಉತ್ತಮವಾಗಿರುವುದೆಂಬ ಆಸೆಯ ಆಧಾರದ ಮೇಲೆಯೇ ನಾವು ನಮ್ಮ ಜೀವನವನ್ನು ಹೀಗೆ ಧಾರೆಯೆರೆದಿರುವುದು. ಆ ಆಸೆಯು ಏನೆಂಬುದನ್ನು

ಸ್ಪಷ್ಟವಾಗಿಯೂ ಮುಚ್ಚುಮರೆಯಿಲ್ಲದೆಯೂ ತಮಗೆ ತಿಳಿಸದಿದ್ದರೆ ನಾನು ತಮಗೂ ನನ್ನ ದೇಶಕ್ಕೂ ದ್ರೋಹ ಮಾಡಿದಂತಾಗುವುದು. ಆ ಆಸೆಯು ನೆರವೇರಬೇಕೆಂದು ನಾನು ತಮ್ಮೊಡನೆ ಒಪ್ಪಂದವನ್ನೇನೂ ಬಯಸುವುದಿಲ್ಲ. ಆದರೆ ಆಶಾಭಂಗವಾದರೆ ಅದರಿಂದ ಸಾಮ್ರಾಜ್ಯ ಭ್ರಮೆಯು ನಾಶವಾಗುವುದೆಂಬುದನ್ನು ತಾವು ತಿಳಿದುಕೊಳ್ಳಬೇಕು.

ಒಂದು ವಿಷಯವನ್ನು ನಾನು ತಿಳಿಸದಿರಬಾರದು. ನಮ್ಮೊಳಗಿರುವ ಅಂತರ್ಭೇದಗಳನ್ನು ಮರೆತುಬಿಡಬೇಕೆಂದು ತಾವು ನಮಗೆ ಹೇಳಿಕೊಂಡಿದ್ದೀರಿ. ಸರಕಾರದ ಅಧಿಕಾರಿಗಳ ಅತ್ಯಾಚಾರಗಳನ್ನೂ ನಿರಂಕುಶ ವರ್ತನೆಯನ್ನೂ ಸಹಿಸಿಕೊಂಡಿರಬೇಕೆಂಬುದೇ ಇದರರ್ಥವಾದರೆ ನಾನು ತಮ್ಮ ಇಚ್ಛೆಯನ್ನನುಸರಿಸಲು ಶಕ್ತನಲ್ಲ. ಸುಸಂಘಟಿತವಾದ ನಿರಂಕುಶ ವರ್ತನೆಯನ್ನಿದಿರಿಸಲು ನಾನು ನನ್ನ ಸಾಹಸವನ್ನೆಲ್ಲಾ ವೆಚ್ಚ ಮಾಡುವೆನು. ಒಬ್ಬ ಮನುಷ್ಯನನ್ನು ಕೂಡ ಅನಾದರದಿಂದ ಕಾಣಕೂಡದೆಂದೂ ಎಂದಿಗಿಂತ ಅತಿಶಯವಾಗಿ ಪ್ರಜಾಭಿಪ್ರಾಯವನ್ನು ಅರಿತು ಅದನ್ನು ಗಮನಿಸಬೇಕೆಂದೂ ತಾವು ಅಧಿಕಾರಿಗಳಿಗೆ ತಿಳಿಸಬೇಕಾಗಿದೆ. ಚಂಪಾರಣ್ಯದಲ್ಲಿ ಬಹು ಕಾಲದಿಂದ ನೆಲೆಸಿದ್ದ ನಿರಂಕುಶ ರಾಜ್ಯವನ್ನಿದಿರಿಸಿ ನಾನು ಬ್ರಿಟಿಷರ ನ್ಯಾಯಪಕ್ಷಪಾತವೇ ಎಲ್ಲಕ್ಕಿಂತಲೂ ಅಧಿಕವಾದ ಶಕ್ತಿಯೆಂಬುದನ್ನು ತೋರಿಸಿಕೊಟ್ಟಿದ್ದೇನೆ. ಖೇಡಾದಲ್ಲಿ ಸರಕಾರವನ್ನು ಶಪಿಸುತ್ತಿದ್ದ ಜನರು ಇಂದು ತಾವು ತಮ್ಮ ಸತ್ಯಕ್ಕಾಗಿ ಕಷ್ಟವನ್ನು ಸಹಿಸಲು ಸಿದ್ಧರಾಗಿದ್ದರೆ ತಾವೇ ನಾಡಿನ ಶಕ್ತಿಯಲ್ಲದೆ ಸರಕಾರವಲ್ಲವೆಂಬುದನ್ನು ಮನಗಂಡಿದ್ದಾರೆ. ಆದುದರಿಂದ ಸರಕಾರದ ಮೇಲೆ ಅವರಿಗಿದ್ದ ಕ್ರೋಧವು ಆರಿಹೋಗುತ್ತಾ ಇದೆ. 'ಅನ್ಯಾಯವು ತಲೆದೋರಿದಾಗ ಅದನ್ನು ವಿನಯದಿಂದಲೂ ಕ್ರಮದಿಂದಲೂ ಇದಿರಿಸಿದರೆ ಅಂತಹ ವಿರೋಧವನ್ನು ಈ ಸರಕಾರವು ಸಹಿಸುತ್ತದೆ. ಆದುದರಿಂದ ಈ ಸರಕಾರವು ಪ್ರಜಾಪಕ್ಷಪಾತಿಯೇ ಇರಬೇಕು.' ಎಂದು ಅವರು ಹೇಳಿಕೊಳ್ಳುತ್ತಾರೆ. ಈ ರೀತಿಯಾಗಿ ಚಂಪಾರಣ್ಯದ ಮತ್ತು ಖೇಡಾದ ಸಮಾರಂಭಗಳು ನಾನು ಯುದ್ಧದ ಸಂಬಂಧವಾಗಿ ಮಾಡಿದ ಸ್ಪಷ್ಟವಾದ, ವಿಶೇಷವಾದ, ಪ್ರತ್ಯಕ್ಷವಾದ ಸೇವೆಯಾಗಿದೆ. ಈ ವಿಷಯದಲ್ಲಿ ನನ್ನ ಕಾರ್ಯ

ವನ್ನು ನಿಲ್ಲಿಸೆಂದರೂ ಒಂದೇ, ನನ್ನ ಶ್ವಾಸೋಚ್ಛ್ವಾಸವನ್ನು ನಿಲ್ಲಿಸೆಂದರೂ ಒಂದೇ. ಪಶುಬಲಕ್ಕೆ ಬದಲಾಗಿ ಪ್ರೇಮಶಕ್ತಿಗೆ ಇನ್ನೊಂದು ಹೆಸರಾದ, ಆತ್ಮಶಕ್ತಿಯ ಉಪಯೋಗವನ್ನು ಜನರಲ್ಲಿ ಹರಡುವಂತೆ ಮಾಡಲು ನಾನು ಶಕ್ತನಾದರೆ ಇಡೀ ಪ್ರಪಂಚವನ್ನೇ ಇದಿರಿಸಬಲ್ಲ ಭರತಖಂಡವನ್ನು ನಾನು ತಮ್ಮೆದಿರಿನಲ್ಲಿಡಬಲ್ಲೆನೆಂದು ನನಗೆ ಗೊತ್ತು. ಆದುದರಿಂದ ಈ ದುಃಖಸಹನೆಯ ನಿತ್ಯಧರ್ಮವನ್ನು ನನ್ನ ಜೀವನದಲ್ಲಿ ವ್ಯಕ್ತಗೊಳಿಸಿ ಅದರಲ್ಲಿ ಆದರವಿರುವವರು ಅದನ್ನು ಸ್ವೀಕರಿಸಲು ಅವರ ಮುಂದಿಡುವುದಕ್ಕಾಗಿ ನಾನು ಕಾಲ–ಅಕಾಲವೆನ್ನದೆ ಆತ್ಮಸಂಯಮವನ್ನಭ್ಯಸಿಸುವೆನು ಇನ್ನಾವುದಾದರೂ ಪ್ರವೃತ್ತಿಯಲ್ಲಿ ನಾನು ತೊಡಗಿದರೆ ಅದು ಈ ಧರ್ಮದ ಸರ್ವಶ್ರೇಷ್ಠತೆಯನ್ನು ಪ್ರತಿಪಾದಿಸುವುದಕ್ಕೇ ಹೊರತು ಇನ್ನೇತಕ್ಕೂ ಅಲ್ಲ

ಕಡೆಯಲ್ಲಿ, ತಾವು ಚಕ್ರವರ್ತಿಗಳ ಮಂತ್ರಿಗಳಿಗೆ ಅವರು ಮುಸಲ್ಮಾನ ರಾಜ್ಯಗಳ ವಿಚಾರವಾಗಿ ಅಭಯ ಹಸ್ತವನ್ನು ನೀಡುವಂತೆ ಹೇಳಬೇಕೆಂದು ನಾನು ಇಷ್ಟಪಡುತ್ತೇನೆ ಪ್ರತಿಯೊಬ್ಬ ಮುಸಲ್ಮಾನನಿಗೂ ಈ ವಿಷಯದಲ್ಲಿ ಗಾಢವಾದ ಆಸಕ್ತಿಯಿದೆಯೆಂಬುದು ತಮಗೆ ಗೊತ್ತೇ ಇದೆ. ಹಿಂದುವಾಗಿ ನಾನು ಅವರ ಈ ವಿಷಯದಲ್ಲಿ ಔದಾಸೀನ್ಯವನ್ನು ತಾಳಲಾರೆನು. ಅವರ ದುಃಖಗಳೂ ನಮ್ಮ ದುಃಖಗಳಾಗಿರಬೇಕು. ಆ ಸಂಸ್ಥಾನಗಳ ಅಧಿಕಾರಗಳಿಗೆ ಲೇಶವೂ ಕುಂದುಂಟಾಗದಂತೆ ನೋಡಿಕೊಳ್ಳುವುದು, ಮುಸಲ್ಮಾನರ ತೀರ್ಥಕ್ಷೇತ್ರಗಳ ವಿಷಯವಾಗಿ ಅವರ ಮನೋಧರ್ಮವನ್ನಾದರಿಸುವುದು, ಮತ್ತು ಸ್ವರಾಜ್ಯಸಾಧನೆಗಾಗಿ ಹಿಂದೂಸ್ಥಾನಕ್ಕಿರುವ ಅಧಿಕಾರದ ವಿಷಯವನ್ನು ನ್ಯಾಯದಿಂದಲೂ ಸಕಾಲದಲ್ಲಿಯೂ ಇತ್ಯರ್ಥ ಮಾಡುವುದು, ಈ ಕಾರ್ಯಕ್ರಮದಲ್ಲಿಯೇ ಸಾಮ್ರಾಜ್ಯದ ಕ್ಷೇಮವಡಗಿರುವುದು. ಆಂಗ್ಲ ಜನಾಂಗದಲ್ಲಿ ನನಗೆ ಪ್ರೇಮವಿದ್ದು ಪ್ರತಿಯೊಬ್ಬ ಭಾರತೀಯನಲ್ಲಿ ಆಂಗ್ಲರ ವಿಷಯದಲ್ಲಿ ಆದರವುಂಟಾಗಲೆಂದು ನಾನು ಬಯಸುವುದರಿಂದಲೇ ಇದನ್ನು ಬರೆದಿರುವುದು.

೨೯

# ಮೃತ್ಯುಸಮ್ಮುಖದಲ್ಲಿ

ಸೈನಿಕರನ್ನು ಸೇರಿಸುವ ಕೆಲಸದಲ್ಲಿ ನಾನು ನನ್ನ ದೇಹಸ್ವಾಸ್ಥ್ಯವನ್ನು ಹೆಚ್ಚು ಕಡಿಮೆ ಸಂಪೂರ್ಣವಾಗಿ ಹಾಳುಮಾಡಿಕೊಂಡೆನು. ಆ ಕಾಲದಲ್ಲಿ ನಾನು ಮುಖ್ಯವಾಗಿ ತೆಗೆದುಕೊಳ್ಳುತ್ತಿದ್ದ ಆಹಾರವೇನೆಂದರೆ, ನೆಲಗಡಲೇಕಾಯಿ, ಬೆಣ್ಣೆ, ನಿಂಬೇಹಣ್ಣು ಬೆಣ್ಣೆಯನ್ನು ಮಿತಿಮೀರಿ ತಿಂದು ಆರೋಗ್ಯವನ್ನು ಕೆಡಿಸಿಕೊಳ್ಳುವುದು ಸುಲಭವೆಂದು ನನಗೆ ತಿಳಿದಿದ್ದರೂ ನಾನು ಅದನ್ನು ಹೆಚ್ಚಾಗಿ ತಿಂದೆನು ಇದರಿಂದ ಸ್ವಲ್ಪ ಆಮಶಂಕೆಗೆ ಆರಂಭವಾಯಿತು. ಇದನ್ನು ನಾನು ಹೆಚ್ಚಾಗಿ ಲೆಕ್ಕಿಸದೆ ಆಗಾಗ ನಾನು ಹೋಗುತ್ತಿದ್ದಂತೆ ಆ ಸಂಜೆಯೂ ಆಶ್ರಮಕ್ಕೆ ಹೋದೆನು ಆ ಕಾಲದಲ್ಲಿ ನಾನು ಔಷಧವನ್ನು ತೆಗೆದುಕೊಳ್ಳುತ್ತಿದ್ದುದು ಅಪೂರ್ವ. ಒಂದು ಹೊತ್ತು ಊಟವನ್ನು ಬಿಟ್ಟರೆ ಸರಿಹೋಗುವುದೆಂದು ನಾನು ಭಾವಿಸಿದೆನು ಮರುದಿನ ಬೆಳಿಗ್ಗೆ ಏನೂ ತಿನ್ನಲಿಲ್ಲ. ಇದರಿಂದ ನನ್ನ ದೇಹಸ್ಥಿತಿಯು ಉತ್ತಮಗೊಂಡಿತು. ಆದರೆ ಸಂಪೂರ್ಣವಾಗಿ ವಾಸಿಯಾಗಬೇಕಾದರೆ ನಾನು ಇನ್ನೂ ಕೆಲವು ಕಾಲ ಉಪವಾಸ ಮಾಡಬೇಕೆಂದೂ ಏನಾದರೂ ತೆಗೆದುಕೊಳ್ಳಬೇಕಾದರೆ ಹಣ್ಣಿನ ರಸವನ್ನು ಹೊರತು ಇನ್ನೇನನ್ನೂ ಮುಟ್ಟಕೂಡದೆಂದೂ ನನಗೆ ಗೊತ್ತಿದ್ದಿತು

ಅದು ಯಾವುದೋ ಹಬ್ಬದ ದಿನವಾಗಿದ್ದಿತು ಮಧ್ಯಾಹ್ನ ಊಟ ಮಾಡುವುದಿಲ್ಲವೆಂದು ನಾನು ಕಸ್ತೂರಿಬಾಯಿಗೆ ಹೇಳಿದ್ದರೂ ಆಕೆಯು ನನಗೆ ಆಸೆಯೊಡ್ಡಿದಳು. ನಾನು ಆಸೆಗೆ ಸಿಕ್ಕಿಬಿದ್ದೆನು. ನಾನು ಹಾಲನ್ನಾಗಲಿ ಬೆಣ್ಣೆ ಮೊಸರು ತುಪ್ಪ ಮುಂತಾದುದರಿಂದಾಗಲಿ ಮಾಡಿದ ಯಾವ ಪದಾರ್ಥವನ್ನೂ ತೆಗೆದುಕೊಳ್ಳುವುದಿಲ್ಲವೆಂಬ ಸಂಕಲ್ಪವನ್ನು ನಡೆಸುತ್ತಿದ್ದೆನಾದುದರಿಂದ ಕಸ್ತೂರಿಬಾಯಿಯು ನನಗಾಗಿ ಗೋಧಿಯೊಡಕಿನಲ್ಲಿ ಸಿಹಿ ಅನ್ನವನ್ನು ಮಾಡಿ ಅದಕ್ಕೆ ತುಪ್ಪದ ಬದಲು ಎಣ್ಣೆಯನ್ನು ಹಾಕಿ ಕಲಸಿದ್ದಳು. ನನಗಾಗಿ ಒಂದು ಬಟ್ಟಲು ತುಂಬ ಹೆಸರುಬೇಳೆ ಪಾಯಸ

ವನ್ನೂ ತೆಗೆದಿಟ್ಟಿದ್ದಳು. ಇವುಗಳನ್ನು ಕಂಡರೆ ನನಗೆ ಇಷ್ಟ. 'ಕಸ್ತೂ ರಿಬಾಯಿಯನ್ನು ಸಂತೋಷಪಡಿಸಿ ನನ್ನ ರುಚಿಯನ್ನು ತೃಪ್ತಿಪಡಿ ಸುವಷ್ಟು ಮಾತ್ರ ತಿನ್ನೋಣ, ಇದರಿಂದ ನನ್ನ ದೇಹಸ್ಥಿತಿಗೆ ಹಾನಿ ಯಾಗಲಾರದು.' - ಎಂದು ನಾನು ಅವನ್ನು ತಿಂದೆನು. ಆದರೆ ನನ್ನ ದುರ್ದೈವವು ಇಂತಹ ಸಮಯಕ್ಕೇ ಕಾದುಕೊಂಡಿದ್ದಿತು. ಸ್ವಲ್ಪ ತಿನ್ನು ವುದರ ಬದಲು ನಾನು ಹೊಟ್ಟೆತುಂಬ ಊಟಮಾಡಿದೆನು. ಇನ್ನು ಯಮ ಧರ್ಮರಾಯನಿಗೆ ಇದಕ್ಕಿಂತ ಹೆಚ್ಚಾಗಿ ವೀಳ್ಯವನ್ನು ಕೊಟ್ಟು ಕರೆಯ ಬೇಕಾದುದೇನೂ ಇರಲಿಲ್ಲ ಒಂದು ತಾಸಿನೊಳಗಾಗಿ ಆಮಶಂಕೆಯು ತೀಕ್ಷ್ಣವಾಗಿ ಕಾಣಿಸಿಕೊಂಡಿತು

ಆದಿನ ಸಂಜೆಯೇ ನಾನು ನಡಿಯಾದಿಗೆ ಹಿಂತಿರುಗಬೇಕಾಗಿದ್ದಿತು ಸಬರ್ಮತೀ ರೈಲ್ವೆ ನಿಲ್ದಾಣವು ಹತ್ತು ಫರ್ಲಾಂಗಿನಷ್ಟೇ ದೂರವಿದ್ದರೂ ನಾನು ಅಲ್ಲಿಗೆ ನಡೆದುಕೊಂಡು ಹೋಗಲು ಬಹು ಪ್ರಯಾಸವಾ ಯಿತು. ಶ್ರೀ ವಲ್ಲಭಭಾಯಿಯು ಅಹಮದಾಬಾದಿನಲ್ಲಿ ನಮ್ಮೊಡನೆ ಸೇರಿ ದರು. ನಾನು ಅಸ್ವಸ್ಥವಾಗಿದ್ದುದು ಅವರಿಗೆ ಗೊತ್ತಾಯಿತು ಆದರೆ ನನ್ನ ಬಾಧೆಯು ಎಷ್ಟು ಸಹನಾತೀತವಾಗಿದ್ದಿತೆಂಬುದನ್ನು ನಾನು ಅವ ರಿಗೆ ತೋರ್ಪಡಿಸಲಿಲ್ಲ

ನಾವು ನಡಿಯಾದನ್ನು ಸುಮಾರು ಹತ್ತು ಘಂಟೆಗೆ ಸೇರಿದೆವು ಅಲ್ಲಿನ ಹಿಂದೂ ಅನಾಥಾಶ್ರಮವನ್ನು ನಾವು ನಮ್ಮ ಕೇಂದ್ರವಾಗಿ ಮಾ ಡಿಕೊಂಡಿದ್ದೆವು. ಅದು ಸ್ಟೇಶನಿನಿಂದ ಅರ್ಧ ಮೈಲಿ ದೂರವಿದ್ದಿತು. ಹಾಗೂ ಹೀಗೂ ನಾನು ಅಲ್ಲಿಗೆ ಹೋಗಿ ಸೇರಿದೆನು. ಆದರೆ ಒಳಗಿನ ವೇದನೆಯು ಹೆಚ್ಚುತ್ತಾ ಹೋಯಿತು. ಕಾಲುಗಂಟೆಗೊಂದು ಬಾರಿ ಕಕ್ಕಸಕ್ಕೆ ಹೊಗಬೇಕಾಯಿತು. ಕಡೆಗೆ ನಾನು ಸೋತು ಹೋದೆನು. ನನಗಾಗುತ್ತಿದ್ದ ಕ್ರೂರವೇದನೆಯನ್ನು ಮಿತ್ರರಿಗೆ ತಿಳಿಸಿ ನಾನು ಹಾಸಿಗೆ ಹಿಡಿದೆನು. ಅಲ್ಲಿಯವರೆಗೆ ನಾನು ಎಲ್ಲರೂ ಉಪಯೋಗಿಸುತ್ತಿದ್ದ ಕಕ್ಕ ಸಕ್ಕೆ ಹೋಗಿ ಬರುತ್ತಿದ್ದೆನು. ಇದು ದೂರದಲ್ಲಿದ್ದಿತು ಆಗ ನಾನಿದ್ದ ಸ್ಥಳಕ್ಕೆ 'ಕಮೋಡ' (ರೋಗಿಗಳ ಮಲವಿಸರ್ಜನೆಗಾಗಿ ಉಪಯೋಗಿ

ಸುವ ಉಪಕರಣ) ವನ್ನು ತರಹೇಳಿದೆನು. ಇದನ್ನು ಕೇಳಲು ನನಗೆ ನಾಚಿಕೆಯಾಯಿತಾದರೂ ಬೇರೆ ದಾರಿಯಿರಲಿಲ್ಲ. ಶ್ರೀ ಫೂಲಚಂದ-ಬಾಪೂಜಿಯವರು ಓಡಿಹೋಗಿ ಒಂದು 'ಕಮೋಡ'ನ್ನು ತಂದರು. ಮಿತ್ರರೆಲ್ಲಾ ಚಿಂತಾತುರರಾಗಿ ನನ್ನನ್ನು ಸುತ್ತುಗಟ್ಟಿದರು. ಅವರು ನನ್ನ ಮೇಲೆ ಸುರಿಯುತ್ತಿದ್ದ ಪ್ರೇಮಕ್ಕೂ ನನ್ನನ್ನು ನೋಡಿಕೊಳ್ಳುತ್ತಿದ್ದ ಎಚ್ಚರಿಕೆಗೂ ಪಾರವಿಲ್ಲ ಆದರೆ ಅವರು ನನ್ನ ನೋವನ್ನು ಪರಿಹರಿಸುವಂತಿರಲಿಲ್ಲ ಅವರ ನಿಸ್ಸಹಾಯತೆಯನ್ನು ನನ್ನ ಹಟವು ಇನ್ನೂ ಹೆಚ್ಚಿಸಿತು. "ವೈದ್ಯರ ಸಹಾಯವೇ ಬೇಡ ನಾನು ಔಷಧವನ್ನು ತೆಗೆದುಕೊಳ್ಳುವದಿಲ್ಲ ನಾನು ಮಾಡಿಕೊಂಡ ತಪ್ಪಿಗೆ ಪ್ರಾಯಶ್ಚಿತ್ತವನ್ನು ಅನುಭವಿಸುವುದೇ ಲೇಸು" ಎಂದು ನಾನು ಹಟ ಹಿಡಿಯಲು ಅವರು ನಿರುಪಾಯರಾಗಿ ನೋಡುತ್ತಾ ನಿಂತರು. ಆ ಇಪತ್ತುನಾಲ್ಕು ಘಂಟೆಗಳ ಕಾಲದಲ್ಲಿ ಮುವ್ವತ್ತು ನಲವತ್ತು ಸಲ ಭೇದಿಯಾಗಿರಬೇಕು. ನಾನು ಉಪವಾಸಮಾಡಿದೆನು ಮೊಟ್ಟಮೊದಲು ಹಣ್ಣಿನ ರಸವನ್ನು ಕೂಡ ತೆಗೆದುಕೊಳ್ಳಲಿಲ್ಲ ಹಸಿವೇ ಪೂರ್ತಿಯಾಗಿ ನಿಂತುಹೋಗಿಬಿಟ್ಟಿದ್ದಿತು ಅಲ್ಲಿಯವರೆಗೂ ನಾನು ನನ್ನ ಶರೀರವು ವಜ್ರದಷ್ಟು ಗಟ್ಟಿಯಾದುದೆಂದು ತಿಳಿದುಕೊಂಡಿದ್ದೆನು ಆದರೆ ಇಂದು ಅದು ಮಣ್ಣಿನ ಮುದ್ದೆಯಾಗಿದ್ದುದು ನನಗೆ ಕಂಡುಬಂದಿತು ಅದಕ್ಕೆ ತಡೆದುಕೊಳ್ಳುವ ಶಕ್ತಿಯೇ ಹೋಗಿಬಿಟ್ಟಿದ್ದಿತು ಡಾ ಕಾನೂಗಾರವರು ಬಂದು ಔಷಧವನ್ನು ತೆಗೆದುಕೊಳ್ಳಬೇಕೆಂದು ನನಗೆ ಬಹಳವಾಗಿ ಹೇಳಿದರು ನಾನು ಒಪ್ಪಲಿಲ್ಲ ನನಗೆ 'ಇಂಜೆಕ್ಷನ್' ಮಾಡುವೆವೆಂದು ಹೇಳಿದರು. ಅದಕ್ಕೂ ನಾನು ಒಪ್ಪಲಿಲ್ಲ. ಆ ಕಾಲದಲ್ಲಿ 'ಇಂಜೆಕ್ಷನ್'ಗಳ ವಿಷಯವಾಗಿ ನನ್ನ ಅಜ್ಞಾನವು ಕೇವಲ ಹಾಸ್ಯಜನಕವಾಗಿದ್ದಿತು. 'ಇಂಜೆಕ್ಷನ್'ನಲ್ಲಿ ಯಾವದಾದರೊಂದು ಬಗೆಯ ಪ್ರಾಣಿಯ ಹಾಲು ಇದ್ದೇ ಇರಬೇಕೆಂದು ನಾನು ತಿಳಿದುಕೊಂಡಿದ್ದೆನು ಈ ವೈದ್ಯರು ಸೂಚಿಸಿದ 'ಇಂಜೆಕ್ಷನ್'ನಲ್ಲಿ ಕೇವಲ ಗಿಡಮೂಲಿಕೆಗಳಿಂದ ಸಿದ್ಧಪಡಿಸಿದ ಪದಾರ್ಥವು ಉಪಯೋಗಿಸಲ್ಪಡುತ್ತಿದ್ದಿತೆಂದು ನನಗೆ ಆಮೇಲೆ ತಿಳಿಯಬಂದಿತು. ಆದರೆ ಈ ಹೊತ್ತಿಗೆ ಅದನ್ನು ಉಪಯೋಗಿ

ಸಾ ತುಂಬ ತಡವಾಗಿ ಹೋಗಿದ್ದಿತು ಭೇದಿಯು ನಿಲ್ಲಲಿಲ್ಲ. ಇದರಿಂದ ನನಗೆ ಕೇವಲ ನಿಶ್ಶಕ್ತಿಯುಂಟಾಯಿತು. ಇದರ ಫಲವಾಗಿ ಸನ್ನಿಪಾತಜ್ವರವು ತಲೆದೋರಿತು. ನನ್ನ ಮಿತ್ರರು ಹೆಚ್ಚಾಗಿ ಭಯಗೊಂಡು ಇನ್ನೂ ಕೆಲವು ಮಂದಿ ವೈದ್ಯರನ್ನು ಕರೆತಂದರು. ಆದರೆ ತಮ್ಮ ಮಾತನ್ನು ಕೇಳದ ರೋಗಿಯನ್ನು ಕಟ್ಟಿಕೊಂಡು ಮಾಡುವುದೇನು ?

ಸೇಠ್ ಅಂಬಾಲಾಲರೂ ಅವರ ಹೆಂಡತಿಯವರೂ ನಡಿಯಾದಿಗೆ ಬಂದು ನನ್ನ ಜೊತೆಗಾರರೊಡನೆ ಆಲೋಚನೆಮಾಡಿ ನನ್ನನ್ನು ಬಹು ಎಚ್ಚರಿಕೆಯಿಂದ ಮಿರ್ಜಾಪುರ (ಅಹಮದಾಬಾದಿನ ಒಂದು ಭಾಗ)ದಲ್ಲಿರುವ ತಮ್ಮ ಬಂಗಲೆಗೆ ಸಾಗಿಸಿದರು. ಈ ಕಾಹಿಲೆಯಲ್ಲಿ ನನಗೆ ಮಾಡಿದಂತಹ ಸೇವೆಗಿಂತ ಹೆಚ್ಚು ನಿರ್ಮಲ ನಿಷ್ಕಾಮಪ್ರೇಮಪೂರಿತ ಶುಶ್ರೂಷೆಯನ್ನು ಪಡೆಯುವುದು ಯಾರಿಗೂ ಸಾಧ್ಯವಿರಲಿಲ್ಲ ಆದರೆ ಒಂದು ರೀತಿಯ ಸಣ್ಣಜ್ವರವು ಬಿಡದೆ ನಿಂತು ನನ್ನ ಶರೀರವನ್ನು ದಿನವೂ ಸವೆಸುತ್ತಾ ಬಂದಿತು ಜಾಡ್ಯವು ಬಹುಕಾಲ ನಿಲ್ಲುವುದೆಂದೂ ಒಂದು ವೇಳೆ ಅದು ಮರಣದಲ್ಲಿ ಕೊನೆಗಾಣಬಹುದೆಂದೂ ನನಗೆ ತೋರಿತು. ಸೇಠ್ ಅಂಬಾಲಾಲರ ಮನೆಯಲ್ಲಿ ನನ್ನ ಮೇಲೆ ವರ್ಷಿಸುತ್ತಿದ್ದ ಪ್ರೇಮಾದರಗಳಿಗೆ ಮಿತಿಯಿಲ್ಲದಿದ್ದರೂ ನನ್ನ ಮನಸ್ಸಿನಲ್ಲಿ ಅಶಾಂತಿಯುದಿಸಿ ನನ್ನನ್ನು ಆಶ್ರಮಕ್ಕೆ ಸಾಗಿಸಬೇಕೆಂದು ನಾನು ಅವರನ್ನು ಒತ್ತಾಯಪಡಿಸಿದೆನು ಅವರು ನನ್ನ ಆಗ್ರಹಕ್ಕೆ ವಶರಾಗಿ ನನ್ನನ್ನು ಅಲ್ಲಿಗೆ ಕರೆದುಕೊಂಡು ಹೋದರು.

ನಾನು ಆಶ್ರಮದಲ್ಲಿ ಹೀಗೆ ಬಾಧೆಯಿಂದ ಹಾಸಿಗೆಯಲ್ಲಿ ಹೊರಳಾಡುತ್ತಿರುವಾಗ ಶ್ರೀ ವಲ್ಲಭಭಾಯಿಯವರು ಜರ್ಮನಿಯು ಸಂಪೂರ್ಣವಾಗಿ ಸೋತುಹೋಯಿತೆಂಬ ವರ್ತಮಾನವನ್ನು ತಂದರು ಇನ್ನೇನೂ ಸೈನಿಕರನ್ನು ಕೂಡಿಸಬೇಕಾದುದಿಲ್ಲವೆಂಬುದಾಗಿ ಕಮಿಷನರು ಹೇಳಿಕಳುಹಿಸಿದುದನ್ನೂ ಅವರು ನನಗೆ ತಿಳಿಸಿದರು. ನಾನು ಇನ್ನುಮೇಲೆ ಯೋಧರನ್ನು ಸಂಗ್ರಹಿಸಬೇಕಾದುದಿಲ್ಲವೆಂಬ ಸಂಗತಿಯು ನನ್ನ ಮನಸ್ಸಿನ ಮೇಲಿನ ಹೊರೆಯನ್ನು ಬಹುಮಟ್ಟಿಗೆ ಇಳಿಸಿತು.

ನಾನು ಈಗ ಜಲಚಿಕಿತ್ಸಾಪ್ರಯೋಗವನ್ನು ಮಾಡುತ್ತಿದ್ದೆನು. ಇದರಿಂದ ನನಗೆ ಸ್ವಲ್ಪ ಉತ್ತಮವಾದರೂ ಶರೀರದಾರ್ಢ್ಯವನ್ನು ಪುನಃ ಸಂಪಾದಿಸುವುದು ಕಷ್ಟಸಾಧ್ಯವಾಗಿದ್ದಿತು. ಅನೇಕಮಂದಿ ವೈದ್ಯರು ಲೆಕ್ಕವಿಲ್ಲದಷ್ಟು ಸಲಹೆಗಳನ್ನು ಕೊಟ್ಟರು ಆದರೆ ಯಾವುದನ್ನೂ ತೆಗೆದುಕೊಳ್ಳಲು ನನ್ನ ಮನಸ್ಸು ಒಪ್ಪಲಿಲ್ಲ. ಇಬ್ಬರು ಮೂವರು ನಾನು ಹಾಲಿಗೆ ಬದಲು (ನಾನು ಹಾಲನ್ನು ತೆಗೆದುಕೊಳ್ಳುವುದಿಲ್ಲವೆಂದು ಪ್ರತಿಜ್ಞೆ ಮಾಡಿದ್ದುದರಿಂದ) ಮಾಂಸದ ಸಾರನ್ನು ಸೇವಿಸಬೇಕೆಂದು ಸೂಚಿಸಿದರಲ್ಲದೆ ಇದಕ್ಕೆ ಆಧಾರವಾಗಿ ಆಯುರ್ವೇದ ಗ್ರಂಥಗಳಲ್ಲಿನ ಶ್ಲೋಕಗಳನ್ನು ಹೇಳಿದರು ಅವರಲ್ಲಿ ಒಬ್ಬರು ನಾನು ಕೋಳಿ ಮೊಟ್ಟೆಯನ್ನು ತಿನ್ನಬೇಕೆಂದು ಬಹುವಾಗಿ ಹೇಳಿದರು ಆದರ ಇವರೆಲ್ಲರಿಗೂ ನನ್ನ ಉತ್ತರವು ಒಂದೇ ಆಗಿದ್ದಿತು—ಇಲ್ಲವೆಂದು

ನನಗೆ ಇದು ತಿನ್ನಬಹುದು, ಇದು ತಿನ್ನಬಾರದು ಎಂಬ ವಿಚಾರವು ಶಾಸ್ತ್ರಪ್ರಮಾಣದಿಂದ ನಿರ್ಧರಿಸತಕ್ಕುದಾಗಿರಲಿಲ್ಲ. ನನ್ನ ಜೀವನಪಥವನ್ನು ನಿರ್ಣಯಿಸುವ ನಿಯಮಗಳು ಬಾಹ್ಯಪ್ರಮಾಣವನ್ನು ಅವಲಂಬಿಸಿರುವುವಾಗಿರಲಿಲ್ಲ ಈ ಖಾದ್ಯಾಖಾದ್ಯ ಪ್ರಶ್ನೆಯು ನನ್ನ ಜೀವನಪಥದೊಂದಿಗ ಸೇರಿಕೊಂಡು ಹೋಗಿದ್ದಿತು ನನ್ನ ಅಂತರಾತ್ಮನ ಪ್ರೇರಣೆಯನ್ನು ತ್ಯಜಿಸಿಯಾದರೂ ಜೀವಿಸಬೇಕೆಂಬ ಇಚ್ಛೆಯು ನನಗಿರಲಿಲ್ಲ. ನನ್ನ ಹೆಂಡತಿ ಮಕ್ಕಳು ಮಿತ್ರರಮೇಲೆ ಒಂದು ನಿಯಮವನ್ನು ನಿರ್ದಾಕ್ಷಿಣ್ಯವಾಗಿ ಹೊರಿಸಿ ನಾನೇ ಆ ನಿಯಮವನ್ನು ಧಿಕ್ಕರಿಸುವುದೆಂತು ?

ಈ ರೀತಿಯಾಗಿ ಕಾಹಿಲೆಯು ಬಹುಕಾಲ ನಿಂತಿತು ನನ್ನ ಜೀವನದಲ್ಲಿ ಇದೇ ಬಹುದಿನ ಕಾಹಿಲೆಯಲ್ಲಿ ನರಳಲು ಮೊದಲನೆಯ ಸಲ. ನನ್ನ ನಿಯಮಗಳನ್ನು ಪರಾಮರ್ಶಿಸಿ ಪರೀಕ್ಷಿಸುವುದಕ್ಕೆ ಇದು ಅನನ್ಯವಾದ ಅವಕಾಶವನ್ನು ಕಲ್ಪಿಸಿಕೊಟ್ಟಿತು ಒಂದು ರಾತ್ರಿ ನಾನು ನಿರಾಶೆಗೆ ತುತ್ತಾದೆನು. ನಾನು ಮೃತ್ಯು ಸಮ್ಮುಖದಲ್ಲಿರುವೆನೆಂದು ನನಗೆ ತೋರಿತು. ಆಗ ಶ್ರೀ ಅನಸೂಯಾಬಾಯಿಯವರಿಗೆ ಹೇಳಿಕಳುಹಿಸಿದೆನು.

ಅವರು ಆಶ್ರಮಕ್ಕೆ ಬಂದರು. ವಲ್ಲಭಭಾಯಿಯವರೂ ಡಾ. ಕಾನೂಗಾರವರೊಡನೆ ಬಂದರು. ವೈದ್ಯರು ನನ್ನ ನಾಡಿಯನ್ನು ನೋಡಿ "ನಿಮ್ಮ ನಾಡಿಯು ಸರಿಯಾಗಿಯೇ ಇದೆ. ಯೋಚನೆಗೆ ಕಾರಣವೇ ಇಲ್ಲ. ಇದು ಅತ್ಯಂತ ನಿಶ್ಶಕ್ತಿಯಿಂದೊದಗಿದ ಅಧೈರ್ಯವೇ ಹೊರತು ಇನ್ನೇನೂ ಅಲ್ಲ." ಎಂದು ಹೇಳಿದರು. ಆದರೆ ಇದರಿಂದ ನನಗೆ ಮನಶ್ಶಾಂತಿಯೇನೂ ಉಂಟಾಗಲಿಲ್ಲ. ಆ ರಾತ್ರಿ ನಿದ್ರೆಯಿಲ್ಲದೆ ಕಳೆದೆನು.

ಬೆಳಕು ಹರಿಯಿತು. ಪ್ರಾಣವೇನೂ ಹೋಗಿರಲಿಲ್ಲ. ಆದರೆ ಅಂತ್ಯವು ಸಮೀಪಿಸಿದ್ದಿತೆಂಬ ತೋರಿಕೆಯನ್ನು ನಾನು ಹೊಡೆದೋಡಿಸಲಾಗಲಿಲ್ಲ. ಆದುದರಿಂದ ನಾನು ಎದ್ದಿದ್ದಾಗಲೆಲ್ಲ ಆಶ್ರಮವಾಸಿಗಳ ಗೀತಾಪಠನವನ್ನು ಕೇಳುವುದರಲ್ಲಿ ಕಳೆಯುತ್ತಿದ್ದೆನು. ನನಗೆ ಓದುವುದಕ್ಕಾಗುತ್ತಿರಲಿಲ್ಲ. ಮಾತನಾಡುವುದಕ್ಕೆ ನನಗೆ ಇಷ್ಟವಿರಲಿಲ್ಲ. ಅಲ್ಪಸ್ವಲ್ಪ ಮಾತನಾಡಿದರೂ ಅದರಿಂದ ಮೆದುಳಿಗೆ ಬಾಧೆಯಾಗುತ್ತಿದ್ದಿತು. ಜೀವಿಸುವುದರಲ್ಲಿ ಉತ್ಸಾಹವೇ ಕಳೆದುಹೋಗಿದ್ದಿತು. ಕೇವಲ ಉಸಿರಾಡುವುದಕ್ಕಾಗಿ ಜೀವಿಸಿರುವುದನ್ನು ನಾನು ಎಂದೂ ಇಷ್ಟಪಟ್ಟಿಲ್ಲ. ಹೀಗೆ ಏನೂ ಮಾಡದೆ ಮಿತ್ರರ ಮತ್ತು ಜೊತೆಗಾರರ ಸೇವೆಯನ್ನು ಸ್ವೀಕರಿಸುತ್ತಾ ಶರೀರವು ನಿದಾನವಾಗಿ ನವೆಯುತ್ತಿರುವುದನ್ನು ನೋಡುತ್ತಾ ನಿಸ್ಸಹಾಯವಾಗಿ ಜೀವಿಸಿರುವುದೊಂದು ತೀವ್ರವೇದನೆಯಾಗಿದ್ದಿತು.

ಸಾವು ಈಗಲೋ ಆಗಲೋ ಬರುವುದೆಂದು ನಾನು ಹೀಗೆ ನಿರೀಕ್ಷಿಸುತ್ತಾ ಮಲಗಿರಲು ಡಾ. ತಳವಳ್‍ಕರರು ಒಬ್ಬ ವಿಚಿತ್ರಪ್ರಾಣಿಯನ್ನು ಜೊತೆಗೆ ಕರೆದುಕೊಂಡು ಬಂದರು. ಅವರು ಮಹಾರಾಷ್ಟ್ರದವರು. ಅವರೇನೂ ಪ್ರಸಿದ್ಧ ಪುರುಷರಲ್ಲ. ಆದರೆ ಅವರನ್ನು ನೋಡಿದೊಡನೆಯೇ ಅವರೂ ನನ್ನಂತೆಯೇ ಒಬ್ಬ ಹುಚ್ಚರೆಂದು ಕಂಡುಹಿಡಿದೆನು. ಅವರು ತಮ್ಮ ಚಿಕಿತ್ಸೆಯನ್ನು ನನ್ನ ಮೇಲೆ ಪ್ರಯೋಗಿಸಲು ಬಂದಿದ್ದರು. ಅವರು ಗ್ರಾಂಟ್ ವೈದ್ಯಶಾಲೆಯಲ್ಲಿ ಪಾಠಕ್ರಮವನ್ನು ಹೆಚ್ಚುಕಡಿಮೆ ಮುಗಿಸಿದ್ದರು. ಆದರೆ ಉಪಾಧಿ (ಡಿಗ್ರಿ)ಯನ್ನು ತೆಗೆದುಕೊಂ

ಕಲಿಲ್ಲ. ಅವರು ಬ್ರಹ್ಮಸಮಾಜಕ್ಕೆ ಸೇರಿದವರೆಂದು ನನಗೆ ಆಮೇಲೆ ತಿಳಿಯಬಂದಿತು. ಕೇಳ್ಕರರೆಂದು ಅವರ ಹೆಸರು. ಅತಿ ಸ್ವತಂತ್ರಪ್ರವೃತ್ತಿಯ ಹಟವಾದಿಗಳವರು. ಪ್ರತಿಯೊಂದಕ್ಕೂ ಅವರು ತಮ್ಮ ಮಣ್ಣಿನ ಗಡ್ಡೆಯ ಶುಶ್ರೂಷೆಯನ್ನು ಮಾಡುತ್ತಾರೆ ಆ ಚಿಕಿತ್ಸೆಯನ್ನೇ ನನಗೂ ಮಾಡಬೇಕೆಂದು ಅವರು ಇಚ್ಛಿಸಿದರು. ನಾವು ಅವರಿಗೆ 'ಎಸ್ ಡಾಕ್ಟರ್' (ಮಣ್ಣುಗಡ್ಡೆಯ ವೈದ್ಯರು) ಎಂಬ ಹೆಸರನ್ನು ಕೊಟ್ಟೆವು. ಸುಶಿಕ್ಷಿತರಾದ ವೈದ್ಯರ ದೃಷ್ಟಿಗೆ ಬೀಳದಿರುವ ಕೆಲವು ವಿಷಯಗಳನ್ನು ತಾವು ಕಂಡುಹಿಡಿದಿರುವುವೆಂದು ಅವರಿಗೆ ದೃಢವಿಶ್ವಾಸವುಂಟು. ಆ ನಂಬಿಕೆಯು ನನ್ನಲ್ಲಿಯೂ ಬೇರೂರುವ ಹಾಗೆ ಮಾಡಲು ಅವರು ಶಕ್ತರಾಗಿಲ್ಲವೆಂಬುದು ನಮ್ಮಿಬ್ಬರಿಗೂ ದುರಾದೃಷ್ಟದ ವಿಷಯ ಒಂದು ಮಿತಿಯವರೆಗೆ ನನಗೆ ಅವರ ಚಿಕಿತ್ಸಾಕ್ರಮದಲ್ಲಿ ನಂಬಿಕೆಯುಂಟು. ಆದರೆ ಕೆಲವು ವಿಷಯಗಳ ನಿರ್ಧಾರದಲ್ಲಿ ಅವರು ಅತ್ಯಾತುರದಿಂದ ವರ್ತಿಸಿರುವರೆಂದು ನನ್ನ ಶಂಕೆ.

ಅವರು ಕಂಡುಹಿಡಿದಿರುವ ವಿಷಯಗಳ ಗುಣಾವಗುಣಗಳಂತಿರಲಿ, ಅವರು ತಮ್ಮ ಪ್ರಯೋಗವನ್ನು ನನ್ನ ಶರೀರದಮೇಲೆ ನಡೆಸಲು ಅವಕಾಶ ಕೊಟ್ಟೆನು. ಬಾಹ್ಯಚಿಕಿತ್ಸೆಯನ್ನು ನಾನು ಗಮನಿಸಲಿಲ್ಲ ಶರೀರದ ಮೇಲೆಲ್ಲಾ ಹಿಮದಗಡ್ಡೆಯನ್ನು ಕಟ್ಟುವುದೇ ಅವರ ಚಿಕಿತ್ಸೆ. ತಮ್ಮ ಪ್ರಯೋಗದಿಂದ ನನ್ನ ಶರೀರದಮೇಲೆ ಉಂಟಾಯಿತೆಂದು ಅವರು ಹೇಳುವ ಪರಿಣಾಮವನ್ನೆಲ್ಲಾ ನಾನು ಒಪ್ಪಲಾಗದಿದ್ದರೂ ಅದರಿಂದ ನನ್ನಲ್ಲಿ ಹೊಸ ಆಸೆಯು ಅಂಕುರಿಸಿತೆಂದೂ ನವಚೈತನ್ಯವು ಉದಿಸಿತೆಂದೂ ನಾನು ಒಪ್ಪಿಕೊಳ್ಳಬೇಕು. ಸಹಜವಾಗಿ ಮನಸ್ಸಿನಲ್ಲಿ ಉಂಟಾದ ಬದಲಾವಣೆಯಿಂದ ಶರೀರಸ್ಥಿತಿಯು ಮಾರ್ಪಟ್ಟಿತು ನನಗೆ ಹಸಿವು ಹುಟ್ಟಿತು. ಐದು ಹತ್ತು ನಿಮಿಷ ಮೆತ್ತಗೆ ಒಡಾಡತೊಡಗಿದೆನು ಅವರು ಈಗ ನನ್ನ ಆಹಾರದಲ್ಲಿ ತಿದ್ದುಪಾಟನ್ನು ಸೂಚಿಸಿದರು "ನೀವು ಹಸಿಯ ಮೊಟ್ಟೆಗಳನ್ನು ಸೇವಿಸಿದರೆ ಅದು ನಿಮಗೆ ಹೆಚ್ಚು ಪುಷ್ಟಿಯನ್ನು ಕೊಡುವುದರಿಂದ ನಿಮ್ಮ ದೇಹಕ್ಕೆ ಶಕ್ತಿಯು ಇನ್ನೂ ಶೀಘ್ರವಾಗಿ ಬರುತ್ತದೆ. ಮೊಟ್ಟೆಯು ಕೂಡ ಹಾಲಿನಷ್ಟೇ ನಿರ್ದೋಷವಾದ ಪದಾರ್ಥ. ಅದನ್ನು

ನೀವು ಮಾಂಸವೆನ್ನುವ ಹಾಗಿಲ್ಲ ಅಹುದಲ್ಲದೆ ಎಲ್ಲಾ ಮೊಟ್ಟೆಗಳಿಂದಲೂ ಮರಿಗಳು ಹುಟ್ಟುವುದಿಲ್ಲವೆಂಬುದು ನಿಮಗೆ ತಿಳಿದಿದೆಯೋನು ? ಇಂತಹ ನಿರ್ಬೀಜವಾದ ಮೊಟ್ಟೆಗಳು ಪೇಟೆಯಲ್ಲಿ ದೊರಕುತ್ತವೆ.'' ನಾನು ಇಂತಹ ಮೊಟ್ಟೆಗಳನ್ನು ಕೂಡ ತಿನ್ನಲು ಸಿದ್ಧನಾಗಿರಲಿಲ್ಲ. ಆದರೆ ನಾನು ಸಾರ್ವಜನಿಕ ಕಾರ್ಯಗಳಲ್ಲಿ ಕುತೂಹಲವಿಡುವುದಕ್ಕೆ ಸಾಕಾದಷ್ಟು ನನ್ನ ಶರೀರಸ್ಥಿತಿಯು ಉತ್ತಮಗೊಂಡಿದ್ದಿತು.

---

೩೦

# ರೌಲಟ್ ಕಾನೂನು ಮತ್ತು ನನ್ನ ಧರ್ಮಸಂಕಟ

ನಾನು ಹೀಗೆ ಇನ್ನೂ ಕಾಹಿಲೆಯಿಂದ ಏಳುವುದಕ್ಕಿಲ್ಲ, ಅಷ್ಟರಲ್ಲಿಯೇ ಆಗತಾನೆ ವೃತ್ತಪತ್ರಗಳಲ್ಲಿ ಪ್ರಕಟವಾಗಿದ್ದ ರೌಲಟ್ ಸಮಿತಿಯ ವರದಿಯು ಆಕಸ್ಮಿಕವಾಗಿ ನನ್ನ ಕಣ್ಣಿಗೆ ಬಿದ್ದಿತು. ಆ ಸಮಿತಿಯ ಸೂಚನೆಗಳನ್ನು ನೋಡಿ ನನಗೆ ಗಾಬರಿಯಾಯಿತು. ಶ್ರೀ ವಲ್ಲಭಭಾಯಿಯು ನನ್ನನ್ನು ಹೆಚ್ಚು ಕಡಮೆ ಪ್ರತಿನಿತ್ಯವೂ ಬಂದು ನೋಡಿಕೊಂಡು ಹೋಗುತ್ತಿದ್ದರು. ನಾನು ಅವರಿಗೆ ನನ್ನ ಭಯಸಂಶಯಗಳನ್ನು ವ್ಯಕ್ತಪಡಿ- "ಇದಕ್ಕೆ ಏನಾದರೂ ಮಾಡಬೇಕು." ಎಂದು ಹೇಳಿದೆನು. ಅವರು "ಇಂದಿನ ಪರಿಸ್ಥಿತಿಯಲ್ಲಿ ನಾವು ಏನುತಾನೆ ಮಾಡುವ ಹಾಗಿದ್ದೇವೆ ?" ಎಂದು ಕೇಳಿದರು. ಅದಕ್ಕೆ ನಾನು "ಇದನ್ನಿದಿರಿಸುವೆವೆಂದು ಪ್ರತಿಜ್ಞೆಮಾಡಲು ಸ್ವಲ್ಪ ಜನ ಸಿಕ್ಕಿದರೂ ಸಾಕು ಇದಕ್ಕೆ ಲಕ್ಷ್ಯಕೊಡದೆ ರೌಲಟ್ ಸಮಿತಿಯ ಸಲಹೆಗಳಿಗನುಸಾರವಾಗಿ ಕಾನೂನನ್ನು ನಿರ್ಮಿಸಿದರೆ ನಾವು ಒಡನೆಯೇ ಸತ್ಯಾಗ್ರಹವನ್ನು ನಡೆಸಬೇಕು. ನಾನು ಹೀಗೆ ಕಾಹಿಲೆ ಹಿಡಿದು ಮಲಗಿಲ್ಲದಿದ್ದಿದ್ದರೆ ನಾನೊಬ್ಬನೇ ಇದಿರಿಸಿ ಇತರರೂ ನನ್ನನ್ನು ಹಿಂಬಾಲಿಸುವರೆಂದು ನಿರೀಕ್ಷಿಸುತ್ತಿದ್ದೆನು ಆದರೆ ನನ್ನ ಈಗಿನ ನಿರುಪಾಯಸ್ಥಿತಿಯಲ್ಲಿ ಈ ಕೆಲಸಮಾಡಲು ಶಕ್ತಿಯೇ ಇಲ್ಲವೆಂದು ನನಗೆ ತೋರುತ್ತದೆ." ಎಂದೆನು.

ಈ ಮಾತುಕತೆಯ ಫಲವಾಗಿ ನನಗೆ ಪರಿಚಿತರಾದ ನಾಲ್ಕಾರು ಮಂದಿಯ ಸಣ್ಣ ಸಭೆಯೊಂದನ್ನು ಕೂಡಿಸಬೇಕೆಂದು ನಿರ್ಧಾರವಾಯಿತು. ರೌಲಟ್ ಸಮಿತಿಯ ವರದಿಯಲ್ಲಿ ಪ್ರಕಟವಾಗಿದ್ದ ಸಾಕ್ಷ್ಯದ ಆಧಾರದ ಮೇಲೆ ಸಮಿತಿಯ ಸಲಹೆಗಳು ನಿಲ್ಲತಕ್ಕವಾಗಿರಲೇ ಇಲ್ಲವೆಂಬುದು ನನ್ನ ಅಭಿಮತವಾಗಿದ್ದಿತು. ಆತ್ಮಗೌರವವುಳ್ಳ ಯಾವ ಜನರೂ ಅದನ್ನನುಸರಿಸಲಾಗುವುದಿಲ್ಲವೆಂದು ನನಗೆ ತೋರಿತು.

ಕಟ್ಟಕಡೆಗೆ ಸಭೆಯು ಆಶ್ರಮದಲ್ಲಿ ಕೂಡಿತು ಇಪ್ಪತ್ತು ಮಂದಿ ಜನರನ್ನು ಕೂಡ ಅಲ್ಲಿಗೆ ಕರೆದಿರಲಿಲ್ಲ ನನಗೆ ಜ್ಞಾಪಕವಿರುವ ಮಟ್ಟಿಗೆ

ಶ್ರೀ. ವಲ್ಲಭಭಾಯಿಯನ್ನುಳಿದು ಅಲ್ಲಿಗೆ ಬಂದಿದ್ದವರಾರೆಂದರೆ: ಶ್ರೀಮತೀ ಸರೋಜಿನೀ ನಾಯಿಡು, ಮಿ. ಹಾರ್ನಿಮನ್, ದಿವಂ. ಉಮರ್‍ಸು ಭಾನಿ, ಶ್ರೀ ಶಂಕರಲಾಲ್ ಬ್ಯಾಂಕರ್ ಮತ್ತು ಶ್ರೀ ಅನಸೂಯಾ ಬಾಯಿ. ಸತ್ಯಾಗ್ರಹ ಪ್ರತಿಜ್ಞೆಯು ಸಭೆಯಲ್ಲಿಯೇ ಸಿದ್ಧವಾಯಿತು. ಅಲ್ಲಿದ್ದವರೆಲ್ಲರೂ ಅದಕ್ಕೆ ಸಹಿಹಾಕಿದರೆಂದು ನನ್ನ ನೆನಪಿಗೆ ಬರುತ್ತದೆ. ನಾನು ಆಗ ಯಾವ ಪತ್ರಿಕೆಯನ್ನೂ ನಡೆಸುತ್ತಿರಲಿಲ್ಲ. ಆಗಾಗ ದೈನಿಕ ಪತ್ರಿಕೆಗಳಲ್ಲಿ ನನ್ನ ಅಭಿಪ್ರಾಯಗಳನ್ನು ಹೊರಗೆಡಹುತ್ತಿದ್ದೆನು. ಈ ಪದ್ಧತಿಯನ್ನು ನಾನು ಈಗಲೂ ಅನುಸರಿಸಿದೆನು ಶ್ರೀ ಶಂಕರಲಾಲ್ ಬ್ಯಾಂಕರರು ಈ ಚಳವಳಿಯಲ್ಲಿ ಅತ್ಯಂತ ಶ್ರದ್ಧೆಯನ್ನು ವಹಿಸಿದರು ಕಾರ್ಯಕ್ರಮವನ್ನು ಸುವ್ಯವಸ್ಥೆಯಿಂದಲೂ ಎಡೆಬಿಡದೆಯೂ ನಡೆಸಲು ಅವರಿಗಿರುವ ಅಸಾಧಾರಣ ಶಕ್ತಿಯ ಅರಿವು ನನಗೆ ಈ ಸಂದರ್ಭದಲ್ಲಿಯೇ ಮೊಟ್ಟಮೊದಲು ಉಂಟಾದುದು

ಆ ಕಾಲದಲ್ಲಿ ನಡೆಯುತ್ತಿದ್ದ ಯಾವ ಸಂಸ್ಥೆಯಾಗಲಿ ಸತ್ಯಾಗ್ರಹ ದಂತಹ ನವೀನ ಆಯುಧವನ್ನು ಪಯೋಗಿಸಲೊಪ್ಪುವುದೆಂಬ ಆಸೆಯು ನಿರಾಧಾರವೆಂದು ನನಗೆ ತೋರಿತು ಆದುದರಿಂದ ನನ್ನ ಸೂಚನೆಯಂತೆ ಸತ್ಯಾಗ್ರಹ ಸಭೆಯೆಂಬ ಪ್ರತ್ಯೇಕ ಸಂಸ್ಥೆಯೊಂದು ಸ್ಥಾಪಿತವಾಯಿತು. ಅದರ ಪ್ರಮುಖ ಸದಸ್ಯರು ಮುಂಬಯಿಯವರೇ ಆಗಿದ್ದುದರಿಂದ ಸಹಜ ವಾಗಿ ಅದರ ಕೇಂದ್ರವು ಮುಂಬಯಿಯಲ್ಲಿಯೇ ಏರ್ಪಟ್ಟಿತು. ಪ್ರತಿಜ್ಞಾ ಪತ್ರಕ್ಕೆ ಅನೇಕ ಮಂದಿ ಸಹಿ ಹಾಕತೊಡಗಿದರು. ಪ್ರಸಿದ್ಧ ಪತ್ರಿಕೆ ಗಳು ಹೊರಟುವು. ಜನರ ಸಭೆಗಳು ಕೂಡಿದುವು ಇದನ್ನೆಲ್ಲಾ ನೋಡಿದರೆ ಖೇಡಾಕದನದ ಸಾಮಾನ್ಯ ಲಕ್ಷಣಗಳೆಲ್ಲಾ ನೆನಪಿಗೆ ಬರು ತ್ತಿದ್ದುವು.

ನಾನು ಸತ್ಯಾಗ್ರಹ ಸಭೆಯ ಅಧ್ಯಕ್ಷನಾದೆನು ಆ ಸಭೆಯಲ್ಲಿದ್ದ ಸುಶಿಕ್ಷಿತ ವರ್ಗಕ್ಕೂ ನನಗೂ ಏಕಮತವಿರುವ ಸಂಭವವು ಬಹು ಕಡ ಮೆಯೆಂದು ನನಗೆ ಶೀಘ್ರದಲ್ಲಿಯೇ ಗೊತ್ತಾಯಿತು. ಸಭೆಯ ಕೂಟ ಗಳಲ್ಲಿ ಗುಜರಾತಿ ಭಾಷೆಯನ್ನು ಬಳಸಬೇಕೆಂಬ ನನ್ನ ಹಟವೂ ವಿಚಿತ್ರ ವಾಗಿ ಕಂಡು ಬಂದ ನನ್ನ ಇತರ ಕೆಲವು ಕಾರ್ಯಪದ್ಧತಿಗಳೂ ಅವರನ್ನು

ವಿಶೇಷ ಚಿಂತೆಗೂ ಪೇಚಾಟಕ್ಕೂ ಸಿಕ್ಕಿಸಿದುವು. ಆದರೆ ಅವರು ಔದಾರ್ಯದಿಂದ ನನ್ನ ವೈಪರೀತ್ಯಗಳನ್ನು ಸಹಿಸಿದರೆಂದು ನಾನು ಒಪ್ಪಿಕೊಳ್ಳಬೇಕು.

ಆದರೂ ಸಭೆಯು ಬಹುಕಾಲ ಬದುಕಿರಲಾರದೆಂದು ನನಗೆ ಮೊಟ್ಟಮೊದಲಿನಿಂದ ಸ್ಪಷ್ಟವಾಗಿ ತೋರುತ್ತಿದ್ದಿತು. ಸತ್ಯಾಹಿಂಸೆಗಳ ಪ್ರಾಧಾನ್ಯವನ್ನು ನಾನು ಪ್ರತಿಪಾದಿಸುತ್ತಿದ್ದುದು ಆಗಲೇ ಕೆಲವರಿಗೆ ಅಪ್ರಿಯವೆನಿಸಿತೆಂಬುದು ನನ್ನ ದೃಷ್ಟಿಗೆ ಬೀಳದೆ ಇರಲಿಲ್ಲ. ಹೀಗಿದ್ದರೂ ಪ್ರಾರಂಭದಲ್ಲಿ ನಮ್ಮ ಚಳವಳಿಯು ಅತಿರಭಸದಿಂದ ಪ್ರಬಲಗೊಂಡಿತು.

ಕಾರ್ಯವು ಮುಂದುವರಿದಂತೆ ಜೀವಿಸಿರಲಿಕ್ಕೆ ನನ್ನ ಆಸೆಯೂ ಬೆಳೆಯುತ್ತ ಬಂದಿತು. ಪುನಃ ಆರೋಗ್ಯಸ್ಥಿತಿಗೆ ಬರಲು ನಾನು ಆತುರನಾದೆನು. ಮಾಥೇರಾನಿಗೆ ಹೋದರೆ ನನ್ನ ಶರೀರಸ್ಥಿತಿಯು ಇನ್ನೂ ಶೀಘ್ರವಾಗಿ ಉತ್ತಮಗೊಳ್ಳುವುದೆಂದು ನನ್ನ ಮಿತ್ರರೂ ವೈದ್ಯರೂ ಸಲಹೆ ಕೊಟ್ಟರು. ನಾನು ಅಲ್ಲಿಗೆ ಹೋದೆನು. ಆದರೆ ಅಲ್ಲಿನ ನೀರು ಬಹು ಉಪ್ಪಾದುದರಿಂದ ನಾನು ಅಲ್ಲಿ ನಿಲ್ಲುವದು ಬಹು ಕಷ್ಟವಾಯಿತು. ಆಮಶಂಕೆಯ ಬಾಧೆಯಿಂದ ನನ್ನ ಆಸನದ್ವಾರವು ಬಹು ನಾಜೋಕಾಗಿ ಬಿಟ್ಟು ಅಲ್ಲಿ ಹುಣ್ಣಾಗಿ ಮಲವಿಸರ್ಜನೆಯು ಕಾಲದಲ್ಲಿ ತೀವ್ರಯಾತನೆಯಾಗುತ್ತಿದ್ದುದರಿಂದ ಆಹಾರ ತೆಗೆದುಕೊಳ್ಳಬೇಕೆಂದರೇ ನನ್ನ ಮೈ ಜುಂ ಎನ್ನುತ್ತಿದ್ದಿತು. ಒಂದು ವಾರ ತುಂಬುವದಕ್ಕಿಂತ ಮುಂಚೆಯೇ ನಾನು ಮಾಥೇರಾನನ್ನು ಬಿಟ್ಟು ಓಡಿಹೋಗಬೇಕಾಯಿತು. ಈಗ ಶಂಕರಲಾಲ ಬ್ಯಾಂಕರರು ನನ್ನ ಆರೋಗ್ಯರಕ್ಷಣೆಯ ಭಾರವನ್ನು ವಹಿಸಿ ಡಾ. ದಲಾಲರ ಸಲಹೆಯನ್ನು ಕೇಳಬೇಕೆಂದು ನನ್ನನ್ನು ಒತ್ತಾಯಪಡಿಸಿದರು. ಅದೇ ಪ್ರಕಾರ ಡಾ. ದಲಾಲರಿಗೆ ಹೇಳಿ ಕಳುಹಿಸಲು ಅವರು ಬಂದರು, ಒಂದು ಕ್ಷಣದಲ್ಲಿಯೇ ಮನೋನಿರ್ಧಾರವನ್ನು ಮಾಡಲು ಅವರಿಗಿದ್ದ ಶಕ್ತಿಯು ನನ್ನ ಮನ

ಸ್ಸನ್ನು ನೆರೆಹಿಡಿಯಿತು. ಹುಣ್ಣಿಗೆ ಒಸನೆಯೇ ಶಸ್ತ್ರಚಿಕಿತ್ಸೆ ಮಾಡ ಬೇಕೆಂದು ಅವರು ಇಚ್ಛಿಸಿದರು ನಾನು 'ಅಗತ್ಯವಾಗಿ ಆಗಲಿ' ಎಂ ದೆನು. ನನ್ನ ಕೊರಡಿಯಲ್ಲಿಯೇ ಅದನ್ನು ನೆರವೇರಿಸಲು ಅವರಿಗೆ ಯಾವ ಅಭ್ಯಂತರವೂ ತೋರಲಿಲ್ಲ. ಅದು ಮರುದಿನ ಅಲ್ಲಿಯೇ ನಡೆ ಯಿತು. ಅದರಿಂದ ಪೂರ್ಣ ಸಾಫಲ್ಯವೂ ಲಭಿಸಿತು.

ಆದರೆ ಅಷ್ಟಕ್ಕೇ ಅವರಿಗೆ ತೃಪ್ತಿಯಾಗಲಿಲ್ಲ "ನೀವು ಹಾಲನ್ನು ಸೇವಿಸಿದ ಹೊರತು ನಿಮ್ಮ ಶರೀರವನ್ನು ಮೊದಲಿನ ಸ್ಥಿತಿಗೆ ತರಲಾ ರೆನು. ಅದರ ಜೊತೆಗೆ ನೀವು ಶಂಖಪಾಷಾಣ (ಆರ್ಸೆನಿಕ್) ದ ಮತ್ತು ಕಬ್ಬಿಣದ ಚೇಕಳಿ (ಇಂಜೆಕ್ಷನ್) ಯನ್ನು ಚುಚ್ಚಿಸಿಕೊಂಡರೆ ನಿಮ್ಮ ಶರೀರವು ಮತ್ತೆ ಸುದೃಢವಾಗುವುದೆಂದು ನಾನು ಭರವಸೆ ಕೊಡ ವೆನು." ಎಂದರವರು.

"ನೀವು ಚೇಕಳಿಯನ್ನೇನೋ ಕೊಡಬಹುದು. ಆದರೆ ಹಾಲಿನ ವಿಷಯ ಬೇರೆ. ಅದನ್ನು ತೆಗೆದುಕೊಳ್ಳುವದಿಲ್ಲವಂದು ನಾನು ಪ್ರತಿ ಜ್ಞೆಮಾಡಿದ್ದೇನೆ" ಎಂದು ನಾನು ಉತ್ತರ ಕೊಟ್ಟೆನು.

"ನಿಮ್ಮ ಪ್ರತಿಜ್ಞೆಯ ಸ್ವಭಾವವೇನು?" ಎಂದು ವೈದ್ಯರು ಕೇಳಲು ನಾನು ಅವರಿಗೆ ಅದರ ಕತೆಯೆಲ್ಲವನ್ನೂ ಮತ್ತು ನನ್ನ ಪ್ರತಿ ಜ್ಞೆಯ ಕಾರಣಗಳನ್ನೂ ತಿಳಿಸಿದೆನು ಹಾಲು ಕರೆಯುವಾಗ ಆಕಳಿ ಗೂ ಎಮ್ಮೆಗೂ ಚಿತ್ರಹಿಂಸೆ ಮಾಡುವರೆಂಬುದು ನನಗೆ ಗೊತ್ತಾದಂದಿ ನಿಂದ ಹಾಲನ್ನು ಕಂಡರೆ ನನಗೆ ಅಸಹ್ಯ ಹುಟ್ಟಿದ್ದಿತೆಂದೂ ಇದಲ್ಲದೆ ಹಾಲು ಮನುಷ್ಯನಿಗೆ ಸಹಜವಾದ ಆಹಾರವಲ್ಲವೆಂಬ ದೇ ಸದಾ ನನ್ನ ಅಭಿಪ್ರಾಯವಾಗಿದ್ದಿತೆಂದೂ ಆದುದರಿಂದ ನಾನು ಹಾಲನ್ನು ಸಂಪೂರ್ಣ ವಾಗಿ ತ್ಯಜಿಸಿದ್ದೇನೆಂದೂ ವಿವರಿಸಿದೆನು. ಕಸ್ತೂರಿ ಬಾಯಿಯು ಈ ಸಂಭಾಷಣೆಯನ್ನೆಲ್ಲಾ ನನ್ನ ಹಾಸಿಗೆಯ ಬಳಿ ನಿಂತು ಕೇಳುತ್ತಿದ್ದಳು.

"ಹಾಗಾದರೆ ಮೇಕೆಯ ಹಾಲನ್ನು ಕುಡಿಯಲಿಕ್ಕೆ ನಿಮಗೆ ಯಾವ ಅಭ್ಯಂತರವೂ ಇರಲಾರದು." ಎಂದಳು.

ವೈದ್ಯರೂ ಇದನ್ನು ಹಿಂಬಾಲಿಸಿ "ನೀವು ಮೇಕೆಯ ಹಾಲನ್ನು ತೆಗೆದುಕೊಂಡರೆ ಸಾಕು, ನನ್ನ ಕೆಲಸ ನಡೆಯುವುದು." ಎಂದರು.

ನಾನು ಸೋತುಹೋದೆನು. ಸತ್ಯಾಗ್ರಹಯುದ್ಧವನ್ನು ನಡೆಸಲು ನನಗಿದ್ದ ಆತ್ಯಾತುರವು ನನ್ನಲ್ಲಿ ಪ್ರಬಲವಾದ ಜೀವದಾಸೆಯನ್ನು ಹುಟ್ಟಿಸಿದ್ದಿತು. ಆದುದರಿಂದ ನಾನು ಪ್ರತಿಜ್ಞೆಯ ತಿರುಳಿಗೆ ತಿಲಾಂಜಲಿ ಕೊಟ್ಟು ಅದನ್ನು ಅಕ್ಷರಶಃ ಪಾಲಿಸಿ ತೃಪ್ತಿಗೊಂಡೆನು. ಏಕೆಂದರೆ ನಾನು ಪ್ರತಿಜ್ಞೆಯನ್ನು ಧರಿಸಿದಾಗ ನನ್ನ ಮನಸ್ಸಿನಲ್ಲಿ ಆಕಳು ಎಮ್ಮೆಗಳು ಮಾತ್ರ ಇದ್ದರೂ ಅದರ ಸಹಜವಾದ ಅರ್ಥದಲ್ಲಿ ಇತರ ಪ್ರಾಣಿಗಳ ಹಾಲೂ ಸೇರಿದ್ದಿತು. ಅದೂ ಅಲ್ಲದೆ ಹಾಲು ಮನುಷ್ಯನ ನೈಸರ್ಗಿಕ ಆಹಾರವಲ್ಲವೆಂದು ನಾನು ಅಭಿಪ್ರಾಯಪಟ್ಟುಕೊಂಡಿರುವವರೆಗೂ ಹಾಲನ್ನು ಸೇವಿಸುವದು ನನಗೆ ಧರ್ಮವಾಗಿರಲಿಲ್ಲ. ಇದೆಲ್ಲಾ ಗೊತ್ತಿದ್ದರೂ ನಾನು ಮೇಕೆಯ ಹಾಲನ್ನು ಕುಡಿಯಲು ಒಪ್ಪಿದೆನು. ಬದುಕಬೇಕೆಂಬ ಇಚ್ಛೆಯು ಸತ್ಯೋಪಾಸನೆಯನ್ನು ಮೂಲೆಗೊತ್ತಿತು ಸತ್ಯಾಗ್ರಹದ ಯುದ್ಧವನ್ನು ನಡೆಸಬೇಕೆಂಬ ಉತ್ಸುಕತೆಯಲ್ಲಿ ಸತ್ಯೋಪಾಸಕನು ಒಮ್ಮೆ ತನ್ನ ಆದರ್ಶಕ್ಕೆ ಕಳಂಕ ತಂದನು ಈ ಕೆಲಸದ ನೆನಹು ಇಂದು ಕೂಡ ನನ್ನ ಹೃದಯದಲ್ಲಡಗಿದ್ದು ನನಗೆ ಪಶ್ಚಾತಾಪವನ್ನುಂಟುಮಾಡುತ್ತಿದೆ. ಮೇಕೆಯ ಹಾಲನ್ನು ತ್ಯಜಿಸುವ ಉಪಾಯವನ್ನು ನಾನು ಸದಾ ಆಲೋಚಿಸುತ್ತಿದ್ದೇನೆ. ಆದರೆ ನನ್ನನ್ನು ಇನ್ನೂ ಹಿಡಿದಿರುವ ಅತ್ಯಂತ ಸೂಕ್ಷ್ಮವಾದ ಆ ಮೋಹದಿಂದ, ಸೇವೆಗೈಯಬೇಕೆಂಬ ಇಚ್ಛೆಯಿಂದ, ಪಾರಾಗಲು ನಾನಿನ್ನೂ ಶಕ್ತನಾಗಿಲ್ಲ.

ಆಹಾರ ವಿಷಯದಲ್ಲಿನ ನನ್ನ ಪ್ರಯೋಗಗಳು ನಾನು ಕೈಗೊಂಡಿರುವ ಅಹಿಂಸಾತತ್ವಶೋಧನಾಕಾರ್ಯದಲ್ಲಿ ಒಂದು ಭಾಗವಾಗಿರುವದರಿಂದ ಅವು ನನಗೆ ಪ್ರಿಯವಾಗಿವೆ. ಅವುಗಳಿಂದ ನಾನು ವಿನೋದವನ್ನೂ ಆನಂದವನ್ನೂ ಪಡೆಯುತ್ತೇನೆ. ಆದರೆ ನಾನು ಈಗ ಮೇಕೆ

ಯ ಹಾಲನ್ನು ಉಪಯೋಗಿಸುತ್ತಿರುವದು ಅಹಿಂಸೆಯ ದೃಷ್ಟಿಗಿಂತಲೂ ಹೆಚ್ಚಾಗಿ ಸತ್ಯದ ದೃಷ್ಟಿಯಿಂದ, ಪ್ರತಿಜ್ಞಾಭಂಗದ ದೃಷ್ಟಿಯಿಂದ, ನನ್ನನ್ನು ಬಾಧಿಸುತ್ತದೆ ಅಹಿಂಸಾತತ್ವಕ್ಕಿಂತಲೂ ಸತ್ಯದ ಆದರ್ಶವು ನನಗೆ ಚೆನ್ನಾಗಿ ತಿಳಿದಿದೆಯೆಂದು ತೋರುತ್ತದೆ. ಸತ್ಯದ ಮೇಲಿನ ಹಿಡಿತವನ್ನು ಬಿಟ್ಟರೆ ಅಹಿಂಸಾಸಮಸ್ಯೆಯನ್ನು ಎಂದಿಗೂ ಪೂರಣ ಮಾಡಲಾರೆನೆಂದು ನನ್ನ ಅನುಭವವು ಹೇಳುತ್ತದೆ. ಪ್ರತಿಜ್ಞೆಗಳನ್ನು ಅಕ್ಷರಶಃ ಅಲ್ಲದೆ ಅರ್ಥಶಃ ಕೂಡ ನಡೆಸಬೇಕೆಂದು ಸತ್ಯೋಪಾಸನೆಯ ನಿಯಮ. ಪ್ರಕೃತ ಸಂದರ್ಭದಲ್ಲಿ ನಾನು ನನ್ನ ಪ್ರತಿಜ್ಞೆಯ ಹೊರಗಣ ರೂಪಕ್ಕೆ ಮಾತ್ರ ಬೆಲೆ ಕೊಟ್ಟು ಅದರ ಆತ್ಮವಾದ ಅರ್ಥವನ್ನು ನಾಶಪಡಿಸಿದೆನು. ನನ್ನ ಹೃದಯವನ್ನು ಚುಚ್ಚುತ್ತಿರುವದು ಇದೇ. ಆದರೆ ನನಗೆ ಈ ಸ್ಪಷ್ಟಜ್ಞಾನವಿದ್ದರೂ ಮುಂದಿನ ದಾರಿಯು ನನಗೆ ನೇರವಾಗಿ ಕಾಣುವದಿಲ್ಲ. ಹಾಗೆಂದರೆ ಪ್ರಾಯಶಃ ನನಗೆ ನೇರವಾದ ದಾರಿಯಲ್ಲಿ ಹೋಗಲು ಧೈರ್ಯವಿಲ್ಲ. ಇವೆರಡರ ಅರ್ಥವೂ ಸರಿಯಾಗಿ ನೋಡಿದರೆ ಒಂದೇ. ಏಕೆಂದರೆ ಸಂಶಯದ ಅನನ್ಯಮೂಲವು ಅಲ್ಪಶ್ರದ್ಧೆ ಅಥವಾ ಶ್ರದ್ಧೆಯ ಅಭಾವ. ಆದುದರಿಂದ “ಭಗವಂತ, ನನಗೆ ಶ್ರದ್ಧೆಯನ್ನು ನೀಡು.” ಎಂಬುದೇ ನನ್ನ ಹಗಲಿರುಳಿನ ಪ್ರಾರ್ಥನೆ.

---

೩೮

# ಆ ಅದ್ಭುತದೃಶ್ಯ

ಒಂದು ಕಡೆ ರೌಲಟ್ ವರದಿಗೆ ವಿರೋಧವಾದ ಆಂದೋಲನವು ಪರಿಮಾಣದಲ್ಲಿಯೂ ತೀಕ್ಷ್ಣತೆಯಲ್ಲಿಯೂ ಹೆಚ್ಚುತ್ತಿರಲು ಇನ್ನೊಂದು ಕಡೆ ಸರಕಾರವು ಸಮಿತಿಯ ಸೂಚನೆಗಳನ್ನು ಪ್ರಚಾರಕ್ಕೆ ತರಲು ಎಂದಿಗಿಂತ ಹೆಚ್ಚು ಹಟತೊಟ್ಟಿತು. ರೌಲಟ್ ಕಾನೂನಿನ ಮಸೂದೆಯು ಪ್ರಕಟವಾಯಿತು [ಯಾವ ಕಾನೂನೇ ಆಗಲಿ ಪ್ರಚಾರಕ್ಕೆ ಬರುವದಕ್ಕಿಂತ ಮುಂಚೆ ಮಸೂದೆಯ ರೂಪದಲ್ಲಿ ಕಾಯಿದೆ ಮಂಡಲಿಯ ಮುಂದೆ ಬಂದು ಅದರ ಸಮ್ಮತಿಯನ್ನು ಪಡೆಯಬೇಕು ] ಭರತ ಖಂಡದ ಕಾಯಿದೆ ಸಭೆಯ ಕಾರ್ಯಕಲಾಪವನ್ನು ನಾನು ನೋಡಿರುವದು ನನ್ನ ಜೀವಮಾನದಲ್ಲಿ ಒಂದೇ ಒಂದು ಸಲ—ಈ ಮಸೂದೆಯನ್ನು ಕುರಿತು ಚರ್ಚೆ ನಡೆದಾಗ. ಶ್ರೀ ಶಾಸ್ತ್ರಿಯವರು ಆವೇಶಪೂರಿತವಾದ ಭಾಷಣವನ್ನು ಮಾಡುತ್ತಾ ಸರಕಾರದವರಿಗೆ ಎಚ್ಚರಿಕೆ ಕೊಟ್ಟರು. ಅವರ ಉಷ್ಣವಾಗ್ಧಾರೆಯು ಪ್ರವಹಿಸುತ್ತಿರಲು ವೈಸ್‌ರಾಯರು ಪೂರ್ಣ ದೃಷ್ಟಿಯಿಂದ ಅವರನ್ನು ನೋಡುತ್ತಾ ಅನನ್ಯಮನಸ್ಕರಾಗಿ ಕೇಳುತ್ತಿದ್ದಂತೆ ಕಂಡಿತು. ಈ ಭಾಷಣದಿಂದ ವೈಸ್‌ರಾಯರ ಮನಸ್ಸಿನ ಮೇಲೆ ಗಂಭೀರಪರಿಣಾಮವುಂಟಾಗದಿರುವದು ಅಸಾಧ್ಯವೆಂದು ನನಗೆ ತತ್ಕಾಲದಲ್ಲಿ ತೋರಿತು—ಅದು ಅಷ್ಟು ಸತ್ಯವಾಗಿಯೂ ಉದ್ವೇಗಪೂರ್ಣವಾಗಿಯೂ ಇದ್ದಿತು.

ಆದರೆ ನಿಜವಾಗಿಯೂ ನಿದ್ರಿಸುತ್ತಿರುವವನನ್ನು ಮಾತ್ರ ಎಬ್ಬಿಸಲು ಸಾಧ್ಯ. ಅವನು ನಿದ್ರಿಸುತ್ತಿರುವಂತೆ ನಟನೆ ಮಾಡುತ್ತಿದ್ದರೆ ಎಷ್ಟು ಪ್ರಯತ್ನ ಪಟ್ಟರೂ ಯಾವ ಪ್ರಯೋಜನವೂ ಇಲ್ಲ. ಸರಕಾರದ ಪರಿಸ್ಥಿತಿಯೂ ಇದೇ ರೀತಿಯಿದ್ದಿತು. ಕಾನೂನಿನ ನಿಯಮವು

ಗಳನ್ನನುಸರಿಸುವ ನಾಟಕವಾಡಲು ಮಾತ್ರ ಅದು ಆತುರವಾಗಿದ್ದಿತು. ಮುಂದಿನ ಕಾರ್ಯವನ್ನು ಅದು ಆಗಲೇ ನಿರ್ಧರಿಸಿದ್ದಿತು. ಆದುದರಿಂದ ಶಾಸ್ತ್ರಿಯವರು ಕೊಟ್ಟ ಎಚ್ಚರಿಕೆಯು ಸರಕಾರದವರ ಮೇಲೆ ಕೇವಲ ವ್ಯರ್ಥವಾಯಿತು.

ಈ ಸಂದರ್ಭದಲ್ಲಿ ನನ್ನ ಮಾತು ಕಾಡಿನ ಕೂಗಲ್ಲದೆ ಮತ್ತೇನು? ನಾನು ವೈಸ್‌ರಾಯರನ್ನು ಬೆಟ್ಟಿಮಾಡಿ ಅಂತಹ ದಾರಿಯನ್ನು ಹಿಡಿಯಬೇಡಿರೆಂದು ಬಹುವಾಗಿ ಕೇಳಿಕೊಂಡೆನು ಅವರಿಗೆ ಸ್ವಂತವಾಗಿಯೂ ವೃತ್ತಪತ್ರಗಳ ಮೂಲಕವೂ ಕಾಗದ ಬರೆದೆನು ಸರಕಾರದ ಕಾರ್ಯಕ್ರಮವು ನನಗೆ ಸತ್ಯಾಗ್ರಹವೊಂದಲ್ಲದೆ ಬೇರೆ ಮಾರ್ಗವಿಲ್ಲದಂತೆ ಮಾಡಿಬಿಟ್ಟಿದೆಯೆಂಬುದನ್ನು ಇವುಗಳಲ್ಲಿ ಅವರಿಗೆ ಸ್ಪಷ್ಟಪಡಿಸಿದೆನು ಆದರೆ ಇದೆಲ್ಲವೂ ನಿರರ್ಥಕವಾಯಿತು.

ಮುಸೂದೆಯು ಸರಕಾರದ ಗೆಜೆಟಿನಲ್ಲಿ ಇನ್ನೂ ಕಾಯಿದೆಯಾಗಿ ಪ್ರಕಾಶಿತವಾಗಿರಲಿಲ್ಲ. ನನ್ನ ಶರೀರವು ಅತಿ ದುರ್ಬಲಸ್ಥಿತಿಯಲ್ಲಿದ್ದಿತು ಆದರೂ ಮದರಾಸಿನಿಂದ ನನಗೆ ಆಹ್ವಾನ ಬರಲು ನಾನು ದೂರ ಪ್ರಯಾಣವನ್ನು ಮಾಡಲು ನಿಶ್ಚಯಿಸಿದೆನು. ಸಭೆಗಳಲ್ಲಿ ಮಾತನಾಡುವದಕ್ಕೆ ತಕ್ಕಷ್ಟು ದನಿಯನ್ನೇರಿಸಲು ನನಗೆ ಆಗ ಸಾಧ್ಯವಿರಲಿಲ್ಲ. ನಿಂತುಕೊಂಡು ಸಭೆಗಳಲ್ಲಿ ಭಾಷಣ ಮಾಡಲು ನನಗೆ ಈಗಲೂ ಆಗುವದಿಲ್ಲ. ಹೆಚ್ಚು ಹೊತ್ತು ನಿಂತು ಮಾತನಾಡಿದರೆ ಶರೀರವೆಲ್ಲಾ ಕಂಪಿಸಿ ಎದೆಯು ಹೊಡೆದುಕೊಳ್ಳುವದಕ್ಕೆ ಆರಂಭವಾಗುತ್ತಿದ್ದಿತು.

ದಕ್ಷಿಣದೇಶಕ್ಕೆ ಹೋದರೆ ಅಲ್ಲಿ ನಾನು ಹೊರಗಿನವನೆಂದು ನನಗೆ ಎಂದೂ ತೋರಿಲ್ಲ ನಾನು ದಕ್ಷಿಣ ಆಫ್ರಿಕದಲ್ಲಿ ಮಾಡಿದ್ದ ಕಾರ್ಯದಿಂದ ನನಗೆ ತಮಿಳರ ಮೇಲೂ ತೆಲುಗರ ಮೇಲೂ ಒಂದು ರೀತಿಯ ವಿಶೇಷ ಅಧಿಕಾರವಿದ್ದಿತೆಂದು ನನಗೆ ತೋರುತ್ತಿದ್ದಿತು. ದಾಕ್ಷಿಣಾತ್ಯ ಸಜ್ಜನರು ನನ್ನ ಈ ಭಾವನೆಯನ್ನು ಎಂದೂ ಸುಳ್ಳು

ಮಾಡಿಲ್ಲ. ಆಮಂತ್ರಣವು ದಿವಂ. ಕಸ್ತೂರಿರಂಗೈಯಂಗಾರ್ಯರ ಹೆಸರಿನಲ್ಲಿ ಬಂದಿದ್ದಿತು. ಆದರೆ ಇದರ ಹಿಂದಿದ್ದವರು ಶ್ರೀ. ರಾಜಗೋಪಾಲಾಚಾರ್ಯರೆಂದು ನನಗೆ ಮದರಾಸಿಗ ಹೋಗುವಾಗ ದಾರಿಯಲ್ಲಿ ಗೊತ್ತಾಯಿತು ಇದೇ ನನಗೆ ಅವರೊಡನೆ ಪ್ರಥಮ ಪರಿಚಯವೆಂದು ಹೇಳಬಹುದು. ಅದೆಂತೇ ಇರಲಿ, ವ್ಯಕ್ತಿಶಃ ಒಬ್ಬರನ್ನೊಬ್ಬರು ಅರಿಯಲು ಇದೇ ಮೊದಲು

ದಿವಂ. ಕಸ್ತೂರಿರಂಗೈಯಂಗಾರ್ಯರೇ ಮುಂತಾದ ಮಿತ್ರರ ಬಲೋದ್ಬಂಧದ ಮೇಲೆ ರಾಜಗೋಪಾಲಾಚಾರ್ಯರು ಸ್ವಲ್ಪಕಾಲ ಮುಂಚೆ ಸೇಲಮನ್ನು ಬಿಟ್ಟು ಮದರಾಸಿನಲ್ಲಿ ವಕೀಲಿಯನ್ನು ನಡೆಸಲು ಅಲ್ಲಿಗೆ ಬಂದಿದ್ದರು ಸಾರ್ವಜನಿಕ ಕಾರ್ಯದಲ್ಲಿ ಹೆಚ್ಚು ಭಾಗವನ್ನು ವಹಿಸುವದೇ ಇದರ ಉದ್ದೇಶವಾಗಿದ್ದಿತು. ಇವರ ಅತಿಥಿಗಳಾಗಿಯೇ ನಾವು ಮದರಾಸಿನಲ್ಲಿದ್ದುದು. ಆದರೆ ಒಂದೆರಡು ದಿವಸ ಕಳೆಯುವವರೆಗೂ ನನಗೆ ಈ ವಿಷಯವು ಗೊತ್ತಾಗಲಿಲ್ಲ ನಾವು ಇಳಿದಿದ್ದ ಬಂಗಲೆಯು ದಿವಂ ಕಸ್ತೂರಿರಂಗೈಯಂಗಾರ್ಯರದಾಗಿದ್ದುದರಿಂದ ಆತಿಥ್ಯವೂ ಅವರದೇ ಎಂದು ನಾನು ತಿಳಿದಕೊಂಡಿದ್ದೆನು. ಮಹಾದೇವ ದೇಶಾಯಿಯವರು ಈ ತಪ್ಪು ತಿಳಿವಳಿಕೆಯನ್ನು ತಿದ್ದಿದರು ಅವರು ಸ್ವಲ್ಪಕಾಲದಲ್ಲಿಯೇ ರಾಜಗೋಪಾಲಾಚಾರ್ಯರೊಡನೆ ಗಾಢಪರಿಚಯವನ್ನು ಮಾಡಿಕೊಂಡರು ಹಿಂದೆಯೇ ಇರುವದು ರಾಜಗೋಪಾಲಾಚಾರ್ಯರ ಸ್ವಭಾವ ಆದರೆ ಮಹಾದೇವ ದೇಶಾಯಿಯವರು ನನ್ನನ್ನು ಎಚ್ಚರಿಸಿ "ಇವರ ಸಂಬಂಧವನ್ನು ನೀವು ಬೆಳೆಸಬೇಕು." ಎಂದು ನನಗೆ ಒಂದು ದಿನ ಹೇಳಿದರು

ನಾನು ಹಾಗೆಯೇ ಮಾಡಿದೆನು. ನಾವು ಸರಕಾರದೊಡನೆ ಹೋರಾಡುವ ಏರ್ಪಾಟಿನ ವಿಷಯವಾಗಿ ಪ್ರತಿದಿನವೂ ಚರ್ಚಿಸುತ್ತಿದ್ದೆವು. ಆದರೆ ಸಾರ್ವಜನಿಕ ಸಭೆಗಳನ್ನು ನಡೆಸುವದಲ್ಲದೆ ನನಗೆ ಆಗ ಇನ್ನಾವ ಕಾರ್ಯಕ್ರಮವೂ ಹೊಳೆಯಲಿಲ್ಲ. ರೌಲೆಟ್ ಮಸೂ

ದೆಯುನ್ನು ಕಾನೂನಾಗಿ ಮಾಡಿದರೆ ಅದಕ್ಕಿದಿರಾಗಿ ಸವಿನಯ ಭಂಗವನ್ನು ನಡೆಸುವದು ಹೇಗೆಂದು ನನಗೆ ತೋಚಲಿಲ್ಲ. ಸರಕಾರದವರು ಅವಕಾಶಕೊಟ್ಟರೆ ತಾನೆ ಅದನ್ನು ಭಂಗಪಡಿಸುವದು ? ಅವರು ಹಾಗೆ ಮಾಡದಿದ್ದರೆ ನಾವು ಇತರ ಕಾನೂನುಗಳ ಸವಿನಯಭಂಗವನ್ನು ನಡೆಸಬಹುದೋ ? ಹಾಗಾದರೆ ಇದಕ್ಕೆ ಮೇರೆ ಯಾವದು ? ಇವು ಮತ್ತು ಇದೇ ರೀತಿಯ ಅನೇಕ ಇತರ ಪ್ರಶ್ನೆಗಳು ನಮ್ಮ ಈ ಚರ್ಚೆಗೆ ಸಾಮಗ್ರಿಗಳಾಗಿದ್ದುವು.

ಈ ವಿಷಯವನ್ನು ಆಲೋಚಿಸುವದಕ್ಕೆ ದಿವಂ. ಕಸ್ತೂರಿರಂಗೈಯ್ಯಂಗಾರ್ಯರು ಮುಖಂಡರುಗಳ ಸಣ್ಣ ಸಭೆಯೊಂದನ್ನು ಕೂಡಿಸಿದರು. ಇದರಲ್ಲಿ ಪ್ರಮುಖ ಭಾಗವನ್ನು ವಹಿಸಿದವರಲ್ಲಿ ಶ್ರೀ. ವಿಜಯರಾಘವಾಚಾರ್ಯರೊಬ್ಬರು. ಸತ್ಯಾಗ್ರಹಶಾಸ್ತ್ರಕ್ಕೆ ಸಂಬಂಧಪಟ್ಟ ಸೂಕ್ಷ್ಮ ವಿವರಗಳನ್ನು ಕೂಡ ಬಿಡದೆ ಎಲ್ಲ ವಿಷಯಗಳನ್ನೂ ಒಳಗೊಂಡ ಕೃತಿಯೊಂದನ್ನು ನಾನು ಬರೆಯಬೇಕೆಂದು ಅವರು ಸೂಚಿಸಿದರು. ಇದು ನನ್ನ ಯೋಗ್ಯತೆಗ ಮೀರಿದ ಕೇಸವೆಂದು ನನಗೆ ತೋರಿತು. ಹಾಗೆ ನಾನು ಅವರಿಗೆ ಹೇಳಿಯೂ ಹೇಳಿದೆನು

ಈ ರೀತಿಯಾಗಿ ಮನೋಮಥನವು ನಡೆಯುತ್ತಿರಲು ರೌಲಟ್ ಮಸೂದೆಯು ಕಾನೂನಾಗಿ ಪ್ರಕಾಶಿತವಾಯಿತೆಂಬ ವರ್ತಮಾನವು ಬಂದಿತು. ಆ ರಾತ್ರಿ ಈ ಪ್ರಶ್ನೆಯನ್ನು ಕುರಿತು ಆಲೋಚಿಸುತ್ತಾ ನಾನು ನಿದ್ರಾವಶನಾದೆನು. ಬೆಳಗಿನ ಜಾವ ನನಗೆ ಎಂದಿಗಿಂತ ಮುಂಚೆ ಎಚ್ಚರವಾಯಿತು ನಾನಿನ್ನೂ ನಿದ್ರೆಗೂ ಎಚ್ಚರಕ್ಕೂ ಮಧ್ಯೆ ಇರುವ ಅರೆಯರಿವಿನ ಸ್ಥಿತಿಯಲ್ಲಿದ್ದೆನು. ಆಗ ಇದ್ದಕ್ಕಿದ್ದ ಹಾಗೆ ನನ್ನ ಮನಸ್ಸಿಗೆ ಒಂದು ವಿಚಾರವು ಹೊಳೆಯಿತು. ಇದು ಕನಸಿನಲ್ಲಿ ನಡೆದಂತಿದ್ದಿತು ಬೆಳಿಗ್ಗೆ ಅಷ್ಟು ಹೊತ್ತಿಗೆ ನಾನು ರಾಜಗೋಪಾಲಾಚಾರ್ಯರಿಗೆ ಈ ಕತೆಯನ್ನೆಲ್ಲಾ ಹೇಳಿದೆನು

“ದೇಶನೆಲ್ಲಾ ಹರತಾಳವನ್ನು ನಡೆಸಬೇಕೆಂದು ನಾವು ಭರತಖಂಡಕ್ಕೆ ಹೇಳಬೇಕು. ಈ ವಿಚಾರವು ನನಗೆ ನಿನ್ನೆ ರಾತ್ರಿ ಕನಸಿನಲ್ಲಿ ಹೊಳೆಯಿತು. ಸತ್ಯಾಗ್ರಹವು ಆತ್ಮಶುದ್ಧಿಯ ಕಾರ್ಯ. ನಮ್ಮ

ಹೋರಾಟವು ಪವಿತ್ರವಾದುದು. ಈ ಕದನವನ್ನು ಆತ್ಮಶುದ್ಧಿಯ ಕಲಶದಿಂದ ಪ್ರಾರಂಭಮಾಡುವದು ಕೇವಲ ಉಚಿತವೆಂದು ನನಗೆ ತೋರುತ್ತದೆ. ಆದುದರಿಂದ ಭರತಖಂಡದ ಜನರೆಲ್ಲಾ ಆ ದಿನ ತಮ್ಮ ಕೆಲಸಕಾರ್ಯಗಳನ್ನೆಲ್ಲಾ ನಿಲ್ಲಿಸಿ ಉಪವಾಸ ಮಾಡಿ ಆ ದಿನವನ್ನು ಪ್ರಾರ್ಥನೆಯಲ್ಲಿ ಕಳೆಯಲಿ. ಮುಸಲ್ಮಾನರು ಒಂದು ದಿನಕ್ಕೆ ಹೆಚ್ಚಾಗಿ ಉಪವಾಸಮಾಡಕೂಡದಾದುದರಿಂದ ಎಲ್ಲರೂ ಇಪ್ಪತ್ತು ನಾಲ್ಕು ಗಂಟೆ ಮಾತ್ರ ಉಪವಾಸವನ್ನು ನಡೆಸಬೇಕು. ಎಲ್ಲಾ ಪ್ರಾಂತಗಳೂ ನಮ್ಮ ಈ ಕೋರಿಕೆಯನ್ನು ನಡೆಸುವುವೋ ಇಲ್ಲವೋ ಹೇಳುವದು ಬಹು ಕಷ್ಟ. ಆದರೆ ಮುಂಬಯಿ, ಮದರಾಸು ಬಿಹಾರ ಮತ್ತು ಸಿಂಧ ಪ್ರಾಂತಗಳ ವಿಷಯದಲ್ಲಿ ನನಗೆ ತಕ್ಕಮಟ್ಟಿಗೆ ಭರವಸೆಯಿದೆ. ಈ ಭಾಗಗಳೆಲ್ಲಾ ಹರತಾಳವನ್ನು ಯೋಗ್ಯ ರೀತಿಯಲ್ಲಿ ಆಚರಿಸಿದರೆ ಕೂಡ ನಮ್ಮ ತೃಪ್ತಿಗೆ ಬೇಕಾದಷ್ಟು ಕಾರಣವುಂಟೆಂದು ತೋರುತ್ತದೆ."

ಈ ಸೂಚನೆಯು ರಾಜಗೋಪಾಲಾಚಾರ್ಯರ ಮನಸ್ಸನ್ನು ಒಡನೆಯೇ ಹಿಡಿಯಿತು. ಆಮೇಲೆ ಇದನ್ನು ಇತರ ಮಿತ್ರರಿಗೆ ತಿಳಿಸಿದಾಗ ಅವರೂ ಇದಕ್ಕೆ ಸಂತೋಷದಿಂದ ಒಪ್ಪಿದರು. ನಾನು ಸಂಕ್ಷೇಪವಾದ ಬಿನ್ನಹಪತ್ರವೊಂದನ್ನು ಬರೆದೆನು. ಹರತಾಳವನ್ನು ೧೯೧೯ನೆಯ ಇಸವಿ ಮಾರ್ಚ ೩೦ ನೆಯ ತಾರೀಖಿನ ದಿನ ಆಚರಿಸಬೇಕೆಂದು ನಿಶ್ಚಯವಾಯಿತು. ಆದರೆ ಆಮೇಲೆ ಇದನ್ನು ಏಪ್ರಿಲ್ ೬ ಕ್ಕೆ ಬದಲಾಯಿಸಿತು. ಹೀಗೆ ಜನರಿಗೆ ಇದರ ವರ್ತಮಾನವು ಆಚರಣೆಯ ದಿನಕ್ಕೆ ಸ್ವಲ್ಪಕಾಲ ಮುಂಚೆಯೇ ಗೊತ್ತಾಯಿತು. ಕೆಲಸವನ್ನು ಒಡನೆಯೇ ಪ್ರಾರಂಭಿಸಬೇಕಾಗಿದ್ದುದರಿಂದ ಹರತಾಳವನ್ನು ಆಚರಿಸಲು ಜನರಿಗೆ ಇನ್ನೂ ದೀರ್ಘವಾದ ಕಾಲವನ್ನು ಕೊಡಲಾಗಲಿಲ್ಲ.

ಆದರೆ ಅದೆಲ್ಲಾ ನಡೆದುದೆಂತೆಂದು ಹೇಳಬಲ್ಲವರಾರು? ಒಂದು ಕೊನೆಯಿಂದ ಇನ್ನೊಂದು ಕೊನೆಯವರೆಗೆ ಹಿಂದುಸ್ಥಾನವೆಲ್ಲಾ — ಹಳ್ಳಿಗಳೂ, ಪಟ್ಟಣಗಳೂ — ಸಂಪೂರ್ಣ ಹರತಾಳವನ್ನಾಚರಿಸಿತು. ಅಂದಿನ ದೃಶ್ಯವು ಭವ್ಯವಾಗಿದ್ದಿತು.

## ೩೨

# ಆ ವಾರ !

ದಕ್ಷಿಣ ಭಾರತದಲ್ಲಿ ಸ್ವಲ್ಪ ಕಾಲ ಸಂಚಾರ ಮಾಡಿ ನಾನು ಮುಂಬಯಿಯನ್ನು ಸೇರಿದೆನು. ಆ ದಿನ ಏಪ್ರಿಲ್ ನಾಲ್ಕನೇ ತಾರೀಖೆಂದು ಕಾಣುತ್ತದೆ. ನಾನು ಏಪ್ರಿಲ್ ಆರರ ಕಾರ್ಯಕ್ರಮದಲ್ಲಿ ಭಾಗಿಯಾಗಲು ಅಲ್ಲಿರಬೇಕೆಂದು ನನಗೆ ಶಂಕರಲಾಲ ಬ್ಯಾಂಕರರಿಂದ ತಂತಿ ಬಂದಿದ್ದಿತು.

ಆದರೆ ಈ ಮಧ್ಯ ೩೦ ನೆಯ ಮಾರ್ಚನ ದಿನ ದಿಲ್ಲಿಯಲ್ಲಿ ಹರತಾಳವನ್ನು ಆಗಲೇ ಆಚರಿಸಿದ್ದರು. ಅಲ್ಲಿ ದಿವಂ ಸ್ವಾಮಿ ಶ್ರದ್ಧಾನಂದರ ಮತ್ತು ದಿವಂ ಹಕೀಮ್ ಅಜಮಲ್ ಖಾನರ ಮಾತು ವೇದವಾಕ್ಯವಾಗಿದ್ದಿತು. ಹರತಾಳವನ್ನು ಏಪ್ರಿಲ್ ಆರರವರೆಗೆ ಮುಂದಕ್ಕೆ ಹಾಕಬೇಕೆಂಬ ತಾರು ಅವರಿಗೆ ಹೊತ್ತಿಗೆ ಸರಿಯಾಗಿ ತಲುಪಿರಲಿಲ್ಲ. ದಿಲ್ಲಿಯು ಅಂತಹ ಹರತಾಳವನ್ನು ಹಿಂದೆ ಎಂದೂ ಕಂಡಿರಲಿಲ್ಲ. ಹಿಂದುಗಳೂ ಮುಸಲ್ಮಾನರೂ ಒಬ್ಬ ಮನುಷ್ಯನಂತೆ ಒಂದುಗೂಡಿದರು. ಜುಮ್ಮಾ ಮಸೀದಿಯಲ್ಲಿ ಭಾಷಣ ಮಾಡಬೇಕೆಂದು ಶ್ರದ್ಧಾನಂದರಿಗೆ ಆಹ್ವಾನವೀಯಲು ಅವರು ಹಾಗೇ ಮಾಡಿದರು. ಇದೆಲ್ಲಾ ಸರಕಾರದ ಸಹನೆಯನ್ನು ಮೀರಿದ್ದಿತು. ಹರತಾಳದ ಮೆರವಣಿಗೆಯು ರೈಲ್ವೇ ಸ್ಟೇಷನಿನ ಕಡೆ ಹೋಗುತ್ತಿದ್ದಾಗ ಪೋಲೀಸಿನವರು ಅದನ್ನು ತಡೆದು ಅದರ ಮೇಲೆ ಗುಂಡು ಹಾರಿಸಿದರು. ಅನೇಕ ಜನರಿಗೆ ಗಾಯವಾಯಿತು. ಕೆಲವರಿಗೆ ಪ್ರಾಣವೂ ಹೋಯಿತು. ದಿಲ್ಲಿಯಲ್ಲಿ ಅತ್ಯಾಚಾರ ಸಾಮ್ರಾಜ್ಯವು ಮೊದಲಾಯಿತು. ಶ್ರದ್ಧಾನಂದರು ನಾನು ದಿಲ್ಲಿಗೆ ಒಡನೆಯೇ ಬರಬೇಕೆಂದು ತಾರುಕೊಟ್ಟರು. ಮುಂಬಯಿಯಲ್ಲಿ ಏಪ್ರಿಲ್ ಆರರ ಕಾರ್ಯಕ್ರಮವು ಮುಗಿದೊಡನೆಯೇ ದಿಲ್ಲಿಗೆ ಹೊರಡುವೆನೆಂದು ನಾನು ಉತ್ತರವಿತ್ತೆನು.

ದಿಲ್ಲಿಯ ಕತೆಯೇ ಸ್ವಲ್ಪ ಹೆಚ್ಚು ಕಡಿಮೆಯಾಗಿ ಲಾಹೋರಿನಲ್ಲಿಯೂ ಅಮೃತಸರದಲ್ಲಿಯೂ ನಡೆಯಿತು ನಾನು ಅಮೃತಸರಕ್ಕೆ ಹೋಗಬೇಕೆಂದು ಡಾ ಸತ್ಯಪಾಲರೂ ಡಾ ಕಿಚಲೂರವರೂ ನನಗೆ ಆಗ್ರಹಪೂರ್ವಕವಾದ ಆಹ್ವಾನವನ್ನು ಕಳುಹಿಸಿದ್ದರು ಆಗ ನನಗೆ ಅವರ ಪರಿಚಯವೇ ಇರಲಿಲ್ಲವಾದರೂ ನಾನು ದಿಲ್ಲಿಗೆ ಹೋದಮೇಲೆ ಅಮೃತಸರಕ್ಕೆ ಬರುವೆನೆಂದು ನನ್ನ ಉದ್ದೇಶವನ್ನು ಅವರಿಗೆ ತಿಳಿಸಿದೆನು.

ಆರನೆಯ ತಾರೀಖಿನ ಬೆಳಿಗ್ಗೆ ಮುಂಬಯಿಯ ಸಾವಿರಾರು ಪುರಜನರು ಚೌಪಾತಿಯಲ್ಲಿ ಸಮುದ್ರಸ್ನಾನಕ್ಕಾಗಿ ನೆರೆದರು. ಮಿಂದ ಒಳಿಕ ಅವರು ಒಟ್ಟುಗೂಡಿ ಠಾಕುರದ್ವಾರದ ಕಡೆಗೆ ಮೆರವಣಿಗೆ ಹೊರಟರು ಮೆರವಣಿಗೆಯಲ್ಲಿ ಹೆಂಗಸರೂ ಮಕ್ಕಳೂ ಇದ್ದರು. ಅನೇಕ ಮುಸಲ್ಮಾನರೂ ಸೇರಿದ್ದರು ಮುಸಲ್ಮಾನ ಮಿತ್ರರು ನಮ್ಮಲ್ಲಿ ಮೆರವಣಿಗೆಯಲ್ಲಿದ್ದ ಕೆಲವರನ್ನು ಠಾಕುರದ್ವಾರದಿಂದ ಹತ್ತಿರದಲ್ಲಿಯೇ ಇದ್ದ ಮಸೀದಿಗೆ ಕರೆದುಕೊಂಡು ಹೋಗಿ ಅಲ್ಲಿ ಶ್ರೀ ಸರೋಜಿನೀ ದೇವಿಯಿಂದಲೂ ನನ್ನಿಂದಲೂ ಭಾಷಣ ಕೊಡಿಸಿದರು. ಶ್ರೀ. ವಿಠ್ಠಲದಾಸ ಜೇರಾಜಾಣಿಯವರು ನಾವು ಅಲ್ಲಿಯೇ ಆ ಕ್ಷಣವೇ ಜನರಿಂದ ಸ್ವದೇಶೀ ಪ್ರತಿಜ್ಞೆಯನ್ನೂ ಹಿಂದೂಮುಸಲ್ಮಾನ ಐಕ್ಯದ ಪ್ರತಿಜ್ಞೆಯನ್ನೂ ಮಾಡಿಸಬೇಕೆಂದು ಸೂಚಿಸಿದರು. ಆದರೆ ನಾನು ಯಾರೂ ಪ್ರತಿಜ್ಞೆಗಳನ್ನು ಅತ್ಯವಸರದಲ್ಲಿ ಮಾಡಬಾರದೆಂದೂ ಜನರು ಆಗಲೇ ನೆರವೇರಿಸುತ್ತಿರುವದರಿಂದಲೇ ನಾವು ತೃಪ್ತಿಪಡಬೇಕೆಂದೂ ಹೇಳಿ ಅವರ ಸೂಚನೆಯನ್ನು ಇದಿರಿಸಿದೆನು ಒಂದು ಸಲ ಮಾಡಿದ ಪ್ರತಿಜ್ಞೆಯನ್ನು ಎಂದಿಗೂ ಭಂಗಪಡಿಸಕೂಡದು, ಆದುದರಿಂದ ಸ್ವದೇಶೀ ಪ್ರತಿಜ್ಞೆಯ ಇಂಗಿತಪರಿಣಾಮಗಳೇನೆಂಬುದನ್ನು ಸ್ಪಷ್ಟವಾಗಿ ತಿಳಿದುಕೊಳ್ಳುವದು ಅವಶ್ಯಕ. ಹಿಂದೂಮುಸಲ್ಮಾನ ಐಕ್ಯತೆಯ ಪ್ರತಿಜ್ಞೆಯಲ್ಲಡಗಿರುವ ಮಹತ್ತರವಾದ ಜವಾಬ್ದಾರಿಯನ್ನು ಎಲ್ಲರೂ ಸಂಪೂರ್ಣವಾಗಿ ಅರ್ಥಮಾಡಿಕೊಳ್ಳಬೇಕು ಎಂದು

ಮಾಡಿಸಿದೆನು. ಕಡೆಗೆ ನಾನು ಪ್ರತಿಜ್ಞಾಧಾರಣೆಯನ್ನು ಮಾಡಲಿಚ್ಛಿಸುವವರೆಲ್ಲರೂ ಆ ಉದ್ದೇಶಕ್ಕಾಗಿ ಮರು ಬೆಳಿಗ್ಗೆ ಪುನಃ ಒಟ್ಟುಗೂಡಬೇಕೆಂದು ಸೂಚಿಸಿದೆನು.

ಮುಂಬಯಿಯಲ್ಲಿ ಹರತಾಳವು ನಿರತಿಶಯವಾಗಿ ನಡೆಯಿತೆಂದು ಹೇಳಬೇಕಾದುದೇ ಇಲ್ಲ. ಸವಿನಯ ಕಾನೂನ ಭಂಗವನ್ನು ಹೂಡಲು ಎಲ್ಲವೂ ಸಜ್ಜುಗೊಳಿಸಲ್ಪಟ್ಟಿದ್ದಿತು. ಈ ಸಂಬಂಧವಾಗಿ ಎರಡುಮೂರು ವಿಚಾರಗಳನ್ನು ಕುರಿತು ಚರ್ಚೆ ನಡೆದಿದ್ದಿತು. ಜನಸಾಮಾನ್ಯವು ಇದಿರಿಸಲು ಸುಲಭಸಾಧ್ಯಗಳಾದ ಕಾನೂನುಗಳ ವಿಷಯದಲ್ಲಿ ಮಾತ್ರ ಸವಿನಯ ಭಂಗವನ್ನಾಚರಿಸಬೇಕೆಂದು ನಿಶ್ಚಯವಾಯಿತು. ಉಪ್ಪಿನ ಮೇಲಿನ ತೆರಿಗೆಯು ಜನರಿಗೆ ಅತ್ಯಂತ ಅಪ್ರಿಯವಾಗಿದ್ದಿತು. ಇದನ್ನು ತೊಡೆದುಹಾಕಿಸುವದಕ್ಕಾಗಿ ಆಗಲೇ ಕೆಲವು ಕಾಲದಿಂದ ಪ್ರಚಂಡ ಚಳವಳಿಯು ಸಾಗಿದ್ದಿತು. ಆದುದರಿಂದ ಉಪ್ಪಿನ ಕಾಯಿದೆಗಳಿಗೆ ವಿರುದ್ಧವಾಗಿ ಜನರು ಸಮುದ್ರದ ನೀರಿನಿಂದ ತಮ್ಮ ಮನೆಗಳಲ್ಲೇ ಉಪ್ಪನ್ನು ಸಿದ್ಧಪಡಿಸಬಹುದೆಂದು ನಾನು ಸೂಚಿಸಿದೆನು. ನನ್ನ ಎರಡನೆಯ ಸೂಚನೆಯು ಸರಕಾರದಿಂದ ಬಹಿಷ್ಕಾರವಾದ ಪುಸ್ತಕಗಳು—'ಹಿಂದೀಯ ಸ್ವರಾಜ್ಯ', 'ಸರ್ವೋದಯ' (ರಸ್ಕಿನರ 'ಅಂಟು ದಿ ಲಾಸ್ಟ್' ಎಂಬ ಪುಸ್ತಕದ ಗುಜರಾತಿ ಅನುವಾದ)—ಈ ಉದ್ದೇಶಕ್ಕೆ ಅನುಕೂಲವಾಗಿ ಒದಗಿದುವು. ಅವುಗಳನ್ನು ಅಚ್ಚುಮಾಡಿ ಎಲ್ಲರಿದಿರಿಗೂ ಮಾರುವದೇ ಸವಿನಯ ಕಾನೂನುಭಂಗಕ್ಕೆ ಅತ್ಯಂತ ಸುಲಭ ಮಾರ್ಗವಾಗಿ ತೋರಿತು. ಆದುದರಿಂದ ಈ ಪುಸ್ತಕಗಳ ಬೇಕಾದಷ್ಟು ಪ್ರತಿಗಳನ್ನು ಮುದ್ರಿಸಿ ಆ ಸಂಜೆ ಉಪವಾಸ ಮುಗಿದ ಮೇಲೆ ನಡೆಯಲಿದ್ದ ಪ್ರಚಂಡ ಸಾರ್ವಜನಿಕ ಸಭೆಯ ಕೊನೆಯಲ್ಲಿ ಅವುಗಳನ್ನು ಮಾರಲು ಏರ್ಪಾಟಾಯಿತು.

ಇದರ ಪ್ರಕಾರ ಆರನೆಯ ತಾರೀಖಿನ ಸಾಯಂಕಾಲ ಸ್ವಯಂಸೇವಕರ ಒಂದು ಸೈನ್ಯವೇ ಈ ಬಹಿಷ್ಕೃತ ಪುಸ್ತಕಗಳನ್ನು ಜನ

ರಿಗೆ ಮಾರಲು ತೆಗೆದುಕೊಂಡು ಬಂದಿತು. ಶ್ರೀ ಸರೋಜಿನೀ ದೇವಿ ಯೂ ನಾನೂ ಮೋಟಾರ್ ಗಾಡಿಗಳಲ್ಲಿ ಕೂರಲು ಎಲ್ಲಾ ಪ್ರತಿಗಳೂ ಶೀಘ್ರದಲ್ಲಿಯೇ ಖರ್ಚಾದುವು ಈ ಮಾರಾಟದ ಹಣ ವನ್ನು ಸವಿನಯ ಭಂಗದ ಹೋರಾಟದ ವಚ್ಚಕ್ಕಾಗಿ ಉಪಯೋಗಿಸ ಬೇಕೆಂದು ಗೊತ್ತಾಗಿದ್ದಿತು ಇವೆರಡು ಪುಸ್ತಕಗಳ ಬೆಲೆಯೂ ಒಂದೊಂದು ಪ್ರತಿಗೆ ನಾಲ್ಕಾಣೆಯಿಂದಿದ್ದರೂ ಅವುಗಳನ್ನು ಒಬ್ಬ ರೂ ಕೇವಲ ಅದೇ ಬೆಲೆಗೆ ನನ್ನಿಂದ ಕೊಂಡುಕೊಂಡುದು ನನಗೆ ನೆನಪಿಲ್ಲವನ್ನಬಹುದು ಎಷ್ಟೋ ಮಂದಿ ಒಂದು ಪ್ರತಿಯನ್ನು ತೆಗೆ ದುಕೊಳ್ಳಲೋಸುಗ ತಮ್ಮ ಕಿಸೆಯಲ್ಲಿದ್ದ ಹಣವನ್ನೆಲ್ಲಾ ಸುರಿದರು. ಒಂದೇ ಒಂದು ಪುಸ್ತಕದ ಬೆಲೆಗಾಗಿ ಐದು ರೂಪಾಯಿಯ ಮತ್ತು ಹತ್ತು ರೂಪಾಯಿಯ ನೋಟುಗಳು ಸುಮ್ಮನೆ ಸುರಿದುವು. ಈ ಮಧ್ಯೆ ಒಂದು ಪ್ರತಿಯನ್ನು ಐವತ್ತು ರೂಪಾಯಿಗೆ ಮಾರಿದುದು ನನಗೆ ಜ್ಞಾಪಕವಿದೆ ! ಈ ಬಹಿಷ್ಕೃತವಾದ ಪುಸ್ತಕಗಳನ್ನು ಕೊಳ್ಳು ವದರಿಂದ ಅವರು ದಂಡಕ್ಕೂ ದಸ್ತಗಿರಿಗೂ ಈಡಾಗಬಹುದೆಂದು ಜನರಿಗೆ ಯಥಾರೀತಿಯಲ್ಲಿ ವಿವರಿಸಿದುದಾಯಿತು ಆದರೆ ತಾತ್ಕಾ ಲಿಕವಾಗಿ ಅವರು ಸೆರಮನೆಯ ಭೀತಿಯನ್ನೆಲ್ಲಾ ಕಳೆದುಕೊಂ ಡಿದ್ದರು

ತಾವು ಬಹಿಷ್ಕರಿಸಿದ ಪುಸ್ತಕಗಳ ಮಾರಾಟವೇ ಆಗಲಿಲ್ಲ ವೆಂದೂ ಮಾರಾಟವಾದ ಪುಸ್ತಕಗಳು ಬಹಿಷ್ಕೃತವಾದ ಪುಸ್ತಕಗ ಳೆಂದು ಹೇಳಲಾಗುವದಿಲ್ಲವೆಂದೂ ಸರಕಾರದವರು ಅನುಕೂಲವಾಗಿ ಟೀಕೆ ಮಾಡಿದ್ದರೆಂದು ಆಮೇಲೆ ತಿಳಿಯಬಂದಿತು ಪುಸ್ತಕಗಳನ್ನು ಪುನಃ ಮುದ್ರಿಸಿದ್ದುದರಿಂದ ಅವು ಬಹಿಷ್ಕೃತ ಪುಸ್ತಕಗಳ ಹೊಸ ಆವೃತ್ತಿಯಾಗಿ ಅವುಗಳ ಮಾರಾಟವೇನೂ ಕಾನೂನಿನ ಪ್ರಕಾರ ಅಪ ರಾಧವಲ್ಲವೆಂಬುವೇ ಸರಕಾರದ ಅಭಿಪ್ರಾಯವಾಗಿದ್ದಿತು. ಈ ಸುದ್ದಿ ಯಿಂದ ಜನರಿಗೆ ಆಶಾಭಂಗವಾಯಿತು

ಮಾರನೆಯ ದಿನ ಬೆಳಿಗ್ಗೆ ಸ್ವದೇಶಿಯ ಮತ್ತು ಹಿಂದೂಮುಸ ಲ್ಮಾನ ಐಕ್ಯದ ವಿಷಯವಾಗಿ ಪ್ರತಿಜ್ಞಾಗಾರಣೆ ಮಾಡಲು ಸಭೆ

ಸೇರಿತು. ವಿಠ್ಠಲದಾಸ ಜೇರಾಜಾಣಿಯವರಿಗೆ ಬೆಳ್ಳಗಿರುವದೆಲ್ಲಾ ಹಾಲಲ್ಲವೆಂಬ ಅನುಭವವು ಈಗ ಮೊಟ್ಟ ಮೊದಲನೆಯ ಸಲ ಉಂಟಾಯಿತು. ಎಲ್ಲೋ ಅಲ್ಪ ಸ್ವಲ್ಪ ಮಂದಿ ಬಂದಿದ್ದರು. ಅಲ್ಲಿಗೆ ಬಂದಿದ್ದ ನಾಲ್ಕಾರು ಸಹೋದರಿಯರಲ್ಲಿ ಕೆಲವರು ಸ್ಪಷ್ಟವಾಗಿ ನನ್ನ ಜ್ಞಾಪಕದಲ್ಲಿದ್ದಾರೆ. ಅಲ್ಲಿ ನೆರೆದಿದ್ದ ಗಂಡಸರ ಸಂಖ್ಯೆಯೂ ಬಹು ಕಡಿಮೆಯಾಗಿದ್ದಿತು. ನಾನು ಪ್ರತಿಜ್ಞೆಯನ್ನು ಆಗಲೇ ಬರೆದು ಸಭೆಗೆ ತಂದಿದ್ದೆನು. ಅಲ್ಲಿದ್ದ ಜನರು ಅವುಗಳನ್ನು ಧರಿಸುವದಕ್ಕೆ ಮುಂಚೆ ಅವರಿಗೆ ಅವುಗಳ ಅರ್ಥವನ್ನು ಸಂಪೂರ್ಣವಾಗಿ ವಿವರಿಸಿದೆನು. ಅಲ್ಲಿ ಬಹು ಕಡಿಮೆ ಸಂಖ್ಯೆಯ ಜನರಿದ್ದುದರಿಂದ ನನಗೆ ದುಃಖವಾಗಲಿ ಆಶ್ಚರ್ಯವಾಗಲಿ ಉಂಟಾಗಲಿಲ್ಲ. ಏಕೆಂದರೆ ಜನ ಸಾಮಾನ್ಯದ ವರ್ತನೆಯಲ್ಲಿ ನಾನು ಈ ಸಹಜ ವ್ಯತ್ಯಾಸವನ್ನು ನೋಡಿದ್ದೇನೆ. ಅವರಿಗೆ ಗಲಭೆಯ ಕೆಲಸದಲ್ಲಿ ಪಕ್ಷಪಾತ, ಮೌನದಿಂದ ಮಾಡುವ ರಚನಾತ್ಮಕ ಕಾರ್ಯದಲ್ಲಿ ಅಪ್ರೀತಿ. ಈ ಅಂತರವು ಇಂದಿನವರೆಗೂ ನಿಂತಿದೆ.

ಆದರೆ ನಾನು ಈ ವಿಷಯವನ್ನು ಕುರಿತು ಒಂದು ಅಧ್ಯಾಯವನ್ನೇ ಬರೆಯಬೇಕಾಗುತ್ತದೆ. ಕಥೆಯನ್ನು ಮುಂದುವರಿಸೋಣ. ಏಳನೆಯ ತಾರೀಖಿನ ರಾತ್ರಿ ನಾನು ದಿಲ್ಲಿಗೂ ಅಮೃತಸರಕ್ಕೂ ಹೊರಟೆನು. ಎಂಟನೆಯ ತಾರೀಖು ಮಥುರೆಯನ್ನು ಸೇರಿದಾಗ ನನಗೆ ಮೊಟ್ಟಮೊದಲು ನನ್ನನ್ನು ದಸ್ತಗಿರಿ ಮಾಡುವರೆಂಬುದರ ಸುಳಿವು ಗೊತ್ತಾಯಿತು. ಮಥುರೆಯ ಮುಂದಿನ ನಿಲ್ದಾಣದಲ್ಲಿ ಆಚಾರ್ಯ ಗಿದವಾಣಿಯವರು ನನ್ನನ್ನು ನೋಡಲೋಸುಗ ಬಂದು ನನ್ನನ್ನು ದಸ್ತಗಿರಿ ಮಾಡುವದು ನಿಜವೆಂದು ತಿಳಿಸಿ ನನಗೆ ಅವಶ್ಯಕ ತೋರಿದರೆ ತಮ್ಮ ಸೇವೆಯನ್ನು ಸ್ವೀಕರಿಸಬೇಕೆಂದು ಹೇಳಿದರು. ಇದಕ್ಕೆ ನಾನು ಅವರನ್ನು ವಂದಿಸಿ ನನಗೆ ಅಗತ್ಯ ತೋರಿದಾಗ ಹಾಗೆ ಮಾಡುವೆನೆಂದು ಹೇಳಿದೆನು.

ನಾನು ಪಂಜಾಬ್ ಪ್ರಾಂತವನ್ನು ಪ್ರವೇಶಿಸಿದರೆ ಅಲ್ಲಿ ಪ್ರಜಾಶಾಂತಿಭಂಗವಾಗುವ ಸಂಭವವಿದ್ದುದರಿಂದ ನಾನು ಪಂಜಾಬಿನ ಸರ

ಹದ್ದನ್ನು ದಾಟಕೂಡದೆಂದು ರೈಲ್‌ಗಾಡಿಯು ಪಲ್‌ವಲ್ ಸ್ಟೇಷನನ್ನು ಮುಟ್ಟುವದಕ್ಕೆ ಮುಂಚೆಯೇ ನನಗೆ ಲಿಖಿತ ಮೂಲಕ ಆಜ್ಞೆಯನ್ನು ಕೊಟ್ಟರು. ರೈಲಿನಿಂದ ಇಳಿಯಬೇಕೆಂದು ಪೋಲೀಸಿನವರು ನನಗೆ ಹೇಳಿದರು "ಖಂಡಿತವಾಗಿ ಬರಬೇಕೆಂದು ಹೇಳಿ ನನ್ನನ್ನು ಪಂಜಾಬಿಗೆ ಕರೆದಿರುವದರಿಂದ ನಾನು ಅಲ್ಲಿಗೆ ಹೋಗಬಯಸುತ್ತೇನೆ ಅಲ್ಲಿಗೆ ನಾನು ಹೋಗುವದು ಶಾಂತಿಭಂಗಕ್ಕಲ್ಲ, ಶಾಂತಿಸ್ಥಾಪನೆಗೆ ಆದುದರಿಂದ ಈ ಆಜ್ಞೆಯನ್ನನುಸರಿಸುವದು ನನಗೆ ಸಾಧ್ಯವಲ್ಲವೆಂದು ನಾನು ವಿಷಾದಿಸುತ್ತೇನೆ" ಎಂದು ಹೇಳಿ ನಾನು ರೈಲಿನಿಂದಿಳಿಯಲಿಲ್ಲ.

ಕಟ್ಟಕಡೆಗೆ ರೈಲು ಪಲ್‌ವಲನ್ನು ಸೇರಿತು ಮಹಾದೇವ ದೇಶಾಯಿಯವರು ನನ್ನೊಡನೆ ಇದ್ದರು ನಡೆದಿದ್ದ ಸಮಾಚಾರವನ್ನು ಸ್ವಾಮಿ ಶ್ರದ್ಧಾನಂದರಿಗೆ ತಿಳಿಸಿ ಜನರು ಶಾಂತರಾಗಿರುವಂತೆ ಹೇಳಲು ನಾನು ಅವರನ್ನು ದಿಲ್ಲಿಗೆ ಕಳುಹಿಸಿದೆನು ನನಗೆ ಕೊಟ್ಟ ಆಜ್ಞೆಯನ್ನು ಉಲ್ಲಂಘಿಸಿ ಅದರ ಫಲವಾದ ಶಿಕ್ಷೆಯನ್ನನುಭವಿಸಬೇಕೆಂದು ನಾನು ನಿರ್ಧರಿಸಿದುದೇಕೆಂಬುದನ್ನೂ ನನಗೆ ಎಂತಹ ದಂಡನೆಯನ್ನಾದರೂ ಕೊಡಲಿ ನಾವು ಪೂರ್ಣ ಶಾಂತಿಯಿಂದಿದ್ದರೆ ನಮಗೆ ಜಯವಾಗುವದೆಂತೆಂಬುದನ್ನೂ ಅವರು ವಿವರಿಸಬೇಕಾಗಿದ್ದಿತು.

ಪಲ್‌ವಲ್ ನಿಲ್ದಾಣದಲ್ಲಿ ನನ್ನನ್ನು ರೈಲಿನಿಂದಿಳಿಸಿ ಪೋಲೀಸರ ವಶದಲ್ಲಿಟ್ಟರು. ಸ್ವಲ್ಪ ಹೊತ್ತಿನಲ್ಲಿಯೇ ದಿಲ್ಲಿಯಿಂದ ಒಂದು ರೈಲು ಬಂದಿತು. ನನ್ನನ್ನು ಮೂರನೆಯ ತರಗತಿಯ ಗಾಡಿಯೊಂದರಲ್ಲಿ ಕೂಡಿಸಿದರು ಪೋಲೀಸಿನವರು ನನ್ನ ಜೊತೆಯಲ್ಲಿಯೇ ಇದ್ದರು. ಮಥುರೆಯನ್ನು ತಲಪಿದಮೇಲೆ ನನ್ನನ್ನು ಪೋಲೀಸಿನವರ ಶಿಬಿರಕ್ಕೆ ಕರೆದುಕೊಂಡು ಹೋದರು. ಆದರೆ ನನ್ನನ್ನೇನು ಮಾಡಬೇಕೆಂದಿದ್ದರೆಂಬ ವಿಷಯವನ್ನಾಗಲಿ ಮುಂದೆ ನನ್ನನ್ನು ಎಲ್ಲಿಗೆ ಕರೆದುಕೊಂಡು ಹೋಗುವರೆಂಬುದನ್ನು ಕುರಿತಾಗಲಿ ಯಾವ ಪೋಲೀಸ್ ಅಧಿ

ಕಾರಿಯೂ ಹೇಳಲು ಶಕ್ತನಾಗಿರಲಿಲ್ಲ. ಮರುದಿನ ಬೆಳಗಿನ ಜಾವ ನಾಲ್ಕು ಘಂಟೆಗೆ ನನ್ನನ್ನು ಎಬ್ಬಿಸಿ ಮುಂಬಯಿಕಡೆ ಹೋಗುತ್ತಿದ್ದ ಸಾಮಾನಿನ ರೈಲಿನೊಳಕ್ಕೆ ಕರೆದೊಯ್ದರು. ಮಧ್ಯಾಹ್ನ ನನ್ನನ್ನು ಸವಾಯೀ ಮಾಧವಪುರದಲ್ಲಿ ಪುನಃ ಇಳಿಸಿದರು ಲಾಹೋರಿನಿಂದ ಅಂಚೆಯ ರೈಲಿನಲ್ಲಿ ಒಂದಿದ್ದ ಪೋಲೀಸ್ ಅಧಿಕಾರಿಗಳಾದ ಎಂ. ಬೌರಿಂಗರು ಈಗ ನನ್ನ ಮೇಲ್ವಿಚಾರಣೆಯನ್ನು ವಹಿಸಿದರು ಅವರ ಜೊತೆಗ ನನ್ನನ್ನು ಮೊದಲನೆಯ ದರ್ಜೆಯ ಗಾಡಿಯಲ್ಲಿ ಕೂಡಿಸಿದರು. ನಾನು ಸಾಮಾನ್ಯ ಕೈದಿಯಾಗಿದ್ದವನು ಈಗ 'ಜಂಟಲ್ ಮನ್' (ದೊಡ್ಡಮನುಷ್ಯ) ಕೈದಿಯಾದೆನು ಆ ಅಧಿಕಾರಿಗಳು ಸರ್ ಮೈಕೇಲ್ ಓಡ್ವಯರರ ದೀರ್ಘಸ್ತುತಿಪಾಠವನ್ನಾರಂಭಿಸಿದರು. "ಸರ್ ಮೈಕೇಲರಿಗೆ ವೈಯಕ್ತಿಕವಾಗಿ ನಿಮ್ಮ ಮೇಲೆ ಯಾವ ಹಗೆಯೂ ಇಲ್ಲ ನೀವು ಪಂಜಾಬಿನೊಳಗೆ ಕಾಲಿಟ್ಟರೆ ಅಲ್ಲಿ ನೆಮ್ಮದಿಯ ಭಂಗವಾಗಬಹುದೆಂದು ಅವರು ಶಂಕಿಸುತ್ತಾರೆ ಅಷ್ಟೆ " ಇತ್ಯಾದಿ ಕಟ್ಟಕಡೆಗೆ ಅವರು ನಾನು ನಾನಾಗಿಯೇ ಮುಂಬಯಿಗೆ ಹಿಂತಿರುಗಬೇಕೆಂದೂ ಪಂಜಾಬಿನ ಮೇರೆಯನ್ನು ದಾಟುವದಿಲ್ಲವೆಂದು ಒಪ್ಪಿಕೊಳ್ಳಬೇಕೆಂದೂ ನನಗೆ ಹೇಳಿದರು. ನನಗೆ ಕೊಟ್ಟಿದ್ದ ಆಜ್ಞೆಯಂತೆ ನಾನು ನಡೆಯುವದು ಸಾಧ್ಯವಿಲ್ಲವೆಂದೂ ನಾನಾಗಿಯೇ ಹಿಂತಿರುಗಲು ಸಿದ್ಧನಾಗಿರಲಿಲ್ಲವೆಂದೂ ನಾನು ಅವರಿಗೆ ಉತ್ತರಕೊಟ್ಟೆನು. ಆ ಅಧಿಕಾರಿಗಳಿಗೆ ಬೇರೆ ದಾರಿ ಯಾವುದೂ ತೋಚದಿದ್ದುದರಿಂದ ಅವರು ನನ್ನ ಮೇಲೆ ಕಾನೂನಿನ ಪ್ರಕಾರ ಕಾರ್ಯಕ್ರಮವನ್ನು ಕೈಗೊಳ್ಳಬೇಕಾಗುವದೆಂದು ಹೇಳಿದರು. "ಅದರೆ ನೀವು ನನ್ನನ್ನೇನು ಮಾಡಬೇಕೆಂದಿರುವಿರಿ ?" ಎಂದು ನಾನು ಅವರನ್ನು ಕೇಳಲು ಅವರು "ನನಗೆ ಗೊತ್ತಿಲ್ಲ ಮೇಲಿನವರ ಆಜ್ಞೆಯನ್ನು ನಿರೀಕ್ಷಿಸುತ್ತಿದ್ದೇನೆ. ಸದ್ಯಕ್ಕೆ ನಾನು ನಿಮ್ಮನ್ನು ಮುಂಬಯಿಗೆ ಕರೆದುಕೊಂಡು ಹೋಗುತ್ತೇನೆ." ಎಂದರು.

ಹೀಗೆ ನಾವು ಸೂರತನ್ನು ತಲಪಿದೆವು. ಇಲ್ಲಿ ನನ್ನನ್ನು ಬೇರೊಬ್ಬ ಪೋಲೀಸ್ ಅಧಿಕಾರಿಗಳ ವಶಕ್ಕೆ ಒಪ್ಪಿಸಿದರು. ನಾವು ಮುಂಬ

ಯಿಯನ್ನು ಮುಟ್ಟುತ್ತಲೇ ಅವರು "ಈಗ ನೀವು ಸ್ವತಂತ್ರರಾಗಿದ್ದೀರಿ. ಆದರೂ ನೀವು 'ಮೆರೀನ್ ಲೈನ್ಸ್' ಬಳಿ ಇಳಿದರೆ ಒಳ್ಳೆಯದು. ಅಲ್ಲಿ ನಾನು ನಿಮಗಾಗಿ ರೈಲನ್ನು ನಿಲ್ಲಿಸುವಂತೆ ಮಾಡುತ್ತೇನೆ ಕೊಲಾಬದಲ್ಲಿ ಜನರ ಸಂದಣಿ ಸೇರಿರುವ ಸಂಭವವುಂಟು" ಎಂದು ಹೇಳಿದರು ಅವರ ಇಚ್ಛೆಯಂತೆ ನಡೆಯಲು ನನಗೆ ಸಂತೋಷವೆಂದು ನಾನು ಅವರಿಗೆ ತಿಳಿಸಿದೆನು, ಇದರಿಂದ ಅವರು ಸಂತುಷ್ಟರಾಗಿ ನನ್ನನ್ನು ಅವರು ವಂದಿಸಿದರು ಅದೇ ಪ್ರಕಾರ ನಾನು 'ಮರೀನ್ ಲೈನ್ಸ್' ನಲ್ಲಿ ಇಳಿದೆನು. ನನ್ನ ಮಿತ್ರರೊಬ್ಬರ ಗಾಡಿಯು ಅಲ್ಲಿ ಹೋಗುತ್ತಲಿದ್ದಿತು. ಅದು ನನ್ನನ್ನು ರೇವಾಶಂಕರ ಚೌಕರಿಯವರ ಮನೆಗೆ ಕರೆದುಕೊಂಡು ಹೋಗಿಬಿಟ್ಟಿತು. ನನ್ನನ್ನು ದಸ್ತಗಿರಿಮಾಡಿದ ಸಮಾಚಾರದಿಂದ ಜನರು ಬಹು ಸಿಟ್ಟಾಗಿದ್ದರೆಂದೂ ಅವರ ಕ್ರೋಧವು ಅವರಿಗೆ ಹುಚ್ಚು ಹಿಡಿಸಿದ್ದಿತೆಂದೂ ನನಗೆ ತಿಳಿಸಿದರು "ಪಾಯಧುನಿಯ ಬಳಿ ಯಾವ ಕ್ಷಣವಾದರೂ ಗಲಭೆಯಾಗಬಹುದೆಂಬ ನಿರೀಕ್ಷಣೆಯಿದೆ. ಮ್ಯಾಜಿಸ್ಟ್ರೇಟರೂ ಪೋಲೀಸಿನವರೂ ಆಗಲೇ ಅಲ್ಲಿಗೆ ಹೋಗಿದ್ದಾರ" ಎಂದರವರು

ನಾನು ಮನೆಯನ್ನು ಸೇರುವುದಕ್ಕಿಲ್ಲ, ಅಷ್ಟರಲ್ಲಿಯೇ ಉಮರ್ ಸೊಬಾನಿಯವರೂ ಅನಸೂಯಾಬಾಯಿಯೂ ಬಂದು ನಾನು ತಕ್ಷಣವೇ ಪಾಯಧುನಿಗೆ ಮೋಟಾರಿನಲ್ಲಿ ಹೋಗಬೇಕೆಂದು ಹೇಳಿದರು. 'ಜನರು ತಾಳ್ಮೆಗೆಟ್ಟಿದ್ದಾರೆ. ಬಹು ಅಶಾಂತರಾಗಿದ್ದಾರೆ. ನಾವು ಅವರನ್ನು ಸಮಾಧಾನಪಡಿಸಲಾರೆವು. ಅದು ನಿಮ್ಮ ಕೈಯಿಂದಲೇ ಸಾಧ್ಯ." ಎಂದು ಹೇಳಿದರು

ನಾನು ಮೋಟಾರಿನಲ್ಲಿ ಕುಳಿತೆನು ಪಾಯಧುನಿಯ ಬಳಿ ದೊಡ್ಡ ಗುಂಪು ಸೇರಿದ್ದುದನ್ನು ನಾನು ಕಂಡೆನು ನನ್ನನ್ನು ನೋಡುತ್ತಲೇ ಜನರು ಆನಂದದಿಂದ ಮೈಮರೆತರು ಒಡನೆಯೇ ಮೆರವಣಿಗೆ ಕೂಡಿ ಆಕಾಶವು 'ವಂದೇಮಾತರಂ', 'ಅಲ್ಲಾ ಹೋ

ಅಕ್ಬರ್" ಎಂಬ ಧ್ವನಿಯಿಂದ ಬಿರಿದು ಹೋಯಿತು. ವಾಯುಧ್ವನಿಯಲ್ಲಿ ಪೋಲೀಸ್ ಸವಾರರು ನನ್ನ ಕಣ್ಣಿಗೆ ಬಿದ್ದರು. ಇಟ್ಟಿಗೆಯ ಚೂರುಗಳು ಮೇಲಿನಿಂದ ವರ್ಷಿಸುತ್ತಿದ್ದುವು. ಜನರು ಶಾಂತರಾಗಿರಬೇಕೆಂದು ನಾನು ಅವರ ಮುಂದೆ ಅಂಗಲಾಚಿಕೊಂಡೆನು. ಆದರೆ ಮಣ್ಣು ಹೆಂಟೆಗಳ ಮಳೆಯನ್ನು ನಾವು ತಪ್ಪಿಸಿಕೊಳ್ಳಲಾಗುವುದಿಲ್ಲವೆಂಬಂತೆ ತೋರಿತು.

ಮೆರವಣಿಗೆಯು ಅಬ್ದುರ್‌ರಹಮಾನ್ ಬೀದಿಯಿಂದ ಬಂದು ಕ್ರಾಫರ್ಡ್ ಮಾರ್ಕೆಟ್ಟಿನ ಕಡೆಗೆ ಹೋಗುತ್ತಿರುವಷ್ಟರಲ್ಲಿ ಇದ್ದಕ್ಕಿದ್ದ ಹಾಗೆಯೇ ಪೋಲೀಸ್ ಸವಾರರು ಅದನ್ನು ಅಡ್ಡಗಟ್ಟಿದರು. ಅವರು ಮೆರವಣಿಗೆಯು ಇನ್ನು ಮುಂದೆ ಕೋಟೆಯ ಕಡೆ ಹೋಗದಂತೆ ತಡೆಯುವುದಕ್ಕಾಗಿ ಅಲ್ಲಿಗೆ ಬಂದಿದ್ದರು. ಜನರು ಬಹು ಒತ್ತಾಡದಿಂದ ಕಿಕ್ಕಿರಿದಿದ್ದರು. ಅವರು ಇನ್ನೇನು ಪೋಲೀಸಿನವರ ಸಾಲನ್ನು ಮುರಿದಿದ್ದರು. ಆ ಜನಸಂದಣಿಯಲ್ಲಿ ನನ್ನ ಧ್ವನಿಯು ಕೇಳಿಸುವ ಸಂಭವವೇ ಇರಲಿಲ್ಲನೆನ್ನುವುದ. ಅಷ್ಟರಲ್ಲಿಯೆ ಪೋಲೀಸ್ ಸವಾರರ ಮುಖ್ಯಾಧಿಕಾರಿಯು ಅವರಿಗೆ ಜನರನ್ನು ಚದರಿಸಲು ಆಜ್ಞೆಯಿತ್ತನು. ಒಡನೆಯೇ ಸವಾರರು ತಮ್ಮ ಭರ್ಜಿಗಳನ್ನು ಬೀಸುತ್ತಾ ಜನರ ಮೇಲೆ ನುಗ್ಗಿದರು. ನನಗೆ ಗಾಯವಾಗುವುದೆಂದು ನನಗೆ ಒಂದು ಕ್ಷಣ ತೋರಿತು. ಆದರೆ ನನ್ನ ಈ ಭೀತಿಗೆ ಬಲವಿರಲಿಲ್ಲ. ಸವಾರರು ಭರ್ರೆಂದು ಹೋಗುವಾಗ ಅವರ ಭರ್ಜಿಗಳು ಮೋಟಾರುಗಾಡಿಗೆ ಸೋಕಿದ್ದುವು. ಜನಸಂದಣಿಯು ಒಡೆಯಿತು. ಗಲಾಟೆಗೆ ಮೊದಲಾಗಿ ಅದು ಜನರ ಓಡಿಹೋಗುವುದರಲ್ಲಿ ಪರಿಣಮಿಸಿತು. ಕೆಲವರು ಕಾಲ್ತುಳಿತಕ್ಕೆ ಸಿಕ್ಕಿದರು. ಕೆಲವರ ಮೈ ಜಜ್ಜಿ ಗಾಯವಾಯಿತು. ಆ ಜನ ಸಮೂಹದಲ್ಲಿ ಕುದುರೆಗಳಿಗೆ ಓಡಾಡಲು ಸ್ಥಳವೇ ಇರಲಿಲ್ಲ. ಇದರ ಜೊತೆಗೆ ಜನರು ಚದರಿ ಹೋಗಲು ಕೂಡ ದಾರಿಯಿರಲಿಲ್ಲ. ಆದುದರಿಂದ ಸವಾರರು ಕಣ್ಣು ಮುಚ್ಚಿಕೊಂಡು ಜನರ ಮಧ್ಯೆ ದಾರಿಯನ್ನು ಕೊಚ್ಚಿಕೊಂಡು ಹೋದರು. ತಾವು

ಮಾತಾಡುತ್ತಿದ್ದುದೇನೆಂಬುದು ಅವರಿಗೆ ಗೊತ್ತಿದ್ದಿತೆಂದು ಊಹಿಸಲಾಗುವದೇ ಇಲ್ಲ. ಇದೆಲ್ಲವೂ ಸೇರಿ ಅತ್ಯಂತ ಭಯಾನಕದೃಶ್ಯವಾಗಿದ್ದಿತು. ಸವಾರರೂ ಜನರೂ ಹುಚ್ಚಿನ ಗೊಂದಲದಲ್ಲಿ ಬೆರೆತು ಹೋಗಿದ್ದರು.

ಹೀಗೆ ಜನರು ಚದರಿದರು, ಮುಂದುವರಿಯದಂತೆ ತಡೆಯುಲ್ಲಟ್ಟರು ನಮ್ಮ ಮೋಟಾರು ಹೋಗಲು ಅವಕಾಶಕೊಟ್ಟರು ನಾನು ಅದನ್ನು ಕಮಿಶನರ ಕಚೇರಿಯ ಮುಂದೆ ನಿಲ್ಲಿಸಿ ಅವರಿಗೆ ಪೋಲಿಸಿನವರ ವರ್ತನೆಯ ವಿಷಯವನ್ನು ಹೇಳಲು ಅಲ್ಲಿ ಇಳಿದೆನು.

---

೨

# ಆ ವಾರ! (೨)

ನಾನು ಕಮಿಷನರರಾದ ಗ್ರಿಫಿತರ ಕಚೇರಿಗೆ ಹೋದೆನು. ಅಲ್ಲಿಗೆ ಹೋಗುವ ಮೆಟ್ಟಲಿನ ಬಳಿಯಲ್ಲೆಲ್ಲಾ ಯುದ್ಧಕ್ಕೋ ಎಂಬಂತೆ ಆಪಾದಪ್ರಸ್ತಕವೂ ಮಸ್ತಕವೂ ಶಸ್ತ್ರಸಜ್ಜಿತರಾದ ಸೈನಿಕರನ್ನು ನೋಡಿದೆನು. ಪಡಸಾಲೆಯಲ್ಲೆಲ್ಲಾ ಲವಲವಿಕೆಯು ಕಾಣಬರುತ್ತಿದ್ದಿತು. ನನ್ನನ್ನು ಕಚೇರಿಯೊಳಕ್ಕೆ ಬಿಟ್ಟಾಗ ಅಲ್ಲಿ ಮಿ। ಗ್ರಿಫಿತರನ್ನೂ ಅವರ ಬಳಿ ಕುಳಿತುಕೊಂಡಿದ್ದ ಬೌರಿಂಗರನ್ನೂ ನೋಡಿದೆನು

ನನ್ನ ಕಣ್ಣಿಗೆ ಬಿದ್ದ ದೃಶ್ಯಗಳನ್ನೆಲ್ಲಾ ನಾನು ಕಮಿಷನರರಿಗೆ ವರ್ಣಿಸಿದೆನು. ಅವರು ಸಂಕ್ಷೇಪವಾಗಿ "ಮೆರವಣಿಗೆಯು ಕೋಟೆಗೆ ಹೋದರೆ ಅಲ್ಲಿ ಗಲಭೆಯು ಆಗಿಯೇ ಆಗುತ್ತಿದ್ದುದರಿಂದ ಅದು ಅಲ್ಲಿಗೆ ಹೋಗುವದು ನನಗೆ ಇಷ್ಟವಿರಲಿಲ್ಲ. ಜನರು ಒಳ್ಳೆಯ ಮಾತನ್ನು ಕೇಳುವದಿಲ್ಲವೆಂದು ನನಗೆ ವ್ಯಕ್ತವಾಯಿತು. ಇದರಿಂದ ಪೋಲೀಸ್ ಸವಾರರಿಗೆ ಜನರ ಮೇಲೆ ನುಗ್ಗುವಂತೆ ಆಜ್ಞೆಮಾಡುವದನ್ನು ಬಿಟ್ಟು ನನಗೆ ಬೇರೆ ಮಾರ್ಗವಿರಲಿಲ್ಲ." ಎಂದರು

"ಆದರೆ ಇದರ ಫಲವೇನಾಗುವುದೆಂಬುದು ನಿಮಗೆ ಗೊತ್ತಿದ್ದಿತು. ಕುದುರೆಗಳು ಜನರನ್ನು ತುಳಿಯದೆ ಇರುವದು ಹೇಗೆ! ಆ ಸವಾರರನ್ನು ಅಲ್ಲಿಗೆ ಕಳುಹಿಸಲು ಆವಶ್ಯಕತೆಯೇ ಇರಲಿಲ್ಲವೆಂದು ನನಗೆ ತೋರುತ್ತದೆ." ಎಂದು ನಾನು ಹೇಳಿದೆನು

"ಅದನ್ನು ನೀವು ಗೊತ್ತುಮಾಡುವದು ಸಾಧ್ಯವಿಲ್ಲ. ನಿಮ್ಮ ಬೋಧನೆಯಿಂದ ಜನರ ಮೇಲೆ ಉಂಟಾಗುವ ಪರಿಣಾಮವು ನಿಮಗಿಂ

ತಲೂ ಚೆನ್ನಾಗಿ ನಮಗೆ—ಪೋಲಿಸ್ ಅಧಿಕಾರಿಗಳಿಗೆ—ಗೊತ್ತು. ಮೊಟ್ಟಮೊದಲೇ ನಾವು ಬಿಗಿಯಾದ ಏರ್ಪಾಟನ್ನು ಮಾಡದಿದ್ದರೆ ಆ ವೇಳೆಯ ಪರಿಸ್ಥಿತಿಯು ನಮ್ಮ ಕೈ ಮೀರಿ ಹೋಗುವುದು. ಜನರು ನಿಮ್ಮ ಅಂಕೆ ತಪ್ಪಿ ಹೋಗುವರೆಂದು ನಾನು ನಿಮಗೆ ಖಂಡಿತವಾಗಿ ಹೇಳುತ್ತೇನೆ ಕಾಯಿದೆಯನ್ನು ಪ್ರತಿಭಟಿಸುವದು ಅವರ ಮನಸ್ಸಿಗೆ ಥಟ್ಟನೆ ಹಿಡಿಯುತ್ತದೆಯೇ ಹೊರತು ಶಾಂತರಾಗಿರಬೇಕಾದ ಕರ್ತವ್ಯವನ್ನು ಅವರು ಅರಿತುಕೊಳ್ಳಲಾರರು ನಿಮ್ಮ ಉದ್ದೇಶಗಳ ವಿಷಯವಾಗಿ ನನಗೆ ಯಾವ ಸಂಶಯವೂ ಇಲ್ಲ. ಆದರೆ ಜನರು ಅವುಗಳನ್ನು ತಿಳಿದುಕೊಳ್ಳದೆ ತಮ್ಮ ಸಹಜಬುದ್ಧಿಯನ್ನು ಅನುಸರಿಸುತ್ತಾರೆ.'' ಎಂದು ಮಿ. ಗ್ರಿಫಿತರು ಹೇಳಿದರು

"ಇಗೋ ಈ ವಿಷಯದಲ್ಲಿಯೇ ನಿಮಗೂ ನನಗೂ ಮತಭೇದವಿರುವದು ಜನರು ಸ್ವಾಭಾವಿಕವಾಗಿ ಶಾಂತರು ಹಿಂಸಾಪರರಲ್ಲ.'' ಎಂದು ನಾನು ಉತ್ತರ ಕೊಟ್ಟೆನು.

ಹೀಗೆ ನಾವು ದೀರ್ಘವಾಗಿ ಚರ್ಚಿಸಿದೆವು. ಕಟ್ಟಕಡೆಗೆ ಮಿ ಗ್ರಿಫಿತರು "ನಿಮ್ಮ ಬೋಧನೆಯೆಲ್ಲಾ ಜನರ ಮೇಲೆ ವ್ಯರ್ಥವಾಗಿದೆಯೆಂದು ಕಂಡು ಬಂದರೆ ನೀವೇನು ಮಾಡುವಿರಿ?'' ಎಂದು ಕೇಳಿದರು

"ಹಾಗೆ ನನಗೆ ಸ್ಪಷ್ಟವಾಗಿ ತೋರಿಬಂದರೆ ನಾನು ಸವಿನಯ ಕಾಯಿದೆ ಭಂಗವನ್ನು ನಿಲ್ಲಿಸುವೆನು.''

"ಹಾಗೆಂದರೇನರ್ಥ? ನಿಮ್ಮನ್ನು ಬಿಡುಗಡೆ ಮಾಡಿದ ಕ್ಷಣವೆ ನೀವು ಪಂಜಾಬಿಗೆ ಹೊರಡುವಿರೆಂದು ನೀವು ಮಿ. ಬೌರಿಂಗರಿಗೆ ಹೇಳಿದಿರಿ,''

"ನಿಜ. ಮೊದಲನೆಯ ರೈಲಿನಲ್ಲಿಯೇ ಪಯಣ ಮಾಡಬೇಕೆಂದಿದ್ದೆನು. ಆದರೆ ಈ ದಿನ ಅದು ಸಾಧ್ಯವಿಲ್ಲ"

"ನೀವು ತಾಳ್ಮೆಯಿಂದಿದ್ದರೆ ಈ ವಿಷಯವು ನಿಮಗೆ ಸ್ಪಷ್ಟವಾಗಿ ತೋರುತ್ತಾ ಬಂದೇ ಒರುವುದು. ಇಂದು ಅಹಮದಾಬಾದಿನಲ್ಲಿ ಏನು ನಡೆಯುತ್ತಿದೆ ಎಂಬುದು ನಿಮಗೆಗೊತ್ತೆ? ಅಮೃತಸರದಲ್ಲಿಯೊ? ಎಲ್ಲಾ ಕಡೆಯೂ ಜನರಿಗೆ ಹೆಚ್ಚು ಕಡಿಮೆ ಹುಚ್ಚು ಹಿಡಿದಿದೆ. ವಾಸ್ತವಿಕವಾಗಿ ನನಗೆ ಎಲ್ಲಾ ವಿಷಯವೂ ಇನ್ನೂ ತಿಳಿದಿಲ್ಲ. ಕೆಲವು ಕಡೆ ವರ್ತಮಾನದ ತಂತಿಗಳನ್ನು ಕಿತ್ತು ಹಾಕಿಬಿಟ್ಟಿದ್ದಾರೆ. ಈ ಎಲ್ಲಾ ಗಲಭೆಗಳ ಜವಾಬ್ದಾರಿಯೂ ನಿಮ್ಮದೇ ಎಂದು ನಾನು ನಿಮಗೆ ಹೇಳುತ್ತೇನೆ."

"ನನಗೆ ಹಾಗೆ ಕಂಡುಬಂದಿದೆಯೆಲ್ಲಾ ನಾನು ಅದನ್ನು ಸಿದ್ಧವಾಗಿ ಒಪ್ಪಿಕೊಳ್ಳುತ್ತೇನೆ. ಇದರಲ್ಲಿ ಸಂಶಯ ಬೇಡ. ಆದರೆ ಅಹಮದಾಬಾದಿನಲ್ಲಿ ಗಲಭೆ ನಡದಿರುವದು ನಿಜವೆಂದು ತಿಳಿದುಬಂದರೆ ಅದೇನೋ ನನಗೆ ಆಶ್ಚರ್ಯಕ್ಕೂ ಸ್ಪರ್ಧೆಗೂ ಕಾರಣವಾಗುತ್ತದೆ ಅಮೃತಸರದ ವಿಷಯವನ್ನು ನಾನು ಹೇಳಲಾರೆ ಅದಕ್ಕೆ ನಾನು ಹೊಣೆಯಲ್ಲ. ಅಲ್ಲಿಗೆ ನಾನು ಎಂದೂ ಹೋಗಿಲ್ಲ ಅಲ್ಲಿ ನನಗೆ ಯಾರೂ ಗೊತ್ತಿಲ್ಲ ಆದರೆ ಪಂಜಾಬಿನ ವಿಷಯದಲ್ಲಿ ಕೂಡ ನನಗೆ ಇಷ್ಟು ಚೆನ್ನಾಗಿ ಗೊತ್ತು--ಅಲ್ಲಿನ ಸರಕಾರದವರು ನನ್ನನ್ನು ಪಂಜಾಬಿನೊಳಕ್ಕೆ ಪ್ರವೇಶಿಸದಂತೆ ನಿರೋಧಿಸದಿದ್ದರೆ ಅಲ್ಲಿನ ಪರಿಸ್ಥಿತಿಯು ಶಾಂತವಾಗಿರುವಂತೆ ಮಾಡಲು ನನ್ನಿಂದ ಹೆಚ್ಚು ಸಹಾಯವಾಗುತ್ತಿದ್ದಿತು. ನನ್ನನ್ನು ತಡದು ಅವರು ಜನರನ್ನು ಅನಾವಶ್ಯಕವಾಗಿ ರೇಗಿಸಿದರು"

ಈ ರೀತಿಯಾಗಿ ನಾವು ಚರ್ಚಿಸುತ್ತಾ ಹೋದೆವು ನಾವಿಬ್ಬರೂ ಒಮ್ಮತದಿಂದಿರಲು ಸಾಧ್ಯವಿರಲಿಲ್ಲ "ನಾನು ಚೌಪಾಟಿಯಲ್ಲಿ

ಭಾಷಣವಾಡಿ ಶಾಂತರಾಗಿರಬೇಕೆಂದು ಜನರಿಗೆ ಹೇಳಬೇಕೆಂದಿದ್ದೇನೆ '' ಎಂದು ಹೇಳಿ ನಾನು ಅವರಿಗೆ ವಂದಿಸಿ ಅಲ್ಲಿಂದ ತೆರಳಿದೆನು. ಚೌಪಾಟಿ ಮರಳಿನಲ್ಲಿ ಸಭೆಯು ಸೇರಿತು ನಾನು ಅಹಿಂಸಾ ಧರ್ಮವನ್ನೂ ಸತ್ಯಾಗ್ರಹದ ಪರಿಮಿತಿಯನ್ನೂ ಕುರಿತು ದೀರ್ಘವಾಗಿ ಮಾತನಾಡುತ್ತಾ '' ಸತ್ಯಾಗ್ರಹವು ಮುಖ್ಯವಾಗಿ ಸತ್ಯವಂತರ ಆಯುಧ ಸತ್ಯಾಗ್ರಹಿಯು ಅಹಿಂಸಾವ್ರತವನ್ನು ಕೈಕೊಂಡಿರಬೇಕು ಆದುದರಿಂದ ಜನರು ಅಹಿಂಸೆಯನ್ನು ಕಾಯಾ ವಾಚಾ ಮನಸಾ ಅನುಸರಿಸದಿದ್ದರೆ ನಾನು ಸತ್ಯಾಗ್ರಹ ಯುದ್ಧವನ್ನು ನಡೆಸಲಾಗುವದಿಲ್ಲ.'' ಎಂದು ಹೇಳಿದೆನು

ಅಹಮುದಾಬಾದಿನಲ್ಲಿ ನಡೆದ ಗುಂಪೆಗಳ ಸುದ್ದಿಯು ಅನಸೂಯಾಬಾಯಿಗೂ ತಲುಪಿದ್ದಿತು ಆಕೆಯನ್ನೂ ದಸ್ತಗಿರಿ ಮಾಡಿರುವದಾಗಿ ಯಾರೋ ವರ್ತಮಾನವನ್ನು ಹರಡಿದ್ದರು ಇದನ್ನು ಕೇಳಿ ಗಿರಣಿ ಕೂಲಿಗಾರರು ಸ್ತ್ರುತಿಗೆಟ್ಟು ಕೆಲಸ ಬಿಟ್ಟು ಹಿಂಸೆಯ ಕಾರ್ಯದಲ್ಲಿ ತೊಡಗಿದ್ದರು ಒಬ್ಬ ಪೋಲೀಸ್ ನೌಕರನು ಈ ದೊಂಬಿಯಲ್ಲಿ ಪ್ರಾಣ ಕಳೆದುಕೊಂಡನು.

ನಾನು ಅಹಮುದಾಬಾದಿಗೆ ಹೋದೆನು. ನಡಿಯಾದ' ರೈಲ್ವೇ ಸ್ಟೇಷನಿನ ಬಳಿ ಕಂಬಿಗಳನ್ನು ಕೀಳಲು ಯತ್ನಿಸಿದ್ದರಿಂದಲೂ ವೀರಂಗಾಮದಲ್ಲಿ ಒಬ್ಬ ಸರಕಾರಿ ಅಧಿಕಾರಿಯನ್ನು ಕೊಂದಿದ್ದರಿಂದಲೂ ಅಹಮುದಾಬಾದಿನಲ್ಲಿ 'ಯುದ್ಧದ ಕಾನೂನು' (ಮಾರ್ಶಲ್ ಲಾ)ನ ಪ್ರಯೋಗವಾಗಿದ್ದಿತೆಂದೂ ನನಗೆ ತಿಳಿಯಬಂದಿತು. ಜನರು ಭಯಾಹತರಾಗಿದ್ದರು. ಅವರು ಹಿಂಸಾಕಾರ್ಯವನ್ನೆಸಗಿದ್ದರು ಈಗ ಸರಕಾರವು ಅವರಿಂದ ಅದಕ್ಕೆಲ್ಲಾ ಬಡ್ಡಿಯೊಡನೆ ದಂಡ ತೆರಿಸುತ್ತಿದ್ದಿತು.

ನನ್ನನ್ನು ಕವಿಷನರಾದ ಮಿ. ಪ್ರಾಟರ ಬಳಿಗೆ ಕರೆದುಕೊಂಡು ಹೋಗಲು ಪೋಲೀಸ್ ಅಧಿಕಾರಿಯೊಬ್ಬರು ನಿಲ್ದಾಣದ ಬಳಿ

ಕಾದಿದ್ದರು. ನಾನು ಅವರ (ಎಂ. ಪ್ರ್ಯಾಟರ) ಬಳಿಗೆ ಹೋದಾಗ ಅವರು ಅತಿಕೋಪಾವಿಷ್ಟರಾಗಿದ್ದರು. ನಾನು ಅವರಲ್ಲಿ ಮೃದುವಾಗಿ ಮಾತನಾಡಿದೆನು. ಗಲಭೆಗಳು ನಡೆದುದಕ್ಕಾಗಿ ನನ್ನ ವಿಷಾದವನ್ನು ವ್ಯಕ್ತಪಡಿಸಿದೆನು. ಯುದ್ಧದ ಕಾನೂನು ಅಗತ್ಯವಿಲ್ಲವೆಂದು ಅವರಿಗೆ ಸೂಚಿಸಿ ಶಾಂತಿಯ ಪುನಸ್ಸ್ಥಾಪನೆಗೆ ಯಾವ ಪ್ರಯತ್ನ ಮಾಡಿದರೂ ಸಹಕರಿಸುವದಕ್ಕೆ ನಾನು ಸಿದ್ಧನಾಗಿರುವೆನೆಂದು ಅವರಿಗೆ ತಿಳಿಸಿದೆನು. ಸಾಬರ್ಮತಿ ಆಶ್ರಮದ ಹೊರ ಅಂಗಳದಲ್ಲಿ ಸಾರ್ವಜನಿಕ ಸಭೆಯನ್ನು ನಡೆಸಲು ನಾನು ಅಪ್ಪಣೆಯನ್ನು ಕೇಳಿದೆನು. ಈ ಸೂಚನೆಯು ಅವರ ಮನಸ್ಸಿಗೆ ಒಪ್ಪಿತು ೧೩ ನೆಯ ಏಪ್ರಿಲ್ ಭಾನುವಾರ ಸಭೆಯು ಸೇರಿತು ಯುದ್ಧದ ಕಾನೂನನ್ನು ಆ ದಿನವೋ ಮರುದಿನವೋ ತೆಗೆದುಬಿಟ್ಟರು ಸಭೆಯಲ್ಲಿ ಭಾಷಣ ಮಾಡುತಾ ನಾನು ಜನರಿಗೆ ತಮ್ಮ ತಪ್ಪಿನ ಮನವರಿಕೆಯಾಗುವಂತೆ ಮಾಡಲು ಪ್ರಯತ್ನಪಟ್ಟೆನು. ಪ್ರಾಯಶ್ಚಿತ್ತರೂಪವಾಗಿ ನಾನು ಮೂರು ದಿವಸ ಉಪವಾಸ ಮಾಡುವೆನೆಂದು ಹೇಳಿ ಜನರೂ ಅದೇ ರೀತಿಯಲ್ಲಿ ಒಂದು ದಿವಸ ಉಪವಾಸ ಮಾಡಬೇಕೆಂದು ಅವರನ್ನು ಕೇಳಿಕೊಂಡನು ಮತ್ತು ಹಿಂಸಾಕಾರ್ಯವನ್ನು ಮಾಡಿದ್ದವರು ತಮ್ಮ ತಪ್ಪನ್ನು ಒಪ್ಪಿಕೊಳ್ಳಬೇಕೆಂದು ಸೂಚಿಸಿದೆನು.

ನನ್ನ ಕರ್ತವ್ಯವು ನನಗೆ ಹಗಲಿನ ಬೆಳಕಿನಂತೆ ಸ್ಪಷ್ಟವಾಗಿ ಕಂಡಿತು ನಾನು ಈ ಕೂಲಿಗಾರರ ಮಧ್ಯ ಎಷ್ಟೋ ಕಾಲವನ್ನು ಕಳೆದು ಅವರ ಸೇವೆಯನ್ನು ಮಾಡಿದ್ದೆನು ಅವರಿಂದ ಉತ್ತಮವಾದ ವರ್ತನೆಯನ್ನು ನಿರೀಕ್ಷಿಸಿದ್ದೆನು. ಇಂತಹರು ದೊಂಬಿಯಲ್ಲಿ ಸೇರಿದ್ದರೆಂಬುದು ನನಗೆ ಸಹನಾತೀತವಾಯಿತು. ಅವರ ಅಪರಾಧದಲ್ಲಿ ನಾನೂ ಭಾಗಿಯೆಂದು ನನಗೆ ತೋರಿತು. ಜನರಿಗೆ ತಮ್ಮ ತಪ್ಪನ್ನು ಒಪ್ಪಿಕೊಳ್ಳಬೇಕೆಂದು ಹೇಳಿದಂತೆಯೇ ಸರಕಾರದವರು ಕೂಡ ಈ ತಪ್ಪುಗಳನ್ನು ಕ್ಷಮಿಸಬೇಕೆಂದು ಸೂಚಿಸಿದೆನು ಇಬ್ಬರೂ ನನ್ನ ಸಲಹೆಯನ್ನು ಕೇಳಲಿಲ್ಲ

ದಿವಂ ಸರ್ ರಮಣಭಾಯಿಯವರೂ ಅಹಮದಾಬಾದಿನ ಇತರ ಪೌರಜನರೂ ನನ್ನ ಬಳಿಗೆ ಬಂದು ಸತ್ಯಾಗ್ರಹವನ್ನು ನಿಲ್ಲಿಸಬೇಕೆಂದು ಕೇಳಿಕೊಂಡರು. ಇದಕ್ಕೆ ಅಗತ್ಯವೇ ಇರಲಿಲ್ಲ. ಏಕೆಂದರೆ ಜನರು ಶಾಂತಿರಕ್ಷಣೆಯ ಪಾಠವನ್ನು ಕಲಿತುಕೊಳ್ಳುವವರೆಗೂ ಸತ್ಯಾಗ್ರಹವನ್ನು ನಿಲ್ಲಿಸಬೇಕೆಂದು ನಾನು ಆಗಲೇ ಮನಸ್ಸು ಮಾಡಿದ್ದೆನು. ಈ ಮಿತ್ರರು ಸಂತುಷ್ಟರಾಗಿ ತೆರಳಿದರು.

ಆದರೆ ನನ್ನ ಈ ನಿರ್ಧಾರವು ಇತರ ಮಿತ್ರರನ್ನು ಅಸಂತುಷ್ಟರನ್ನಾಗಿ ಮಾಡಿತು. ನಾನು ಎಲ್ಲಾ ಕಡೆಯೂ ಶಾಂತಿಯನ್ನು ನಿರೀಕ್ಷಿಸಿ ಸತ್ಯಾಗ್ರಹವನ್ನು ಹೂಡುವದಕ್ಕೆ ಮುಂಚೆ ಅಂತಹ ಶಾಂತಿ ಸ್ಥಾಪನೆಯು ಆವಶ್ಯಕವೆನ್ನುವದಾದರೆ ಜನ ಸಾಮಾನ್ಯದ ಸತ್ಯಾಗ್ರಹವು ಸಾಧ್ಯವೇ ಇಲ್ಲವೆಂದು ಅವರಿಗೆ ತೋರಿತು. ಇವರಿಗೆ ನನ್ನ ಮತಭೇದವನ್ನು ವ್ಯಕ್ತಪಡಿಸಿದೆನು. ನಾನು ಯಾರ ಮಧ್ಯೆ ಕೆಲಸಮಾಡುತ್ತಿದ್ದೆನೋ ಮತ್ತು ಯಾರು ಅಹಿಂಸೆಗೂ ತನುಗುಂಟಾಗುವ ಕಷ್ಟವನ್ನು ಸಹಿಸುವದಕ್ಕೂ ಸಿದ್ಧರಾಗಿರುವರೆಂದು ನಿರೀಕ್ಷಿಸಿದ್ದೆನೋ ಅವರೇ ಅಹಿಂಸೆಯನ್ನು ಅನುಸರಿಸದಿದ್ದರೆ ಸತ್ಯಾಗ್ರಹವು ಅಸಾಧ್ಯವೆಂಬುದನ್ನು ಹೇಳಬೇಕಾಗಿಯೇ ಇರಲಿಲ್ಲ. ಜನರನ್ನು ಸತ್ಯಾಗ್ರಹದ ಹಾದಿಯಲ್ಲಿ ಕರೆದೊಯ್ಯಲೆಳಸುವವರು ಅದರಿಂದ ನಿರೀಕ್ಷಿಸಲ್ಪಟ್ಟಷ್ಟುಮಟ್ಟಿಗಾದರೂ ಅವರನ್ನು ಅಹಿಂಸಾಮಾರ್ಗದಲ್ಲಿಟ್ಟಿರಲು ಶಕ್ತರಾಗಿರಬೇಕೆಂದು ನನ್ನ ಧೃಢ ಮತವಾಗಿದ್ದಿತು. ಇಂದು ಕೂಡ ನನ್ನ ಅಭಿಪ್ರಾಯವು ಅದೇ

---

೩೪

# ಹಿಮಾಲಯದಂತಹ ಪ್ರಮಾದ

ಅಹಮದಾಬಾದಿನ ಸಭೆಯು ಮುಗಿದ ಸ್ವಲ್ಪ ಹೊತ್ತಿನಲ್ಲಿಯೇ ನಾನು ನಡಿಯಾದಕ್ಕೆ ತೆರಳಿದೆನು. 'ಹಿಮಾಲಯದಂತಹ ಪ್ರಮಾದ' ವೆಂಬ ಶಬ್ದಪ್ರಯೋಗವನ್ನು ನಾನು ಮೊಟ್ಟಮೊದಲು ಮಾಡಿದುದು ಇಲ್ಲಿಯೇ. ಅಮೇಲೆ ಇದು ವಿಶೇಷ ಪ್ರಚಾರಕ್ಕೆ ಬಂದಿತು ಅಹಮದಾಬಾದಿನಲ್ಲಿ ಕೂಡ ನನ್ನ ತಪ್ಪು ನನಗೆ ಸ್ವಲ್ಪಸ್ವಲ್ಪವಾಗಿ ಗೋಚರಕ್ಕೆ ಬರತೊಡಗಿತು. ಆದರೆ ನಾನು ನಡಿಯಾದನ್ನು ತಲುಪಿ ಅಲ್ಲಿನ ನಿಜಪರಿಸ್ಥಿತಿಯನ್ನು ನೋಡಿ ಖೇಡಾಜಿಲ್ಲೆಯ ಅನೇಕ ಜನರು ದಸ್ತಗಿರಿಯಾದ ವಿಷಯವನ್ನು ಕೇಳಿದ ಮೇಲೆ ನಾನು ಖೇಡಾಜಿಲ್ಲೆಯಲ್ಲಿನ ಮತ್ತು ಇತರಕಡೆಗಳ ಜನರನ್ನು ಕಾನೂನಿನ ಸವಿನಯ ಭಂಗದಲ್ಲಿ ತೊಡಗಲು ಕರೆದದು ಅಗಾಧವಾದ ತಪ್ಪೆಂದು ನನಗೆ ಥಟ್ಟನೆ ಹೊಳೆಯಿತು ಹಾಗೆ ಅವರನ್ನು ಕರೆಯಲು ಇನ್ನೂ ಕಾಲವೊದಗಿದ್ದಿರಲಿಲ್ಲವೆಂದೂ ನನಗೆ ಭಾಸವಾಯಿತು ಆಗ ನಾನು ಸಾರ್ವಜನಿಕಸಭೆಯಲ್ಲಿ ಮಾತನಾಡುತ್ತಿದ್ದೆನು ನಾನು ಹೀಗೆ ನನ್ನ ತಪ್ಪನ್ನು ಒಪ್ಪಿಕೊಂಡುದರಿಂದ ನಾನು ಅಷ್ಟಿಷ್ಟು ಅಪಹಾಸ್ಯಕ್ಕೆ ಗುರಿಯಾಗಲಿಲ್ಲ. ಆದರ ಹಾಗೆ ಒಪ್ಪಿಕೊಂಡುದಕ್ಕಾಗಿ ನಾನು ಎಂದೂ ಪಶ್ಚಾತ್ತಾಪಪಟ್ಟಿಲ್ಲ. ಏಕೆಂದರೆ ಯಾರೇ ಆಗಲಿ ತಮ್ಮ ತಪ್ಪುಗಳನ್ನು ಪರ್ವತಪ್ರಮಾಣದಲ್ಲಿಯೂ ಇತರರ ದೋಷಗಳನ್ನು ರಜಕಣಸಮಾನವಾಗಿಯೂ ದೃಷ್ಟಿಸುವದಕ್ಕೆ ಕಲಿತುಕೊಂಡಾಗಲೇ ಅವೆರಡರ ನ್ಯಾಯವಾದ ತೂಕವನ್ನು ಹೋಲಿಸಿ ತಿಳಿದುಕೊಳ್ಳುವದು ಸಾಧ್ಯವೆಂಬುದು ಸದಾ ನನ್ನ ಅಭಿಪ್ರಾಯವಾಗಿದೆ, ಮತ್ತು ಸತ್ಯಾಗ್ರಹಿಯಾಗಿರಲಿಚ್ಛಿಸುವನು ಈ ನಿಯಮವನ್ನು ಚಾಚೂ ತಪ್ಪದೆ ಆತ್ಮಸಾಕ್ಷಿಯಾಗಿ ನಡಸುವದು ಆವಶ್ಯಕವೆಂದು ನನ್ನ ನಂಬಿಕೆ.

ಇನ್ನು ಆ ಹಿಮಾಲಯದಂತಹ ತಪ್ಪು ಏನೆಂಬುದನ್ನು ನೋಡೋಣ. ಕಾನೂನಿನ ಸವಿನಯ ಭಂಗವನ್ನು ನಡೆಸುವದಕ್ಕೆ ಮುಂಚೆ ಯಾರೊಬ್ಬರೂ ನಾಡಿನ ಕಾನೂನುಗಳನ್ನು ಮನಃಪೂರ್ವಕವಾಗಿಯೂ ವಿನಯದಿಂದಲೂ ಪಾಲಿಸಿರಬೇಕು. ಬಹುಮಟ್ಟಿಗೆ ನಾವು ಈ ಕಾನೂನುಗಳನ್ನು ವಿಚಾರದಿರುವದು ಅವುಗಳ ಭಂಗದಿಂದ ನಾವು ಗುರಿಯಾಗುವ ಶಿಕ್ಷೆಗಾಗಿ ನೈತಿಕ ತತ್ವವನ್ನೊಳಗೊಳ್ಳದ ಕಾನೂನುಗಳ ವಿಷಯದಲ್ಲಂತು ಇದು ವಿಶೇಷವಾಗಿ ನಿಜ. ದೃಷ್ಟಾಂತವಾಗಿ, ಕದಿಯಕೂಡದೆಂದು ಕಾನೂನಿರಲಿ ಇಲ್ಲದಿರಲಿ, ಪ್ರಾಮಾಣಿಕನೂ ಮಾನವಂತನೂ ಆದ ಮನುಷ್ಯನು ಇದ್ದಕ್ಕಿದ್ದಹಾಗೆಯೇ ಕಳ್ಳತನಕ್ಕೆ ಬೀಳುವದಿಲ್ಲ ಆದರೆ ಇದೇ ಮನುಷ್ಯನೇ ಕತ್ತಲೆಯಾದ ಮೇಲೆ ಬೈಸಿಕಲ್‌ಗಳಿಗೆ ದೀಪವಿಲ್ಲದೆ ಹೋಗಕೂಡದೆಂಬ ನಿಯಮವನ್ನು ಮುರಿಯಲು ಸ್ವಲ್ಪವೂ ಪಶ್ಚಾತ್ತಾಪಪಡುವದಿಲ್ಲ. ಅಷ್ಟೇಕೆ? ಈ ವಿಷಯದಲ್ಲಿ ಹೆಚ್ಚು ಎಚ್ಚರಿಕೆಯಿಂದಿರಬೇಕೆಂದು ಆತನಿಗೆ ಬದ್ಧಿ ಹೇಳಿದರೆ ಅದನ್ನು ಅವನು ಒಡನೆಯೇ ಮನ್ನಿಸುವದು ಕೂಡ ಸಂದೇಹಾಸ್ಪದವಾದ ಮಾತು ಆದರೆ ಅವನು ಈ ರೀತಿಯ ಕಾನೂನನ್ನು ಅತಿಕ್ರಮಿಸುವದರಿಂದ ಒದಗುವ ನ್ಯಾಯಸ್ಥಾನದಲ್ಲಿನ ವ್ಯವಹಾರದ ತೊಂದರೆಯನ್ನು ತಪ್ಪಿಸಿಕೊಳ್ಳುವದಕ್ಕಾದರೂ ಅದನ್ನು ಅನುಸರಿಸುತ್ತಾನೆ. ಇಂತಹ ಅನುಸರಣೆಯು ಸತ್ಯಾಗ್ರಹಿಯು ಮಾಡಬೇಕಾದ ಮನಃಪೂರ್ವಕವಾದ ಐಚ್ಛಿಕವಾದ ಅನುಸರಣೆಯಲ್ಲ. ಸತ್ಯಾಗ್ರಹಿಯು ಸಮಾಜದ ನಿಯಮಗಳನ್ನು ಪಾಲಿಸುವದು ತನ್ನ ಪವಿತ್ರ ಧರ್ಮವೆಂದೆಣಿಸುವದರಿಂದ ಅವುಗಳನ್ನು ತನ್ನ ಸ್ವಂತ ಇಚ್ಛೆಯಿಂದಲೂ ತಿಳಿವಳಿಕೆಯಿಂದಲೂ ಆಚರಿಸುತ್ತಾನೆ. ಯಾರೊಬ್ಬನು ಸಮಾಜದ ನಿಯಮಗಳನ್ನು ಈ ರೀತಿಯಾಗಿ ಆತ್ಮಸಾಕ್ಷಿಯಾಗಿ ಅನುಸರಿಸಿದಮೇಲೆಯೇ ಅವನು ಯಾವ ನಿಯಮಗಳು ಒಳ್ಳೆಯವು, ನೀತಿಯುತವಾದವು, ಯಾವುವು ಕೆಟ್ಟವು, ಅನ್ಯಾಯವಾದುವು ಎಂಬುದನ್ನು ನಿರ್ಧರಿಸುವ ಸ್ಥಿತಿಯಲ್ಲಿರುತ್ತಾನೆ ಆಗಲೇ ಅತನು ಕೆಲವು ಕಾನೂನುಗಳನ್ನು ನಿಷ್ಕೃಷ್ಟವಾದ ಪರಿಸ್ಥಿತಿಯಲ್ಲಿ ಭಂಗ

ಪಡಿಸುವ ಅಧಿಕಾರವನ್ನು ಪಡೆಯುತ್ತಾನೆ. ಈ ಅವಶ್ಯಕವಾದ ಪರಿಮಿತಿಯನ್ನು ಲಕ್ಷ್ಯಕ್ಕೆ ತಂದುಕೊಳ್ಳದಿದ್ದುದೇ ನನ್ನ ತಪ್ಪಾಗಿದ್ದಿತು. ಜನರು ಸವಿನಯ ಕಾನೂನು ಭಂಗಕ್ಕೆ ತಕ್ಕ ಯೋಗ್ಯತೆಯನ್ನು ಮೇಲೆ ಹೇಳಿದಂತೆ ಸಂಪಾದಿಸುವದಕ್ಕೆ ಮುಂಚೆಯೇ ಅವರನ್ನು ಆ ಕಾರ್ಯದಲ್ಲಿ ತೊಡಗಲು ಕರೆದಿದ್ದೆನು. ನನ್ನ ಈ ತಪ್ಪು ನನಗೆ ಹಿಮಾಲಯದಂತಹ ಅಗಾಧ ಪರಿಣಾಮವುಳ್ಳದಾಗಿ ಕಂಡಿತು. ನಾನು ಖೇಡಾ ಜಿಲ್ಲೆಯೊಳಗೆ ಕಾಲಿಡುತ್ತಲೇ ಖೇಡಾ ಸತ್ಯಾಗ್ರಹಕದನದ ನೆನಹುಗಳೆಲ್ಲಾ ನನ್ನ ಮನಸ್ಸಿಗೆ ಒಂದು ಅಷ್ಟು ಸ್ಪಷ್ಟವಾಗಿದ್ದುದನ್ನು ನಾನು ಕಾಣದಿದ್ದುದೆಂತೆಂದು ಆಶ್ಚರ್ಯಪಟ್ಟೆನು. ಯಾವುದೊಂದು ಜನಾಂಗವು ಕಾನೂನಿನ ಸವಿನಯ ಭಂಗವನ್ನು ನಡೆಸುವ ಯೋಗ್ಯತೆಯನ್ನು ಪಡೆಯುವದಕ್ಕೆ ಮುಂಚೆ ಅದರ ಗಂಭೀರತರರಹಸ್ಯವನ್ನು ಸಂಪೂರ್ಣವಾಗಿ ತಿಳಿದುಕೊಂಡಿರಬೇಕೆಂದು ನನಗೆ ಮನವರಿಕೆಯಾಯಿತು.

ಆದರೆ ನ್ಯಾಯವಾಗಿ ಹೀಗೆ ವಾದಿಸಬಹುದು "ಮುಕ್ಕಾಲು ಪಾಲು ಜನರು ಆಗಾಗ ಕಾನೂನನ್ನು ತಪ್ಪಿಸಿಕೊಳ್ಳುವ ಅಭ್ಯಾಸವನ್ನಿಟ್ಟುಕೊಂಡಿರುತ್ತಾರೆ. ಇಂತಹರು ಇದ್ದಕ್ಕಿದ್ದಹಾಗೆಯೇ ಕಾನೂನಿನ ಸವಿನಯ ಭಂಗದ ಅರ್ಥವನ್ನು ಅರಿಯಬಲ್ಲರೆಂತು? ಅಥವಾ ಅದರ ಪರಿಮಿತಿಯನ್ನು ವಿಚಾರದಿರುವರೆಂತು? " ಸಾವಿರಾರು ಲಕ್ಷಾಂತರ ಜನರು ಮೇಲೆ ತಿಳಿಸಿರುವ ಆದರ್ಶರೀತಿಯಲ್ಲಿ ವರ್ತಿಸವದೇನೂ ಸುಲಭ ವಿಷಯವಲ್ಲವೆಂದು ನಾನು ಒಪ್ಪಿಕೊಳ್ಳುತ್ತೇನೆ ಹೀಗಿರುವದರಿಂದ ಸಾರ್ವಜನಿಕ ಸವಿನಯ ಕಾನೂನು ಭಂಗವನ್ನು ಪುನಃ ಆರಂಭಿಸುವದಕ್ಕೆ ಮುಂಚೆ ಸತ್ಯಾಗ್ರಹದ ಕಠಿಣಸಾಧನಗಳನ್ನು ಚೆನ್ನಾಗಿ ಅರಿತ, ಅನುಭವದಲ್ಲಿ ನುರಿತ, ಶುದ್ಧಮಾನಸರಾದ ಸ್ವಯಂ ಸೇವಕರ ದಳವೊಂದನ್ನು ನಿರ್ಮಿಸುವದು ಆವಶ್ಯಕ. ಅವರು ಜನರಿಗೆ ಎಲ್ಲಾ ವಿಷಯಗಳನ್ನೂ ವಿವರಿಸಿ ನಿದ್ದೆಯನ್ನು ಕಾಣದೆ ಎಚ್ಚರಿಕೆಯಿಂದ ಜನರು ತಪ್ಪುದಾರಿಗೆ ಬೀಳದಂತೆ ನೋಡಲಾಪರು.

ಈ ವಿಚಾರಗಳು ನನ್ನ ಮನಸ್ಸಿನಲ್ಲಿ ತುಂಬಿರಲು ನಾನು ಮುಂಬಯಿಯನ್ನು ಸೇರಿ ಅಲ್ಲಿನ ಸತ್ಯಾಗ್ರಹ ಸಭೆಯ ಮೂಲಕ ಸತ್ಯಾಗ್ರಹೀ ಸ್ವಯಂ ಸೇವಕರ ದಳವೊಂದನ್ನು ಕೂಡಿಸಿ ಅವರ ಒತ್ತಾಸೆಯಿಂದ ಸತ್ಯಾಗ್ರಹದ ಅರ್ಥವನ್ನೂ ಅದರ ಒಳತಿರುಳನ್ನೂ ಕುರಿತು ಜನರಿಗೆ ಶಿಕ್ಷಣಕೊಡುವ ಕೆಲಸವನ್ನು ಆರಂಭಿಸಿದೆನು. ಇದನ್ನು ಮುಖ್ಯವಾಗಿ ಈ ವಿಚಾರಕ್ಕೆ ಸಂಬಂಧಪಟ್ಟ ವಿಷಯಗಳನ್ನೊಳಗೊಂಡ ಹಸ್ತಪತ್ರಿಕೆಗಳನ್ನು ಹಂಚುವದರ ಮೂಲಕ ಮಾಡಿದೆವು

ಆದರೆ ಈ ಕೆಲಸವು ನಡೆಯುತ್ತಿರುವಾಗ ಜನರಿಗೆ ಸತ್ಯಾಗ್ರಹದ ಶಾಂತಸ್ವರೂಪದಲ್ಲಿ ಕುತೂಹಲವನ್ನು ಹುಟ್ಟಿಸುವದು ಕಷ್ಟವೆಂದು ನನಗೆ ಕಂಡು ಬಂದಿತು. ಸಾಕಾದಷ್ಟು ಮಂದಿ ಸ್ವಯಂಸೇವಕರೂ ಕೂಡಲಿಲ್ಲ. ಮತ್ತು ಹಾಗೆ ಸೇರಿದವರು ಕೂಡ ಕ್ರಮವಾದ ಅಭ್ಯಾಸವನ್ನು ಪಡೆಯಲಿಲ್ಲ. ದಿನಗಳು ಕಳೆಯುತ್ತ ಬಂದಂತೆಲ್ಲಾ ಹೊಸದಾಗಿ ಸೇರುವ ಸ್ವಯಂಸೇವಕರ ಸಂಖ್ಯೆಯು ಹೆಚ್ಚುವದಕ್ಕೆ ಬದಲು ತಗ್ಗುತ್ತಾ ಬಂದಿತು ಸವಿನಯ ಕಾನೂನುಭಂಗದ ಶಿಕ್ಷಣವು ನಾನು ಮೊದಲು ನಿರೀಕ್ಷಿಸಿದಷ್ಟು ತ್ವರೆಯಿಂದ ಸಾಗುವದಿಲ್ಲವೆಂಬುದು ನನಗೆ ಮಂದಟ್ಟಾಯಿತು.

## ೩೫

## ‘ನವಜೀವನ’ ಮತ್ತು ‘ಯಂಗ್ ಇಂಡಿಯಾ’

ಹೀಗೆ ಅಹಿಂಸಾತ್ಮಕವಾದ ಚಳವಳಿಯು ಅತಿ ನಿಧಾನವಾದರೂ ಹೆಜ್ಜೆ ತಪ್ಪದೆ ಒಂದು ಕಡೆ ಹರಡುತ್ತಿರಲು ಮತ್ತೊಂದು ಕಡೆ ಸರಕಾರದ ಅರಾಜಕ ದಂಡನೀತಿಯು ಅತಿ ರಭಸದಿಂದ ಪ್ರವಹಿಸುತ್ತ ಪಂಜಾಬಿನಲ್ಲಿ ಮುಚ್ಚುಮರೆಯಿಲ್ಲದೆ ತನ್ನ ನಿಜಸ್ವರೂಪವನ್ನು ತೋರಿಸಿಕೊಳ್ಳುತ್ತಿದ್ದಿತು. ನಾಯಕರನ್ನು ದಸ್ತಗಿರಿ ಮಾಡಿದರು. ಯುದ್ಧಕಾಲದ ಕಾನೂನು—ಎಂದರೆ ಕಾನೂನಿನ ನಾಸ್ತಿತ್ವವು-ಪ್ರಚಾರಕ್ಕೆ ಬಂದಿತು. ಪ್ರತ್ಯೇಕ ನ್ಯಾಯಸ್ಥಾನಗಳು ಏರ್ಪಟ್ಟುವು ಇವೇನೂ ಧರ್ಮಾಧರ್ಮವನ್ನು ನಿರ್ಣಯಿಸತಕ್ಕ ಸಂಸ್ಥೆಗಳಾಗಿರದೆ ನಿರಂಕುಶನೊಬ್ಬನ ಸ್ವತಂತ್ರ ಮನೋನಿಶ್ಚಯವನ್ನು ನಡೆಸುವ ಆಯುಧಗಳಾಗಿದ್ದುವು ಸಾಕ್ಷ್ಯದ ಬೆಂಬಲವಿಲ್ಲದೆ ಧರ್ಮಕ್ಕೆ ತಿಲಾಂಜಲಿಯನ್ನು ಕೊಟ್ಟು ದಂಡನೆಯನ್ನು ವಿಧಿಸುತ್ತಿದ್ದರು ಅಮೃತಸರದಲ್ಲಿ ನಿರ್ದೋಷಿಗಳಾದ ಗಂಡಸರನ್ನೂ ಹೆಂಗಸರನ್ನೂ ಹುಳಗಳ ಹಾಗೆ ಹೊಟ್ಟೆಯ ಮೇಲೆ ತೆವಳುವಂತೆ ಮಾಡಿದರು ಜಾಲಿಯನ್‌ವಾಲಾಬಾಗಿನ ಹತ್ಯಾಕಾಂಡವೇ ವಿಶೇಷವಾಗಿ ಭರತಖಂಡದ ಮತ್ತು ಇಡೀ ಪ್ರಪಂಚದ ದೃಷ್ಟಿಯನ್ನು ಆಕರ್ಷಿಸಿತಾದರೂ ಅದು ಈ ಕಾರ್ಯಕ್ರಮದ ಮುಂದೆ ನನಗೆ ಅತಿ ಸಾಮಾನ್ಯವಾಗಿ ಕಂಡಿತು.

ನಾನು ಪರಿಣಾಮವನ್ನು ಲೆಕ್ಕಿಸದೆ ಒಡನೆಯೇ ಪಂಜಾಬಿಗೆ ಹೊರಡಬೇಕೆಂದು ನನ್ನನ್ನು ಒತ್ತಾಯಪಡಿಸಿದರು. ಅಲ್ಲಿಗೆ ಹೋಗಲು ನನಗೆ ಅಪ್ಪಣೆಕೊಡಬೇಕೆಂದು ವೈಸ್‌ರಾಯರಿಗೆ ಪತ್ರ ಬರೆದುದಲ್ಲದೆ ತಾರನ್ನೂ ಕಳಿಹಿಸಿದೆನು ಆದರೆ ಅದು ನಿಷ್ಫಲವಾಯಿತು. ಹೀಗೆ ಅಪ್ಪಣೆಯಿಲ್ಲದೆ ಹೊರಟರೆ ಪಂಜಾಬಿನ ಎಲ್ಲೆಯನ್ನು ದಾಟಲು ನನ್ನನ್ನು

ಬಿಡುತ್ತಿರಲಿಲ್ಲ. ಸವಿನಯ ಭಂಗದಿಂದ ಏನು ತೃಪ್ತಿಯುಂಟಾಗುವುದೋ ಅಷ್ಟರಿಂದಲೇ ನಾನು ಸಂತೋಷಪಟ್ಟುಕೊಳ್ಳಬೇಕಾಗಿದ್ದಿತು. ಆದುದರಿಂದ ಮುಂದೇನು ಮಾಡಬೇಕೆಂಬ ಪ್ರಶ್ನೆಯು ನನ್ನನ್ನು ಕಠಿಣವಾದ ಉಭಯಸಂಕಟಕ್ಕೀಡುಮಾಡಿತು. ಅಂದಿನ ಪರಿಸ್ಥಿತಿಯಲ್ಲಿ ಪಂಜಾಬಿನೊಳಗೆ ಕಾಲಿಡಕೂಡದೆಂಬ ಆಜ್ಞೆಯ ಉಲ್ಲಂಘನವು ನನ್ನ ದೃಷ್ಟಿಯಲ್ಲಿ ಸವಿನಯ ಭಂಗವೆನಿಸಿಕೊಳ್ಳುವಂತಿರಲಿಲ್ಲ. ಏಕೆಂದರೆ ನನ್ನ ಸುತ್ತುಮುತ್ತಲೂ ನನಗೆ ಬೇಕಾದಂತಹ ಶಾಂತಿಯ ವಾತಾವರಣವಿರಲಿಲ್ಲ. ಪಂಜಾಬಿನಲ್ಲಿ ಮಿತಿಯಿಲ್ಲದೆ ಪ್ರಯೋಗಿಸಿದ್ದ ದಂಡನೀತಿಯಿಂದ ಜನರ ಕೋಪವು ಇನ್ನೂ ಹೆಚ್ಚಿದ್ದಿತು. ಆದುದರಿಂದ ಅಂತಹ ಕಾಲದಲ್ಲಿ ನಾನು ಸವಿನಯೋಲ್ಲಂಘನನೆಸಗುವದೆಂದರೆ ಉರಿಯುವ ಬೆಂಕಿಗೆ ತುಪ್ಪ ಹೊಯ್ದಂತಾಗುತ್ತಿದ್ದಿತು. ಇದರಿಂದ ನಾನು ಪಂಜಾಬಿಗೆ ಹೋಗುವದಿಲ್ಲವೆಂದು ಮಿತ್ರರ ಸಲಹೆಗೆ ವಿರೋಧವಾಗಿ ನಿರ್ಧರಿಸಿದೆನು. ಈ ನಿರ್ಣಯವನ್ನು ನುಂಗುವದು ನನಗೇನೂ ರುಚಿಕರವಾಗಿರಲಿಲ್ಲ. ದಿನವೂ ಕ್ರೂರ ಅನ್ಯಾಯದ ಮತ್ತು ಪ್ರಜಾಹಿಂಸೆಯ ಸುದ್ದಿಯು ಪಂಜಾಬಿನಿಂದ ಬರುತ್ತಲೇ ಇದ್ದಿತು. ಆದರ ಹಲ್ಲು ಕಡಿಯುತ್ತಾ ಕೈಕಟ್ಟಿಕೊಂಡು ಕುಳಿತಿರುವದಲ್ಲದೆ ಬೇರೆ ಏನನ್ನೂ ನಾನು ಮಾಡುವಂತಿರಲಿಲ್ಲ.

ಅದೇ ಸಮಯದಲ್ಲಿ ಮಿ. ಹಾರ್ನಿಮನರನ್ನು ಸರಕಾರದವರು ಇದ್ದಕ್ಕಿದ್ದ ಹಾಗೆಯೇ ಸಾಗಿಸಿಬಿಟ್ಟರು. 'ಬಾಂಬೇ ಕ್ರಾನಿಕಲ್' ಪತ್ರಿಕೆಯು ಇವರ ಕೈಯಲ್ಲೊಂದು ಅಗಾಧ ಶಕ್ತಿಯಾಗಿ ಪರಿಣಮಿಸಿದ್ದಿತು. ಸರಕಾರದ ಈ ಕಾರ್ಯವು ಅತ್ಯಂತ ದುರ್ನೀತಿಯದೆಂದು ನನಗೆ ತೋರಿತು. ಅದರ ಹೇಯ ಸ್ವರೂಪವನ್ನು ನೆನೆಸಿಕೊಂಡರೆ ಇಂದೂ ನನ್ನ ಮೈ ಜುಮ್ಮೆನ್ನುತ್ತದೆ. ಹಾರ್ನಿಮನರಿಗೆ ಅರಾಜಕತ್ವವು ಎಂದೂ ಬೇಕಾಗಿರಲಿಲ್ಲವೆಂದು ನನಗೆ ಗೊತ್ತು. ಪಂಜಾಬ ಸರಕಾರದ ನಿರೋಧ ನಿರೂಪವನ್ನುಲ್ಲಂಘಿಸಿದುದು ಅವರ ಇಷ್ಟಕ್ಕೆ ಬಂದಿರಲಿಲ್ಲ. ಕಾನೂನಿನ ಸ

ನಯುಭಂಗವನ್ನು ಸದ್ಯಕ್ಕೆ ನಿಲ್ಲಿಸಬೇಕೆಂಬ ನಿರ್ಧಾರವನ್ನು ಅವರು ಸಂಪೂರ್ಣವಾಗಿ ಅನುಮೋದಿಸಿದ್ದರು ನಿರ್ಧಾರವನ್ನು ನಾನು ಪ್ರಕಟಿಸುವದಕ್ಕಿಂತ ಮುಂಚೆಯೇ ಅವರಿಂದ ಅದೇ ತಾತ್ಪರ್ಯವುಳ್ಳ ಪತ್ರವು ಕೂಡ ಬಂದಿದ್ದಿತು. ಮುಂಬಯಿಗೂ ಅಹಮದಾಬಾದಿಗೂ ಮಧ್ಯೆ ದೂರವಿರುವದರಿಂದ ಅವರ ಪತ್ರವು ನಾನು ನನ್ನ ನಿರ್ಧಾರವನ್ನು ಪ್ರಕಟಿಸಿದಮೇಲೆ ಬಂದಿತು. ಆದುದರಿಂದ ಅವರನ್ನು ಇದ್ದಕ್ಕಿದ್ದ ಹಾಗೆಯೇ ಗಡಿಪಾರು ಮಾಡಿದುದರಿಂದ ನನಗೆ ದಃಖವೂ ಆಶ್ಚರ್ಯವೂ ಉಂಟಾಯಿತು.

ಸಂಘಟನೆಗಳ ಫಲವಾಗಿ 'ಬಾಂಬೆ ಕ್ರಾನಿಕಲ್' ಪತ್ರಿಕೆಯ ಮಾಲಿಕರುಗಳು ನಾನು ಆ ಪತ್ರಿಕೆಯನ್ನು ನಿರ್ವಹಿಸುವ ಜವಾಬ್ದಾರಿಯನ್ನು ಹೊತ್ತುಕೊಳ್ಳಬೇಕೆಂದು ನನ್ನನ್ನು ಕೇಳಿದರು ಮಿ. ಬ್ರೆಲ್ವಿಯವರು ಆಗಲೇ ಅದರ ಕಚೇರಿಯಲ್ಲಿದ್ದುದರಿಂದ ನಾನು ಮಾಡಬೇಕಾದುದು ಹೆಚ್ಚಾಗಿ ಏನೂ ಉಳಿದಿರಲಿಲ್ಲ ಆದರೂ ನನ್ನ ಸ್ವಭಾವಕ್ಕನುಸಾರವಾಗಿ ಈ ಜವಾಬ್ದಾರಿಯು ನನ್ನ ಮೇಲೆ ಇನ್ನೊಂದು ಹೊರೆಯಾಗಿ ಪರಿಣಮಿಸುತ್ತಿದ್ದಿತು

ಆದರೆ ನಾನು ಈ ಭಾರವನ್ನು ಹೊರಬೇಕಾಗಲಿಲ್ಲ ಸರಕಾರವು ನನ್ನ ಸಹಾಯಕ್ಕೆ ಬಂದಿತೋ ಎಂಬಂತೆ ತನ್ನ ಕಾರ್ಯಕ್ರಮದಿಂದ 'ಕ್ರಾನಿಕಲ್' ಪತ್ರಿಕೆಯ ಪ್ರಕಟಣೆಯನ್ನು ನಿಲ್ಲಿಸಿತು.

'ಕ್ರಾನಿಕಲ್' ಪತ್ರಿಕೆಯ ಚಲನೆಯನ್ನು ನಿರ್ವಹಿಸುತ್ತಿದ್ದ ಉಮರ್ ಸುಬಾನೀ ಮತ್ತು ಶಂಕರಲಾಲ ಬ್ಯಾಂಕರರ ಕೈಯಲ್ಲಿಯೇ 'ಯಂಗ್ ಇಂಡಿಯಾ' ಪತ್ರಿಕೆಯೂ ಇದ್ದಿತು 'ಕ್ರಾನಿಕಲ್' ಪತ್ರಿಕೆಯನ್ನು ನಿಲ್ಲಿಸಿದ್ದುದರಿಂದ ನಾನು 'ಯಂಗ್ ಇಂಡಿಯಾ'ದ ಸಂಪಾದಕತ್ವವನ್ನು ವಹಿಸಬೇಕೆಂದೂ ನಿಂತು ಹೋದ ಪತ್ರಿಕೆಯ ಸ್ಥಾನವನ್ನು ಸರಿಯಾಗಿ ಪರಿಪೂರ್ಣ ಮಾಡಲು ಈ ಪತ್ರಿಕೆಯು ವಾರಕ್ಕೊಂದು ಬಾರಿ ಹೊರಡುವುದರ ಬದಲು ಎರಡು ಬಾರಿ ಹೊರಡಬೇಕೆಂದೂ ಈ ಮಿತ್ರರು ಸೂಚಿಸಿದರು. ನನಗೆ ತೋರಿದುದ

ಹಾಗೆಯೇ ಸತ್ಯಾಗ್ರಹದೊಳಗಡಗಿರುವ ಅರ್ಥವನ್ನು ಜನರಿಗೆ ವಿಶದ ಪಡಿಸಲು ನಾನು ಆತುರನಾಗಿದ್ದೆನಲ್ಲದೆ ಈ ಪ್ರಯತ್ನದ ಮೂಲಕ ಪಂಜಾಬಿನ ಪರಿಸ್ಥಿತಿಯನ್ನು ಉತ್ತಮಗೊಳಿಸಲಾದರೂ ಆಗಬಹು ದೆಂಬ ಆಸೆಯನ್ನು ನಾನು ಇಟ್ಟುಕೊಂಡಿದ್ದೆನು ಏಕೆಂದರೆ ನಾನು ಬರೆದುದರಲ್ಲೆಲ್ಲಾ ಸತ್ಯಾಗ್ರಹವು ಗರ್ಭಿತವಾಗಿದ್ದಿತು ಸರಕಾರವೂ ಇದನ್ನು ಅರಿತಿದ್ದಿತು ಆದುದರಿಂದ ನಾನು ಈ ಮಿತ್ರರ ಸೂಚನೆಗೆ ಸಿದ್ಧವಾಗಿ ಸಮ್ಮತಿಸಿದೆನು

ಆದರೆ ಇಂಗ್ಲಿಷ್ ಭಾಷೆಯ ಮೂಲಕ ಜನಸಾಮಾನ್ಯವನ್ನೆಲ್ಲಾ ಸತ್ಯಾಗ್ರಹಕ್ಕಾಗಿ ಸಿದ್ಧಗೊಳಿಸುವದೆಂತು ? ನನ್ನ ಮುಖ್ಯಕ್ಷೇತ್ರವು ಗುಜರಾತಿನಲ್ಲಿದ್ದಿತು ಆ ಸಮಯದಲ್ಲಿ ಶ್ರೀ ಇಂದುಲಾಲ ಯಾಜ್ಞಿ ಕರು ಸುಬಾನೀ-ಬ್ಯಾಂಕರರ ಗುಂಪಿನಲ್ಲಿಯೇ ಇದ್ದರು ಅವರು ಗುಜ ರಾತೀ 'ನವಜೀವನ' ಮಾಸಪತ್ರಿಕೆಯನ್ನು ನಡೆಸುತ್ತಿದ್ದರು ಈ ಪತ್ರಿಕೆಗೆ ಈ ಮಿತ್ರರ ಧನಸಹಾಯವಿದ್ದಿತು ಈ ಮಾಸಪತ್ರಿಕೆ ಯನ್ನೂ ನನ್ನ ವಶಕ್ಕೆ ಕೊಟ್ಟರು ಇದಲ್ಲದೆ ಶ್ರೀ ಯಾಜ್ಞಿಕರು ಈ ಪತ್ರಿಕೆಗಾಗಿ ಕೆಲಸಮಾಡುವೆವೆಂದು ಹೇಳಿದರು ಇದನ್ನು ವಾರಪತ್ರಿಕೆಯಾಗಿ ಮಾಡಿದೆವು

ಈ ಮಧ್ಯೆ 'ಕ್ರಾನಿಕಲ್' ಗೆ ಪುನರ್ಜೀವವು ಬಂದಿತು. ಆದು ದರಿಂದ 'ಯಂಗ್ ಇಂಡಿಯಾ' ಪತ್ರಿಕೆಯು ಹಿಂದಿನಂತೆ ವಾರಪತ್ರಿಕೆ ಯಾಯಿತು ಎರಡು ವಾರಪತ್ರಿಕೆಗಳನ್ನು ಬೇರೆ ಬೇರೆ ಸ್ಥಳಗಳಿಂದ ಪ್ರಕಟಿಸುವದೆಂದರೆ ನನಗೆ ಬಹು ಅನಾನುಕೂಲವೂ ಹೆಚ್ಚು ವೆಚ್ಚವೂ ಆಗುತ್ತಿದ್ದಿತು 'ನವಜೀವನ' ವನ್ನು ಆಗಲೇ ಅಹಮದಾಬಾದಿನಿಂದ ಪ್ರಕಟಿಸುತ್ತಿದ್ದುದರಿಂದ ನನ್ನ ಸಲಹೆಯ ಪ್ರಕಾರ 'ಯಂಗ್ ಇಂಡಿಯಾ' ಪತ್ರಿಕೆಯೂ ಅಲ್ಲಿಗೇ ಕೊಂಡೊಯ್ಯಲ್ಪಟ್ಟಿತು

ಈ ಬದಲಾವಣೆಗೆ ಬೇರೆ ಕಾರಣಗಳೂ ಇದ್ದುವು. 'ಇಂಡಿಯನ್ ಒಪಿನಿಯನ್' ಪತ್ರಿಕೆಯ ಸಂಬಂಧವಾಗಿ ನಾನು ಗಳಿಸಿದ್ದ ಅನುಭವದಿಂದ ಇಂತಹ ಪತ್ರಿಕೆಗಳಿಗೆ ಸ್ವತಂತ್ರ ಮುದ್ರಣಾಲಯವಿರುವದು ಅಗತ್ಯವೆಂಬುದು ನನಗೆ ಚೆನ್ನಾಗಿ ಗೊತ್ತಾಗಿದ್ದಿತು. ಮತ್ತು ಅಂದಿನ ಕಾಲದಲ್ಲಿ ವೃತ್ತಪತ್ರಿಕೆಗಳಿಗೆ ಸಂಬಂಧಪಟ್ಟ ಕಾಯಿದೆಗಳು ಕ್ರೂರವಾಗಿದ್ದುದರಿಂದ ನಾನು ನನ್ನ ಅಭಿಮತವನ್ನು ನಿರಾತಂಕವಾಗಿ ವ್ಯಕ್ತಪಡಿಸಬೇಕೆಂದರೆ ಅದನ್ನು ಆಗಿದ್ದ ಮುದ್ರಣಾಲಯಗಳು ಪ್ರಕಟಿಸಲು ಹಿಂತೆಗೆಯುತ್ತಿದ್ದುವು. ಏಕೆಂದರೆ ಅವುಗಳನ್ನು ನಡೆಸುತ್ತಿದ್ದುದು ಆರ್ಥಿಕದೃಷ್ಟಿಯಿಂದ. ಆದುದರಿಂದ ನಮ್ಮದೇ ಒಂದು ಛಾಪಾಖಾನೆಯನ್ನು ಹೂಡುವದು ಅತ್ಯಗತ್ಯವಾಯಿತು. ಹೀಗೆ ಮಾಡಲು ಅಹಮದಾಬಾದಿನಲ್ಲಿ ಮಾತ್ರ ಅನುಕೂಲವಿದ್ದುದರಿಂದ 'ಯಂಗ್ ಇಂಡಿಯಾ' ವನ್ನೂ ಅಲ್ಲಿಗೇ ಸಾಗಿಸಬೇಕಾಯಿತು.

ಈಗ ನಾನು ಈ ಪತ್ರಿಕೆಗಳ ಮೂಲಕ ಅಕ್ಷರಸ್ಥರಾದ ಜನರಿಗೆ ಸತ್ಯಾಗ್ರಹದ ವಿಷಯವಾಗಿ ಶಿಕ್ಷಣಕೊಡುವ ಕೆಲಸವನ್ನು ನನ್ನ ಕೈಲಾದ ಮಟ್ಟಿಗೂ ನಡೆಸತೊಡಗಿದೆನು. ಇವೆರಡೂ ಒಂದು ಕಾಲದಲ್ಲಿ ಅತಿವಿಶಾಲವಾದ ವಾಚಕವರ್ಗವನ್ನು ಸಂಪಾದಿಸುತ್ತಿದ್ದುವು. ಒಂದೊಂದಕ್ಕೂ ಸುಮಾರು ನಲವತ್ತು ಸಹಸ್ರ ಗ್ರಾಹಕರಿದ್ದರು. 'ನವಜೀವನ' ದ ಗ್ರಾಹಕರ ಸಂಖ್ಯೆಯು ಒಮ್ಮೆಯೇ ಏರಿತು. ಆದರೆ 'ಯಂಗ್ ಇಂಡಿಯಾ' ದ ವರ್ಗಣಿದಾರರ ಸಂಖ್ಯೆಯು ನಿಧಾನವಾಗಿ ಹೆಚ್ಚಿತು. ನನಗೆ ಕಾರಾಗೃಹವಾಸವಾದಮೇಲೆ ಇವೆರಡು ಸಂಖ್ಯೆಗಳೂ ಬಹು ಕಡಿಮೆಯಾದವು. ಇಂದು ಇವು ಎಂಟು ಸಾವಿರದೊಳಗಿವೆ.

ಈ ಪತ್ರಿಕೆಗಳಲ್ಲಿ ಜಾಹಿರಾತುಗಳನ್ನು ಪ್ರಕಟಿಸಕೂಡದೆಂದು ನಾನು ಮೊಟ್ಟಮೊದಲಿನಿಂದ ನಿರ್ಧರಮಾಡಿಕೊಂಡೆನು. ಇದರಿಂದ ಅವುಗಳಿಗೆ ಯಾವ ನಷ್ಟವೂ ಆಗಿಲ್ಲವೆಂದು ನಾನು ಎಣಿಸುತ್ತೇನೆ.

ಅಷ್ಟೇ ಅಲ್ಲ, ಇದರಿಂದ ಅವು ತಮ್ಮ ಸ್ವಾತಂತ್ರ್ಯವನ್ನು ಕಾಯ್ದುಕೊಳ್ಳಲು ಬಹು ಸಹಾಯವಾಗಿವೆ ಎಂದೇ ನನ್ನ ಅಭಿಪ್ರಾಯ.

ಮತ್ತು ಈ ಪತ್ರಿಕೆಗಳು ನನ್ನ ಮನಶ್ಶಾಂತಿಸ್ಥಾಪನೆಗೆ ಸಹಾಯವಾದುವು. ಏಕೆಂದರೆ ಒಡನೆಯೇ ಕಾನೂನಿನ ಸವಿನಯಭಂಗವನ್ನು ಮಾಡುವ ಯೋಚನೆಗೆ ಅವಕಾಶವಿಲ್ಲದಿದ್ದರೂ ಇವುಗಳ ಮೂಲಕ ನನ್ನ ಅಭಿಮತವನ್ನು ನಿರಾತಂಕವಾಗಿ ವ್ಯಕ್ತಪಡಿಸಿ ಜನರಿಗೆ ಧೈರ್ಯಗೊಡಲು ನನಗೆ ಸಾಧ್ಯವಾಯಿತು ಹೀಗೆ ಇವೆರಡು ಪತ್ರಿಕೆಗಳೂ ಜನರಿಗೆ ಈ ಸಂಕಟಕಾಲದಲ್ಲಿ ಹೆಚ್ಚು ಸಹಾಯವನ್ನು ಮಾಡಿ ಯುದ್ಧದ ಕಾನೂನಿನ ಅತ್ಯಾಚಾರವನ್ನು ತಗ್ಗಿಸುವ ವಿಷಯದಲ್ಲಿ ಅಳಿಲಸೇವೆಯನ್ನು ಮಾಡಿದುವೆಂದು ನಾನು ಎಣಿಸುತ್ತೇನೆ



೩೭

# ಪಂಜಾಬಿನಲ್ಲಿ

ಅಂತೂ ಸರ್ ಮೈಕೇಲ್ ಓಡ್ವಾಯರರು ಪಂಜಾಬನಲ್ಲಿ ನಡೆದು ದಕ್ಕೆಲ್ಲಾ ನಾನೇ ಜವಾಬ್ದಾರನೆಂದೂ ಕೆಲವರು ಕೋಪೋದ್ದೀಪಿತ ರಾದ ಪಂಜಾಬೀ ಯುವಕರು ಅಲ್ಲಿ ಯುದ್ಧದ ಕಾನೂನಿನ ಪ್ರಚಾರಕ್ಕೆ ನಾನೇ ಕಾರಣನೆಂದೂ ಅಭಿಪ್ರಾಯಪಟ್ಟರು ನಾನು ಸವಿನಯ ಕಾನೂನು ಭಂಗವನ್ನು ಮಾತ್ರ ನಿಲ್ಲಿಸದಿದ್ದರೆ ಜಲಿಯನ್ ವಾಲಾಬಾಗಿನ ಹತ್ಯಾಕಾಂಡವೇ ನಡೆಯುತ್ತಿರಲಿಲ್ಲವೆಂದು ಅವರು ಪ್ರತಿವಾದಿಸಿದರು ಅವರಲ್ಲಿ ಕೆಲವರು ನಾನು ಪಂಜಾಬಿನೊಳಗ ಕಾಲಿಟ್ಟರೆ ನನ್ನನ್ನು ಕೊಂದುಬಿಡುವದಾಗಿ ಕೂಡ ಹದರಿಸಿದರು

ಆದರೆ ನನ್ನ ಎಣಿಕೆಯಲ್ಲಿ ನನ್ನ ಕಾರ್ಯಕ್ರಮವು ಎಷ್ಟು ಸರಿ ಯಾಗಿದ್ದಿತೆಂದರೆ ಯಾವ ವಿವೇಕಸ್ಥನೂ ಅದನ್ನು ತಪ್ಪು ತಿಳಿದುಕೊಳ್ಳು ವಂತಿರಲಿಲ್ಲ

ನಾನು ಪಂಜಾಬಿಗೆ ಹೋಗಲು ಆತುರನಾಗಿದ್ದೆನು ನಾನು ಅಲ್ಲಿಗೆ ಎಂದೂ ಹೋಗಿಲ್ಲದಿದ್ದುದರಿಂದ ಅಲ್ಲಿನ ಪರಿಸ್ಥಿತಿಯನ್ನು ಸಾಕ್ಷಾ ತ್ತಾಗಿ ಅರಿತುಕೊಳ್ಳಲು ನನ್ನ ಔತ್ಸುಕ್ಯವು ದ್ವಿಗುಣವಾಗಿದ್ದಿತು ನಾನು ಪಂಜಾಬಿಗೆ ಬರಬೇಕೆಂದು ಆಹ್ವಾನವಿತ್ತ ಡಾ ಸತ್ಯಪಾಲ್, ಡಾ ಕಿಚಲೂ ಮತ್ತು ಶ್ರೀ ರಾಮಭಜದತ್ತ ಚೌಧರಿ ಇವರು ಆಗ ಬಂದೀಖಾನೆಯಲ್ಲಿದ್ದರು ಆದರೆ ಸರಕಾರದವರಿಗೆ ಇವರನ್ನೂ ಇತರ ಕೈದಿಗಳನ್ನೂ ಬಹುಕಾಲ ನಿರ್ಬಂಧದಲ್ಲಿಡುವ ಧೈರ್ಯವಿಲ್ಲವೆಂದು ನನ್ನ ಮನಸ್ಸಿಗೆ ಸ್ಪಷ್ಟವಾಗಿದ್ದಿತು ನಾನು ಮುಂಬಯಿಯಲ್ಲಿದ್ದಾಗ ಲೆಲ್ಲಾ ಅನೇಕ ಮಂದಿ ಪಂಜಾಬಿಗಳು ಬಂದು ನನ್ನನ್ನು ಕಾಣಾ

ತ್ತಿದ್ದರು ಈ ಸಂದರ್ಭಗಳಲ್ಲಿ ನಾನು ಅವರಿಗೆ ಪ್ರೋತ್ಸಾಹಕ್ಕಾಗಿ ಒಂದೆರಡು ಮಾತನ್ನು ಹೇಳುತ್ತಿದ್ದೆನು ಅದರಿಂದ ಅವರೂ ಎದೆಗೊಳ್ಳುತ್ತಿದ್ದರು ಆಗ ನನಗಿದ್ದ ಆತ್ಮವಿಶ್ವಾಸವು ಇತರರಲ್ಲಿಯೂ ಧೈರ್ಯವನ್ನು ಹುಟ್ಟಿಸುತ್ತಿದ್ದಿತು

ಆದರೆ ನಾನು ಪಂಜಾಬಿಗೆ ಹೋಗುವದನ್ನು ಅನೇಕ ಬಾರಿ ಮುಂದಕ್ಕೆ ಹಾಕಬೇಕಾಯಿತು ನಾನು ಕೇಳಿದಾಗಲೆಲ್ಲಾ ವೈಸ್‌ರಾಯರು 'ಇನ್ನೂ ಬೇಡ' ವೆಂದು ಹೇಳಿಬರುತ್ತಿದ್ದರು ಹೀಗೆಯೇ ಪ್ರಯಾಣವು ನಿಂತುಹೋಗುತ್ತಿದ್ದಿತು

ಈ ಮಧ್ಯೆ ಯುದ್ಧದ ಕಾನೂನಿನ ಸಂಬಂಧವಾಗಿ ಪಂಜಾಬ್ ಸರಕಾರದ ಕಾರ್ಯಕಾರ್ಯಗಳನ್ನು ವಿಮರ್ಶಿಸಲು ಹಂಟರ್ ಸಮಿತಿಯು ಏರ್ಪಟ್ಟಿರುವದು ಪ್ರಕಟವಾಯಿತು ಮಿ ಸಿ ಎಫ್ ಆಂಡ್ರೂಸರೂ ಈ ಹೊತ್ತಿಗೆ ಅಲ್ಲಿಗೆ (ಪಂಜಾಬಿಗೆ) ಹೋಗಿ ತಲಪಿದ್ದರು ಅವರ ಪತ್ರಗಳಲ್ಲಿ ಪಂಜಾಬಿನ ಪರಿಸ್ಥಿತಿಯ ಹೃದಯವಿದ್ರಾವಕ ವರ್ಣನಗಳಿರುತ್ತಿದ್ದುವು ಅವುಗಳನ್ನು ಓದಿದಾಗ ಯುದ್ಧದ ಕಾನೂನಿನ ಅತ್ಯಾಚಾರಗಳು ವೃತ್ತಪತ್ರಿಕೆಗಳಲ್ಲಿ ಬರುತ್ತಿದ್ದ ವಿವರಗಳಿಗಿಂತ ವಾಸ್ತವಿಕವಾಗಿ ಇನ್ನೂ ಕೇಡಾಗಿದ್ದುವೆಂದು ನನಗೆ ತೋರಿತು ನಾನು ತತ್‌ಕ್ಷಣವೇ ಹೋಗಿ ತಮ್ಮನ್ನು ಸೇರಬೇಕೆಂದು ಅವರು ಆಗ್ರಹಪೂರ್ವಕವಾಗಿ ಪತ್ರಬರೆದರು ಅದೇ ಸಮಯದಲ್ಲಿ ಪಂ. ಮಾಲವೀಯರು ಕೂಡ ನಾನು ಪಂಜಾಬಿಗೆ ಒಡನೆಯೇ ತೆರಳಬೇಕೆಂದು ತಾರುಗಳನ್ನು ಕಳಿಸಿದರು ನಾನು ಈಗ ಪಂಜಾಬಿಗೆ ಹೋಗಬಹುದೋ ಎಂದು ವೈಸ್‌ರಾಯರಿಗೆ ಪುನಃ ತಂತಿ ಕಳುಹಿಸು ಒಂದು ಕ್ಲಿಪ್ತವಾದ ತಾರೀಖಾದ ಮೇಲೆ ನಾನು ಅಲ್ಲಿಗೆ ಹೋಗಬಹುದೆಂದು ಅವರು ಉತ್ತರವಿತ್ತರು ಅದು ಯಾವ ತಾರೀಖೆಂದು ನನಗೆ ಸರಿಯಾಗಿ ನೆನಪಿಲ್ಲ ಆದರೆ ಅದು ಅಕ್ಟೋಬರ್ ಹದಿನೇಳು ಎಂದು ತೋರುತ್ತದೆ.

ನಾನು ಲಾಹೋರನ್ನು ತಲುಪಿದಾಗ ಅಲ್ಲಿ ನನ್ನ ಕಣ್ಣಿಗೆ ಬಿದ್ದ ದೃಶ್ಯವನ್ನು ನಾನೆಂದಿಗೂ ಮರೆಯಲಾರೆನು. ರೈಲ್ವೇ ನಿಲ್ದಾಣವೆಲ್ಲಾ ಮೊದಲಿನಿಂದ ಕೊನೆಯವರೆಗೆ ಜನಸಂದಣಿಯಿಂದ ಕಿಕ್ಕಿರಿದಿದ್ದಿತು ಊರಿನಜನರೆಲ್ಲಾ ಬಹುಕಾಲ ಅಗಲಿದ ಆಪ್ತಬಂಧುವನ್ನು ಇದಿರುಗೊಳ್ಳಲೋ ಎಂಬಂತೆ ಅಲ್ಲಿಗೆ ಬಂದು ಅತ್ಯಾತುರದಿಂದ ಇದಿರುನೋಡುತ್ತಾ ಆನಂದದಲ್ಲಿ ಮೈಮರೆತಿದ್ದರು ನಾನು ಪಂಡಿತ ರಾಮಭಜದತ್ತ ಚೌಧರಿಯವರ ಬಂಗಲೆಯಲ್ಲಿ ಇಳಿದೆನು ನನ್ನನ್ನು ಉಪಚರಿಸುವ ಭಾರವು ಶ್ರೀಮತೀ ಸರಲಾದೇವೀ ಚೌಧರಾಣಿಯವರ ಮೇಲೆ ಬಿದ್ದಿತು ಅದು ನಿಜವಾಗಿಯೂ ಭಾರವೆಂದೇ ಹೇಳಬೇಕು ಏಕೆಂದರೆ ಇಂದಿನಂತೆ ಅಂದು ಕೂಡ ನಾನಿಳಿಯುತ್ತಿದ್ದ ಸ್ಥಳವು ಅನ್ನಸತ್ರವಾಗಿ ಪರಿಣಮಿಸುತ್ತಿದ್ದಿತು

ಪಂಜಾಬಿನ ಮುಖ್ಯ ನಾಯಕರೆಲ್ಲಾ ಕಾರಾಗೃಹದಲ್ಲಿದ್ದುದರಿಂದ ಅವರ ಸ್ಥಾನದಲ್ಲಿ, ಯುಕ್ತವಾಗಿಯೇ, ಪಂಡಿತ ಮಾಲವೀಯರೂ ಪಂಡಿತ ಮೋತೀಲಾಲರೂ ದಿವಂ ಸ್ವಾಮಿ ಶ್ರದ್ಧಾನಂದರೂ ಇರುವದನ್ನು ನಾನು ಕಂಡೆನು ನನಗೆ ಇದಕ್ಕೆ ಮುಂಚೆಯೇ ಮಾಲವೀಯರ ಹಾಗೂ ಶ್ರದ್ಧಾನಂದರ ಗಾಢಪರಿಚಯವಿದ್ದಿತು. ಆದರೆ ಮೋತೀಲಾಲರೊಡನೆ ನಿಕಟಸಂಪರ್ಕವುಂಟಾದುದು ಇದೇ ಮೊದಲು ಈ ನಾಯಕರೂ ಮತ್ತು ಸೆರೆಮನೆಗೆ ಹೋಗುವ ಸನ್ಮಾನಕ್ಕೆ ಇನ್ನೂ ಪಾತ್ರರಾಗಿಲ್ಲದಿದ್ದ ಸ್ಥಳೀಯ ಮುಂದಾಳುಗಳೂ ನನ್ನನ್ನು ತಮ್ಮವನಂತೆ ಕಂಡರು ನನಗೆ ಒಂದು ಕ್ಷಣವೂ ವಿದೇದಲ್ಲಿದ್ದಂತೆ ತೋರಲಿಲ್ಲ

ಹಂಟರ್ ಸಮಿತಿಯ ಮುಂದೆ ಸಾಕ್ಷ್ಯವನ್ನು ಕೊಡಬಾರದೆಂದು ನಾವೆಲ್ಲರೂ ಏಕಮತದಿಂದ ನಿರ್ಧರಿಸಿದುದೆಂತೆಂಬುದು ಈಗ ಐತಿಹಾಸಿಕವಿಷಯವಾಗಿದೆ. ಅದರ ಕಾರಣಗಳು ಆಗಲೇ ಪ್ರಕಟಿಸಲ್ಪಟ್ಟುವು. ಅವುಗಳನ್ನು ಪುನಃ ತಿಳಿಸಬೇಕಾದುದಿಲ್ಲ. ಇಷ್ಟು

ಹೇಳಿದರೆ ಸಾಕು ಇಷ್ಟು ಕಾಲವಾದ ಮೇಲೆ ಆ ಸಂಗತಿಯನ್ನು ಪರಿಶೀಲಿಸಿದರೆ ಸಮಿತಿಗೆ ಬಹಿಷ್ಕಾರಹಾಕಬೇಕೆಂದು ನಾವು ಮಾಡಿದ ನಿರ್ಣಯವೂ ಅದರ ಕಾರಣಗಳೂ ಕೇವಲ ಯುಕ್ತವಾದುವೆಂದು ನನಗೆ ಈಗಲೂ ತೋರುತ್ತದೆ

ಹಂಟರ್ ಸಮಿತಿಯ ಬಹಿಷ್ಕಾರದ ಅಗತ್ಯ ಫಲವಾಗಿ ರಾಷ್ಟ್ರ ಮಹಾ ಸಭೆಯ ಪರವಾಗಿ ಅದೇ ವಿಷಯದಲ್ಲಿ ವಿಚಾರಣೆಯನ್ನು ನಡೆಸಲು ಖಾಸಗೀ ಜನರ ಸಮಿತಿಯೊಂದನ್ನು ಏರ್ಪಡಿಸಬೇಕೆಂದು ನಿರ್ಧಾರವಾಯಿತು ಪಂಡಿತ ಮೋತೀಲಾಲ ನೆಹರೂ, ದಿವಂ ದೇಶ ಬಂಧು ಚಿತ್ತರಂಜನ ದಾಸ್, ಶ್ರೀ ಎಂ ಆರ್ ಜಯಕರ್, ಶ್ರೀ ಅಬ್ಬಾಸ್ ತಯ್ಯಬ್‌ಜೀ ಮತ್ತು ನಾನು ಇಷ್ಟು ಜನ ಈ ಸಮಿತಿಯ ಸದಸ್ಯರಾಗಿ ನೇಮಿಸಲ್ಪಟ್ಟೆವು ಪಂಡಿತ ಮಾಲವೀಯರೇ ನೇಮಿಸಿದರೆಂದು ಹೇಳಬೇಕು ವಿಮರ್ಶೆಗಾಗಿ ನಾವು ಒಬ್ಬೊಬ್ಬರು ಬೇರೆ ಬೇರೆ ಕಡೆಗೆ ಹೋದೆವು ಸಮಿತಿಯ ಕಾರ್ಯಕ್ರಮವನ್ನು ಗೊತ್ತುಮಾಡುವ ಜವಾಬ್ದಾರಿಯು ನನ್ನ ಪಾಲಿಗೆ ಬಿದ್ದಿತು. ಮತ್ತು ಇತರರಿಗಿಂತ ಹೆಚ್ಚು ಸ್ಥಳಗಳಲ್ಲಿ ವಿಮರ್ಶೆಮಾಡುವ ಭಾಗ್ಯವು ನನಗೆ ಒದಗಿದುದರಿಂದ ಪಂಜಾಬಿನ ಜನರನ್ನೂ ಹಳ್ಳಿಗಳನ್ನೂ ಸೂಕ್ಷ್ಮವಾಗಿ ಪರಿಚಯಮಾಡಿಕೊಳ್ಳಲು ನನಗೆ ಅಪೂರ್ವ ಅವಕಾಶವು ದೊರಕಿತು.

ವಿಮರ್ಶೆಮಾಡುವಾಗ ನಾನು ಪಂಜಾಬಿನ ಮಹಿಳೆಯರ ಪರಿಚಯವನ್ನೂ ಹೊಂದಿದೆನು ನಾವು ಒಬ್ಬರನ್ನೊಬ್ಬರು ಯುಗಾಂತರದಿಂದ ಬಲ್ಲೆವೋ ಎಂಬಂತೆ ತೋರುತ್ತಿದ್ದಿತು ನಾನು ಹೋದೆಡೆಯಲ್ಲೆಲ್ಲಾ ಅವರು ಗುಂಪುಕಟ್ಟಿಕೊಂಡು ಬಂದು ತಾವು ತಂದಿದ್ದ ನೂಲಿನ ಕಟ್ಟುಗಳನ್ನು ನನ್ನ ಮುಂದಿಡುತ್ತಿದ್ದರು ಹೀಗೆ ವಿಮರ್ಶೆಗೆ ಸಂಬಂಧಪಟ್ಟ ನನ್ನ ಕಾರ್ಯವು ಪಂಜಾಬ್ ಪ್ರಾಂತವು ದೊಡ್ಡ ಖಾದೀ ಕ್ಷೇತ್ರವಾಗಬಹುದೆಂಬುದನ್ನು ನನಗೆ ಮನವರಿಕೆ ಮಾಡಿಕೊಟ್ಟಿತು.

ಜನರ ಮೇಲೆ ನಡೆದ ಅತ್ಯಾಚಾರದ ವಿಷಯವಾಗಿ ನನ್ನ ವಿಮರ್ಶೆಯಲ್ಲಿ ನಾನು ಮುಂದುವರಿದಂತೆಲ್ಲ ಸರಕಾರದ ನಿರಂಕುಶತೆಯ ಮತ್ತು ಅಧಿಕಾರಿಗಳ ಸ್ವೇಚ್ಛಾಪ್ರವರ್ತನೆಯ ಕತೆಗಳು ನನ್ನ ಕಿವಿಗೆ ಬಿದ್ದುವು ಇವು ಎಷ್ಟು ಹೇಯವಾಗಿದ್ದುವೆಂದರೆ ನಾನು ಇಂತಹ ಕೃತ್ಯಗಳು ನಡೆದಿವೆಯೆಂದು ನಿರೀಕ್ಷಿಸಿಯೇ ಇರಲಿಲ್ಲ ಇದನ್ನೆಲ್ಲಾ ಕೇಳಿ ನನಗೆ ಬಹು ಮನೋವ್ಯಥೆಯುಂಟಾಯಿತು ಆಗ ನನಗೆ ಆಶ್ಚರ್ಯವನ್ನುಂಟುಮಾಡಿದುದೇನೆಂದರೆ, ಯುದ್ಧಕಾಲದಲ್ಲಿ ಬ್ರಿಟಿಷ್ ಸರಕಾರಕ್ಕೆ ಮಿಕ್ಕ ಪ್ರಾಂತಗಳಿಗಿಂತ ಹೆಚ್ಚಾಗಿ ಯೋಧರನ್ನು ಒದಗಿಸಿಕೊಟ್ಟ ಈ ಪ್ರಾಂತವು ಇಂತಹ ಪಾಶವಿಕ ಅತ್ಯಾಚಾರಗಳನ್ನು ಹೇಗೆ ಕೈಕಟ್ಟಿಕೊಂಡು ಸಹಿಸಿದುದು ಈ ವಿಷಯವು ಈಗಲೂ ನನಗೆ ವಿಸ್ಮಯವನ್ನುಂಟುಮಾಡುತ್ತದೆ

ಈ ಸಮಿತಿಯ ವರದಿಯನ್ನು ಬರೆಯುವ ಕೆಲಸವು ಕೂಡ ನನ್ನ ಪಾಲಿಗೆ ಬಿದ್ದಿತು ಪಂಜಾಬಿನ ಜನರ ಮೇಲೆ ನಡೆಸಿದ ಅತ್ಯಾಚಾರಗಳೆಂತಹವೆಂಬುದನ್ನು ಅರಿಯಬಯಸುವವರು ಈ ವರದಿಯನ್ನೋದಬೇಕೆಂದು ನನ್ನ ಸೂಚನೆ ನಾನು ಇಲ್ಲಿ ಹೇಳಬಯಸುವುದಿಷ್ಟೆ ಅದರಲ್ಲಿ ಎಲ್ಲಿಯೂ ಎಂದಾದರೂ ತಿಳಿದು ತಿಳಿದೂ ಬರೆದ ಅತಿಶಯೋಕ್ತಿಯಿಲ್ಲ, ಅದರಲ್ಲಿರುವ ಪ್ರತಿಯೊಂದು ವಿಷಯವೂ ಸಾಕ್ಷ್ಯದ ಆಧಾರವನ್ನು ಪಡೆದಿದೆ ಮತ್ತು ಪ್ರಕಟವಾದ ಸಾಕ್ಷ್ಯವು ಸಮಿತಿಯ ವಶದಲ್ಲಿದ್ದ ಸಾಕ್ಷ್ಯದ ಅತ್ಯಲ್ಪಭಾಗ ಲೇಶಮಾತ್ರ ಸಂಶಯಕ್ಕೆಡೆಕೊಟ್ಟ ವಿಷಯವೊಂದಕ್ಕೂ ವರದಿಯೊಳಗೆ ಸ್ಥಳ ಕೊಡಲಿಲ್ಲ ಸತ್ಯಾಂಶವನ್ನು ಮಾತ್ರ ಹೊರಗೆಡಹಬೇಕೆಂಬ ಒಂದೇ ಒಂದು ಉದ್ದೇಶದಿಂದ ಸಿದ್ಧಮಾಡಲ್ಪಟ್ಟ ಈ ವರದಿಯನ್ನು ಓದಿದರೆ ಬ್ರಿಟಿಷ್ ಸರಕಾರವು ತನ್ನ ಪ್ರಾಬಲ್ಯವನ್ನುಳಿಸಲೋಸುಗ ಎಷ್ಟು ದೂರ ಹೋಗಬಲ್ಲುದು, ಎಂತೆಂತಹ ಅತ್ಯಾಚಾರಗಳನ್ನೂ ಅಮಾನುಷಕೃತ್ಯಗಳನ್ನೂ ಎಸಗಬಲ್ಲದು ಎಂಬುದು ಸ್ಪಷ್ಟವಾಗುತ್ತದೆ. ನನಗೆ ಗೊತ್ತಿರುವ ಮಟ್ಟಿಗೆ ಈ ವರದಿಯಲ್ಲಿ ಒಂದು ವಾಕ್ಯವು ಕೂಡ ಅಸತ್ಯವೆಂದು ಇದುವರೆಗೂ ಯಾರೂ ತೋರಿಸಿಲ್ಲ.

*

# ೩೭

# ಖಿಲಾಫತ್ತಿಗೆ ಪ್ರತಿಯಾಗಿ ಗೋರಕ್ಷಣೆಯೋ?

ಸದ್ಯಕ್ಕೆ ನಾವು ಪಂಜಾಬಿನ ಈ ದುರ್ಘಟನೆಗಳ ವಿಷಯವನ್ನು ನಿಲ್ಲಿಸಬೇಕು.

ಪಂಜಾಬಿನಲ್ಲಿ ನಡೆದ 'ಡೈಯರ್-ಗಿರಿ'ಯ ವಿಷಯವಾಗಿ ಮಹಾಸಭೆಯ ಸಮಿತಿಯ ವಿಚಾರಣೆಯು ಪ್ರಾರಂಭವಾಯಿತು. ಅಷ್ಟರಲ್ಲಿಯೇ ಖಿಲಾಫತ್ ಪ್ರಶ್ನೆಯನ್ನು ಕುರಿತು ಆಲೋಚಿಸಲೋಸುಗ ದಿಲ್ಲಿಯಲ್ಲಿ ಸೇರಲಿದ್ದ ಹಿಂದೂಮುಸಲ್ಮಾನರ ಉಭಯ ಸಮ್ಮೇಳನಕ್ಕೆ ಬರಬೇಕೆಂದು ಅನೇಕರಿಗೆ ಕಳಿಸಿದ್ದ ಆಹ್ವಾನಪತ್ರವು ನನಗೂ ಬಂದಿತು. ಅದಕ್ಕೆ ರುಜು ಮಾಡಿದವರಲ್ಲಿ ದಿವಂಗತ ಹಕೀಮ್ ಅಜಮಲ್‌ಖಾನ್ ಸಾಹೇಬರೂ ಮಿ. ಆಸಫ್ ಅಲಿಯವರೂ ಇದ್ದರು. ದಿವಂಗತ ಸ್ವಾಮಿ ಶ್ರದ್ಧಾನಂದರು ಸಮ್ಮೇಳನಕ್ಕೆ ಬರುವರೆಂದು ಆ ಪತ್ರದಲ್ಲಿದ್ದಿತು. ನನಗೆ ನೆನಪಿರುವ ಮಟ್ಟಿಗೆ ಸಮ್ಮೇಳನವು ಆ ವರ್ಷದ ನವೆಂಬರ್ ತಿಂಗಳಲ್ಲಿ ಕೂಡುವದಿದ್ದಿತು. ಸ್ವಾಮಿ ಶ್ರದ್ಧಾನಂದರು ಅದರ ಉಪಾಧ್ಯಕ್ಷರಾಗಿರಬೇಕೆಂಬ ಯೋಜನೆಯಿದ್ದಿತೆಂದು ನನಗೆ ಜ್ಞಾಪಕವಿದೆ. ಆ ಪತ್ರದಲ್ಲಿ ಪ್ರಸ್ತಾಪಿತವಾದ ಅನೇಕ ಸಂಗತಿಗಳಲ್ಲಿ ಆ ಸಮ್ಮೇಳನವು ಖಿಲಾಫತ್ ದ್ರೋಹದ ಪ್ರಶ್ನೆಯೊಂದನ್ನೇ ಅಲ್ಲದೆ ಗೋಸಂರಕ್ಷಣದ ಪ್ರಶ್ನೆಯನ್ನೂ ಚರ್ಚಿಸುವದೆಂದೂ ಆದುದರಿಂದ ಆ ಸಮಸ್ಯೆಯನ್ನು ಪೂರಣಮಾಡಲು ಆಗ ಅಪೂರ್ವ ಸನ್ನಿವೇಶವು ದೊರೆಯುವದೆಂದೂ ಇದ್ದಿತು. ಈ ರೀತಿಯಾಗಿ ಗೋರಕ್ಷಣೆಯ ಪ್ರಶ್ನೆಯನ್ನು ಪ್ರಸ್ತಾಪಿಸುವದು ನನ್ನ ಒಪ್ಪಿಗೆಗೆ ಬರಲಿಲ್ಲ. ಆದುದರಿಂದ ಆಹ್ವಾನಪತ್ರಕ್ಕೆ ಉತ್ತರವಾಗಿ ಬರೆದ ಕಾಗದದಲ್ಲಿ ನಾನು ಸಮ್ಮೇಳನಕ್ಕೆ ಬರಲು ಸರ್ವಪ್ರಯತ್ನ ಮಾಡುವೆನೆಂದೂ ಅವರಡು

ಪ್ರಶ್ನೆಗಳನ್ನೂ ಒಟ್ಟುಗೂಡಿಸಿ ಅವುಗಳನ್ನು ಉಪಕಾರಪ್ರತ್ಯುಪ ಕಾರಗಳೆಂಬ ದೃಷ್ಟಿಯಿಂದ ನೋಡಕೂಡದೆಂದೂ ಅವುಗಳನ್ನು ಪ್ರತ್ಯೇಕವಾಗಿ ಗಮನಿಸಿ ಪ್ರತಿಯೊಂದನ್ನೂ ಅದರ ಗುಣದೋಷ ಗಳಿಗನುಸಾರವಾಗಿ ನಿರ್ಧರಿಸಬೇಕೆಂದೂ ಸೂಚಿಸಿ ಬರೆದೆನು

ಹೀಗೆ ಆಲೋಚಿಸುತ್ತಾ ನಾನು ಸಮ್ಮೇಳನಕ್ಕೆ ಹೋದೆನು ಅದಾದಮೇಲೆ ನಡೆದ ಕೂಟಗಳಂತೆ ಇದರಲ್ಲಿ ಹತ್ತಿಪ್ಪತ್ತು ಸಹಸ್ರ ಜನರು ನೆರೆದಿರಲಿಲ್ಲವಾದರೂ ಇದರ ಜನಸಂಖ್ಯೆಯು ಹೆಚ್ಚಾಗಿ ದ್ದಿತೆಂದೇ ಹೇಳಬೇಕು ಮೇಲೆ ಹೇಳಿದ ಪ್ರಶ್ನೆಯನ್ನು ನಾನು ಅಲ್ಲಿಗೆ ಬಂದಿದ್ದ ಸ್ವಾಮಿ ಶ್ರದ್ಧಾನಂದರೊಡನೆ ಚರ್ಚಿಸಿದೆನು ನಾನು ವಾದಿಸಿದುದು ಅವರ ಒಪ್ಪಿಗೆಗೆ ಬಂದಿತು ಅದನ್ನು ಸಮ್ಮೇಳನದ ಗಮನಕ್ಕೆ ತರುವ ಭಾರವನ್ನು ಅವರು ನನಗೇ ಬಿಟ್ಟರು ಹಾಗೆಯೇ ನಾನು ಈ ಪ್ರಶ್ನೆಗಳನ್ನು ಹಕೀಮ್ ಸಾಹೇ ಬರೊಡನೆಯೂ ಪ್ರಸ್ತಾಪಿಸಿದೆನು ''ಖಿಲಾಫತ್' ಚಳವಳಿಗೆ ನ್ಯಾಯದ ಮತ್ತು ಧರ್ಮದ ಆಧಾರವಿದ್ದರೆ, (ಅಂತಹ ಆಧಾರ ವಿದ್ದಿತೆಂದೇ ನನ್ನ ನಂಬಿಕೆ) ಸರಕಾರವು ಕೇವಲ ಅನ್ಯಾ ಯವನ್ನು ಆಚರಿಸದಿದ್ದರೆ, ಮುಸಲ್ಮಾನರು ಖಿಲಾಫತ್ ಸಂಬಂಧವಾಗಿ ಹೋರಾಡುವದರಲ್ಲಿ ಹಿಂದುಗಳು ಅವರಿಗೆ ನೆರ ವೀಯಬೇಕು ಗೋಸಂರಕ್ಷಣೆಯ ಪ್ರಶ್ನೆಯನ್ನೆತ್ತುವದಾಗಲಿ ಅಥವಾ ಈ ಸಂದರ್ಭವನ್ನು ಮುಸಲ್ಮಾನರೊಡನೆ ಕರಾರು ಮಾಡಿಕೊಳ್ಳಲು ಉಪಯೋಗಿಸುವದಾಗಲಿ ಉಚಿತವಲ್ಲ ಹಾಗೆಯೇ ಮುಸಲ್ಮಾನರು ಕೂಡ ಖಿಲಾಫತ್ ಸಂಬಂಧವಾಗಿ ಹಿಂದುಗಳ ಬೆಂಬಲವನ್ನು ಪಡೆಯಲೋಸುಗ ಗೋಹತ್ಯವನ್ನು ನಿಲ್ಲಿಸುವದಕ್ಕೆ ಒಪ್ಪುವದೂ ಯೋಗ್ಯವಲ್ಲ ಆದರೆ ಮುಸಲ್ಮಾ ನರು ತಮ್ಮ ಸ್ವಂತ ಇಚ್ಛೆಯಿಂದ ಹಿಂದುಗಳ ಧಾರ್ಮಿಕ ಮನೋ ಭಾವವನ್ನು ಆದರಿಸಿ ಅವರು ತಮ್ಮ ನೆರೆಹೊರೆಯವರೆಂದೂ ಒಂದೇ ತಾಯಿನಾಡಿನ ಮಕ್ಕಳೆಂದೂ ಎಣಿಸಿ ಕರ್ತವ್ಯದ ದೃಷ್ಟಿಯಿಂದ ಗೋವಧೆಯನ್ನು ನಿಲ್ಲಿಸಿದರೆ ಅದು ಅತ್ಯಂತ ಯೋಗ್ಯವಾಗಿದ್ದು ಅವ

ರಿಗೆ ಬೂಷಣಪ್ರಾಯವಾಗಿರುವದು ಅದೇ ಬೇರೆ ವಿಚಾರವಾಗ ವದು ಹಾಗೆ ಸ್ವತಂತ್ರ ದೃಷ್ಟಿಯಿಂದ ನೋಡುವದೇ ಅವರ ಕರ್ತವ್ಯ ಆದರಿಂದ ಅವರ ನಡತೆಯ ಗಾಂಭೀರ್ಯವು ಇಮ್ಮಡಿ ಯಾಗುವುದು ಆದರೆ ಮುಸಲ್ಮಾನರು ನೆರೆಹೊರೆಯವರನ್ನು ಕುರಿತು ತಮ್ಮ ಕರ್ತವ್ಯವೇನೆಂಬ ದೃಷ್ಟಿಯಿಂದ ಗೋವಧ ಯನ್ನು ನಿಲ್ಲಿಸಬೇಕೆಂದೆಣಿಸಿದರ ಹಿಂದುಗಳು ಖಿಲಾಫತ್ ವಿಷಯ ದಲ್ಲಿ ತಮಗೆ ಸಹಾಯ ಮಾಡಲಿ ಮಾಡದಿರಲಿ ತಾವು ಗೋವಧ ಯನ್ನು ನಿಲ್ಲಿಸಬೇಕು ಆದುದರಿಂದ ಇವೆರಡು ವಿಷಯಗಳನ್ನು ಪ್ರತ್ಯೇಕವಾಗಿ ಚರ್ಚಿಸಬೇಕು ಈ ಸಮ್ಮೇಳನದ ಕಾರ್ಯಕಲಾ ಪಗಳು ಖಿಲಾಫತ್ ಪ್ರಶ್ನೆಗೆ ಮಾತ್ರ ಸಂಬಂಧಪಟ್ಟಿರಬೇಕು " ಎಂದು ನಾನು ಸಮ್ಮೇಳನದಲ್ಲಿ ವಾದಿಸಿದೆನು ಈ ವಾದವು ಅಲ್ಲಿದ್ದವರ ಮನಸ್ಸನ್ನು ಹಿಡಿಯಿತು ಇದರ ಫಲವಾಗಿ ಗೋರ ಕ್ಷಣೆಯ ವಿಷಯದಲ್ಲಿ ಆಗ ಚರ್ಚೆಯಾಗಲಿಲ್ಲ

ಆದರೆ ನಾನು ಹೀಗೆ ಎಚ್ಚರಿಕೆ ಕೊಟ್ಟರೂ ಮೌಲಾನಾ ಅಬ್ದುಲ್ ಬಾರಿ ಸಾಹೇಬರು "ಹಿಂದುಗಳು ನಮಗ ಸಹಾಯ ಮಾಡಲಿ ಮಾಡದಿರಲಿ ಮುಸಲ್ಮಾನರು ತಾವು ಹಿಂದುಗಳ ದೇಶ ಬಾಂಧವರೆಂಬ ಭಾವದಿಂದ ಹಿಂದುಗಳ ಮನೋವೃತ್ತಿಯನ್ನು ಆದ ರಿಸಿ ಗೋವಧಯನ್ನು ನಿಲ್ಲಿಸಬೇಕು " ಎಂದು ಹೇಳಿದರು ಮತ್ತು ಒಂದು ಕಾಲದಲ್ಲಿ ಮುಸಲ್ಮಾನರು ಅದನ್ನು ನಿಲ್ಲಿಸಿಯೇ ಬಿಡುವರನ್ನುವ ಮಟ್ಟಿಗೆ ತೋರುತ್ತಿದ್ದಿತು

ಖಿಲಾಫತ್ ಪ್ರಶ್ನೆಯೊಂದಿಗೆ ಪಂಜಾಬ್ ಅತ್ಯಾಚಾರದ ಪ್ರಶ್ನೆ ಯನ್ನೂ ಸೇರಿಸಬೇಕೆಂದು ಕೆಲವರು ಸೂಚಿಸಿದರು. ನಾನು ಇದನ್ನು ವಿರೋಧಿಸಿದೆನು. ಪಂಜಾಬ್ ಪ್ರಶ್ನೆಯು ಕೇವಲ ಪ್ರಾಂತಿಕ ವಿಷಯವೆಂದೂ ಯುದ್ಧಸಮಾಪ್ತಿಯ ಉತ್ಸವಗಳಲ್ಲಿ ನಾವು ಭಾಗಿಗಳಾಗಬೇಕೆ ಇಲ್ಲವ ಎಂಬುದನ್ನು ನಿರ್ಧರಿಸುವದರಲ್ಲಿ ಅದಕ್ಕೆ ಸ್ಥಾನ ಕೊಡಲಾಗದೆಂದೂ ಸಂಧಿಯ ಷರತ್ತುಗಳಿಂದಲೇ

ಉದಿಸಿದ ಖಿಲಾಫತ್ ಪ್ರಶ್ನೆಯೊಡನೆ ಸ್ವಕೀಯ ಸಮಸ್ಯೆಯನ್ನು ಕಲೆಸಿದರೆ ದೊಡ್ಡ ಅವಿವೇಕವಾಗುವುದೆಂದೂ ನಾನು ವಾದಿಸಿದೆನು. ನನ್ನ ತರ್ಕವು ಎಲ್ಲರ ಮನಸ್ಸನ್ನೂ ತಟ್ಟಿತು.

ಮೌಲಾನಾ ಹಜರತ್ ಮೋಹಾನಿಯವರು ಈ ಸಭೆಗೆ ಬಂದಿದ್ದರು. ಇದಕ್ಕಿಂತ ಮುಂಚೆ ನನಗೆ ಅವರ ಪರಿಚಯವಿದ್ದಿತು. ಆದರೆ ಅವರು ಎಂತಹ ಯೋಧರೆಂಬುದು ನನಗೆ ಈಗಲೇ ಗೊತ್ತಾದುದು. ಮೊಟ್ಟಮೊದಲಿನಿಂದಲೇ ನಾವು ಅನೇಕ ವಿಷಯಗಳಲ್ಲಿ ಭಿನ್ನಮತವುಳ್ಳವರಾಗಿದ್ದೇವೆ. ಕಲವು ವಿಷಯಗಳಲ್ಲಿ ಈ ಭಿನ್ನಾಭಿಪ್ರಾಯವು ಇನ್ನೂ ನಿಂತಿದೆ.

ಈ ಸಮ್ಮೇಳನವು ಅನುಮೋದಿಸಿದ ಅನೇಕ ಗೊತ್ತುವಳಿಗಳಲ್ಲಿ ಹಿಂದುಗಳೂ ಮುಸಲ್ಮಾನರೂ ಸ್ವದೇಶೀವ್ರತವನ್ನು ಕೈಗೊಳ್ಳಬೇಕೆಂಬುದು ಒಂದು. ಇದರ ಸಹಜಾನುವರ್ತಿಯಾಗಿ ವಿದೇಶೀ ವಸ್ತುಗಳನ್ನು ಬಹಿಷ್ಕರಿಸಬೇಕೆಂಬ ಪ್ರಸ್ತಾಪವೂ ಸ್ವೀಕೃತವಾಯಿತು. ಖಾದಿಗೆ ಇನ್ನೂ ಉಚಿತಸ್ಥಾನವು ದೊರೆತಿರಲಿಲ್ಲ. ಹಜರತ್ ಸಾಹೇಬರು ಈ ಗೊತ್ತುವಳಿಯನ್ನು ಒಪ್ಪಲಿಲ್ಲ. ಖಿಲಾಫತ್ ವಿಷಯದಲ್ಲಿ ನ್ಯಾಯವಾದ ತೀರ್ಮಾನವಾಗದಿದ್ದರೆ ಬ್ರಿಟಿಷ್ ಚಕ್ರಾಧಿಪತ್ಯದ ಮೇಲೆ ಮುಯ್ಯಿ ತೀರಿಸಿಕೊಳ್ಳುವುದೇ ಅವರ ಉದ್ದೇಶವಾಗಿದ್ದಿತು. ಆದುದರಿಂದ ಅವರು ಇದಕ್ಕೆ ಪ್ರತಿಯಾಗಿ 'ಸಾಧ್ಯವಾದಮಟ್ಟಿಗೆ ಬ್ರಿಟಿಷ್ ಪದಾರ್ಥಗಳನ್ನು ಬಹಿಷ್ಕರಿಸಬೇಕು' ಎಂಬ ಗೊತ್ತುವಳಿಯನ್ನು ಸಭೆಯ ಮುಂದಿಟ್ಟರು. ನಾನು ಇದನ್ನು ತಾತ್ವಿಕ ದೃಷ್ಟಿಯಿಂದಲೂ ಕಾರ್ಯದೃಷ್ಟಿಯಿಂದಲೂ ವಿರೋಧಿಸಿದೆನು. ಈ ಸಂಬಂಧವಾಗಿ ನಾನು ವಾದಿಸಿದ ಅಂಶಗಳು ಈಗ ಬಹುಮಟ್ಟಿಗೆ ಜನರ ಅವಗಾಹನೆಗೆ ಬಂದಿವೆ. ಇದಲ್ಲದೆ ನಾನು ಅಹಿಂಸೆಯ ವಿಷಯದಲ್ಲಿ ನನ್ನ ಅಭಿಮತವನ್ನೂ ಸಭೆಯ ಗಮನಕ್ಕೆ ತಂದೆನು. ನಾನು ಹೇಳಿದುದು ಅಲ್ಲಿದ್ದವರ ಮನಸ್ಸಿನ ಮೇಲೆ ಗಂಭೀರ ಪರಿಣಾಮವನ್ನುಂ

ತೆಂಬುದು ನನಗೆ ಗೋಚರವಾಯಿತು ನನಗೆ ಮುಂಚೆ ಹಜರತ್ ಮೊಹಾನಿಯವರ ಭಾಷಣವನ್ನು ಸಭೆಯು ಅತ್ಯಂತ ಉತ್ಸಾಹ ದಿಂದ ಕೇಳಿದ್ದುದರಿಂದ ನನ್ನ ಮಾತು ಅರಣ್ಯರೋದನವಾದೀ ತೆಂದು ನಾನು ಭಯಗೊಂಡಿದ್ದೆನು ಸಮ್ಮೇಳನದ ಮುಂದೆ ನನ್ನ ಅಭಿಪ್ರಾಯವನ್ನು ವ್ಯಕ್ತಗೊಳಿಸದಿರುವದು ಕರ್ತವ್ಯಲೋಪವಾ ಗುವದೆಂಬುದಕ್ಕಾಗಿ ಮಾತ್ರ ನಾನು ಮಾತನಾಡಲು ಧೈರ್ಯ ಗೊಂಡಿದ್ದೆನು ಆದರೆ ನನ್ನ ಆಶ್ಚರ್ಯಕ್ಕೆ ಸರಿಯಾಗಿ ಅಲ್ಲಿದ್ದವರು ನನ್ನ ಭಾಷಣವನ್ನು ಸಂಪೂರ್ಣ ಗಮನವಿಟ್ಟು ಕೇಳಿದರಲ್ಲದೆ ನನ್ನ ಅಭಿಪ್ರಾಯಕ್ಕೆ ವೇದಿಕೆಯ ಮೇಲಿದ್ದವರ ಪೂರ್ಣ ಬೆಂಬಲವೂ ದೊರಕಿ ಒಬ್ಬರಾದಮೇಲೊಬ್ಬರು ನನ್ನ ಅಭಿಮತವನ್ನು ಪುಷ್ಟೀ ಕರಿಸಿ ಮಾತನಾಡಿದರು ಬ್ರಿಟಿಷ್ ಸಾಮಾನುಗಳ ಬಹಿಷ್ಕಾರವು ಉದ್ದೇಶವನ್ನು ಸಾರ್ಥಕಗೊಳಿಸದಿರುವದಷ್ಟೇ ಅಲ್ಲದೆ ಅದನ್ನನು ಸರಿಸಿದರೆ ತಾವು ನಗೆಗೀಡಾಗುವವೆಂದು ಮುಖಂಡರಿಗೆ ವ್ಯಕ್ತ ವಾಯಿತು ಅಲ್ಲಿ ನೆರೆದಿದ್ದ ಪ್ರತಿಯೊಬ್ಬರ ಮೈಮೇಲೂ ಯಾವ ದಾದರೊಂದು ಬ್ರಿಟಿಷ್ ಪದಾರ್ಥವಿದ್ದೇ ಇದ್ದಿತು ಆದುದರಿಂದ ಈ ಗೊತ್ತುವಳಿಗೆ ಒಪ್ಪಿಗೆ ಕೊಟ್ಟವರೇ ಅದನ್ನು ನಡೆಸಲಾಗದಿರು ವಾಗ ಅದಕ್ಕೆ ಸಮ್ಮತಿಕೊಟ್ಟರೆ ಅನರ್ಥವೇ ಹೊರತು ಬೇರೆ ಯೇನೂ ಇಲ್ಲವೆಂದು ಅಲ್ಲಿದ್ದ ಅನೇಕರಿಗೆ ಮನದಟ್ಟಾಯಿತು

ಕೇವಲ ವಿದೇಶೀ ವಸ್ತ್ರದ ಬಹಿಷ್ಕಾರದಿಂದ ನಮಗೆ ತೃಪ್ತಿ ಯಾಗುವದಿಲ್ಲ ನಮ್ಮ ಆವಶ್ಯಕತೆಗೆ ಬೇಕಾದಷ್ಟು ಸ್ವದೇಶೀ ಬಟ್ಟೆಯನ್ನು ತಯಾರುಮಾಡಲು ಮತ್ತು ವಿದೇಶೀ ವಸ್ತ್ರವನ್ನು ಪೂರ್ತಿಯಾಗಿ ತೊಲಗಿಸಲು ಎಷ್ಟು ಕಾಲ ಹಿಡಿಯುವುದೋ ಯಾರಿಗೆ ಗೊತ್ತು ? ಬ್ರಿಟಿಷರಮೇಲೆ ಒಡನೆಯೇ ಪರಿಣಾಮವನ್ನುಂಟುಮಾಡುವದೇ ನಾದರೂ ನಮಗೆ ಬೇಕು ವಿದೇಶೀವಸ್ತ್ರಬಹಿಷ್ಕಾರವಿರಲಿ ಅದಕ್ಕೆ ನಮ್ಮ ಅಭ್ಯಂತರವೇನೂ ಇಲ್ಲ ಆದರೆ ಅದರ ಜೊತೆಗೆ ಇನ್ನೂ ಶೀಘ್ರವಾದ ತ್ವರಿತವಾದ ಸಾಧನವನ್ನು ನಮಗೆ ಕೊಡಿ ' ಎಂಬುದೇ ಒಟ್ಟಿನಲ್ಲಿ ಮೌಲಾನಾ ಹಜರತ್ ಮೋಹಾನಿ

ಯುವರ ಮಾತಾಗಿದ್ದಿತು ಅವರ ಭಾಷಣವನ್ನು ನಾನು ಕೇಳುತ್ತಿದ್ದಹಾಗೆಯೇ ವಿದೇಶೀವಸ್ತ್ರಬಹಿಷ್ಕಾರದ ಜೊತೆಗೆ ಇನ್ನಾವದಾದರೂ ಹೊಸದೊಂದು ಆಗತ್ಯವೆಂದು ನನಗೆ ತೋರಹತ್ತಿತು ಈ ಬಹಿಷ್ಕಾರವನ್ನು ಕೂಡ ಒಡನೆಯೇ ಎಸಗುವದು ಸ್ಪಷ್ಟವಾಗಿ ಅಸಾಧ್ಯವೆಂದು ನನಗೆ ಆಗ ತೋರಿತು ಇಷ್ಟಬಂದರೆ ನಾವು ನಮಗೆ ಬೇಕಾದಷ್ಟು ಖಾದಿಯನ್ನು ಒದಗಿಸಿಕೊಳ್ಳಬಲ್ಲೆವೆಂದು ಆ ಕಾಲದಲ್ಲಿ ನನಗೆ ಗೊತ್ತಿರಲಿಲ್ಲ ಇದನ್ನು ಕಂಡುಹಿಡಿದುದು ಆಮೇಲೆ ಆದರೂ ಈ ಬಹಿಷ್ಕಾರವನ್ನು ಸಾಧಿಸುವದಕ್ಕಾಗಿ ನಾವು ಗಿರಣಿಗಳನ್ನೇ ನಂಬಿದರೆ ನಮಗೆ ಮೋಸವಾಗುವದೆಂದು ಆಗ ಕೂಡ ನನಗೆ ಗೊತ್ತಿದ್ದಿತು ನಾನು ಇನ್ನೂ ಈ ಉಭಯ ಸಂಕಟದಲ್ಲಿರುವಾಗಲೇ ಮೌಲಾನಸರು ತಮ್ಮ ಭಾಷಣವನ್ನು ಮುಗಿಸಿದರು

ಸರಿಯಾದ ಹಿಂದೀ ಅಥವಾ ಉರ್ದು ಇವುಗಳು ಹೊಳೆಯುದಿದ್ದುದರಿಂದ ನನಗೆ ತೊಂದರೆಯಾಯಿತು ಉತ್ತರ ದೇಶದ ಮುಸಲ್ಮಾನರೇ ಬಹುವಾಗಿ ಕೂಡಿದ್ದ ಸಭೆಯ ಮುಂದೆ ನಾನು ತಾರ್ಕಿಕ ಭಾಷಣವನ್ನಿತ್ತುದು ಇದೇ ಮೊದಲು ಕಲ್ಕತ್ತೆಯಲ್ಲಿ ನಾನು ಮುಸಲ್ಮಾನರ ಮಹಾ ಸಭೆಯ ಮುಂದೆ ಉರ್ದುವಿನಲ್ಲಿಯೇನೋ ಮಾತನಾಡಿದ್ದೆನು. ಆದರೆ ನಾಲ್ಕಾರು ನಿಮಿಷ ಮಾತ್ರ ಅದರ ಉದ್ದೇಶವು ಕೇವಲ ಸಭಿಕರ ಹೃದಯವನ್ನು ತಟ್ಟುವದಾಗಿದ್ದಿತು ಆದರ ಇಲ್ಲಾದರೋ ಸಭೆಯು ನನಗೆ ಒಂದು ವೇಳೆ ವಿರೋಧವರ್ತಿಯಾಗಿಲ್ಲದಿದ್ದರೆ ನನ್ನ ಮಾತನ್ನು ವಿಮರ್ಶೆಯ ದೃಷ್ಟಿಯಿಂದಲಾದರೂ ಗಮನಿಸುತ್ತಿದ್ದಿತು ಇಂತಹ ಸಭೆಗೆ ನಾನು ನನ್ನ ಅಭಿಪ್ರಾಯಗಳನ್ನು ವಿವರಿಸಿ ಮನಗಾಣಿಸಬೇಕಾಗಿದ್ದಿತು ಆದರೆ ನಾನು ನನ್ನ ಲಜ್ಜಾವೃತ್ತಿಯನ್ನೆಲ್ಲಾ ಕಿತ್ತೊಗೆದಿದ್ದೆನು ನಾನು ಅಲ್ಲಿದ್ದುದು ನನ್ನ ಯೋಗ್ಯತೆ ವಿಾರಿದ ಹರಕು ಮುರುಕು ಹಿಂದಿಯಲ್ಲಿ ಆ ಸಭೆಗೆ ನನ್ನ ಆಶಯವನ್ನು ವ್ಯಕ್ತಪಡಿಸುವದಕ್ಕೇ ಹೊರತು ದಿಲ್ಲಿಯ ಮುಸ

ಲ್ಮಾನರ ಕುಂದಿಲ್ಲದ ವೆುರುಗಿಟ್ಟ ಉರ್ದುವಿನಲ್ಲಿ ಉಪನ್ಯಾಸ ಕೊಡುವದಕ್ಕಲ್ಲ ಈ ಉದ್ದೇಶದಲ್ಲಿ ನಾನು ಕೃತಾರ್ಥನಾದೆನು. ಹಿಂದೀ-ಉರ್ದು ಭಾಷೆಯೊಂದೇ ಹಿಂದುಸ್ಥಾನದ ರಾಷ್ಟ್ರಭಾಷೆ ಯಾಗಲು ಯೋಗ್ಯವಾದುದೆಂಬುದಕ್ಕೆ ಈ ಸಭೆಯು ನನಗೆ ಪ್ರತ್ಯಕ್ಷ ನಿದರ್ಶನ ಕೊಟ್ಟಿತು ನಾನು ಇಂಗ್ಲಿಷಿನಲ್ಲಿ ಮಾತನಾಡಿದ್ದರೆ ಸಭೆಯು ಮೇಲೆ ಅಷ್ಟು ಗಂಭೀರ ಪರಿಣಾಮವಾಗುತ್ತಿರಲಿಲ್ಲ, ಮೌಲಾನರು ಬಹುಶಃ ಪಂದ್ಯವನ್ನೂ ಹೂಡುತ್ತಿರಲಿಲ್ಲ ಅವರು ಹಾಗೆ ಹೂಡಿದ್ದರೂ ನಾನು ಅದಕ್ಕೆ ಸರಿಯಾಗಿ ಉತ್ತರ ಕೊಡಲಾಗುತ್ತಿರಲಿಲ್ಲ

ಆಗ ತೋರಿದ ಹೊಸ ಭಾವವನ್ನು ವ್ಯಕ್ತಪಡಿಸಲು ನನಗೆ ಸರಿಯಾದ ಹಿಂದೀ ಅಥವಾ ಉರ್ದು ಶಬ್ದವು ಹೊಳೆಯಲಿಲ್ಲ. ಇದರಿಂದ ನಾನು ಸ್ವಲ್ಪ ಖತಿಗೊಂಡೆನು ಕಟ್ಟಕಡೆಗೆ ನಾನು ಆ ಭಾವವನ್ನು 'ನಾನ್‌ಕೋಆಪರೇಷನ್' (ಅಸಹಕಾರ) ವೆಂಬ ಮಾತಿನಿಂದ ಸೂಚಿಸಿದೆನು ಅದನ್ನು ಉಪಯೋಗಿಸಲು ಈ ಸಭೆಯೇ ಮೊದಲು ಮೌಲಾನರು ಭಾಷಣ ಮಾಡುತ್ತಿದ್ದಾಗ ನನಗೆ ಹೀಗೆ ತೋರಿತು ಅವರು ಸರಕಾರದೊಂದಿಗೆ ಎಷ್ಟೋ ವಿಷಯುಗಳಲ್ಲಿ ಸಹಕಾರ ಮಾಡುತ್ತಿದ್ದಾರೆ. ನಾವು ಆಯುಧಪಾಣಿಗಳಾಗುವದು ಸಾಧ್ಯವಲ್ಲದಿದ್ದರೆ ಅಥವಾ ಉಚಿತವಲ್ಲದಿದ್ದರೆ ಅಂತಹ ಸರಕಾರವನ್ನು ಸಫಲವಾಗಿ ವಿರೋಧಿಸುವ ಮಾತು ಕೇವಲ ನಿರರ್ಥಕ ಸರಕಾರವನ್ನು ನಿಜವಾಗಿ ವಿರೋಧಿಸುವದೆಂದರೆ ಅದರೊಡನೆ ಸಹಕರಿಸದಿರುವದು 'ನಾನ್–ಕೋಆಪರೇಷನ್' ಎಂಬ ಮಾತು ಹುಟ್ಟಿದುದು ಹೀಗೆ ಅದರ ಅನೇಕ ಇಂಗಿತಾರ್ಥಗಳು ಆಗ ನನಗೆ ಸ್ಪಷ್ಟವಾಗಿ ತಿಳಿದಿರಲಿಲ್ಲ. ಆದುದರಿಂದ ನಾನು ವಿವರಕ್ಕೆ ಹೋಗಲಿಲ್ಲ ನಾನು ಇಷ್ಟು ಮಾತ್ರ ಹೇಳಿದೆನು —

" ಮುಸಲ್ಮಾನರು ಈಗ ಬಹು ಮುಖ್ಯವಾದ ಗೊತ್ತುವಳಿಯನ್ನು ಸ್ವೀಕರಿಸಿದ್ದಾರೆ ಸಂಧಿಯ ಷರತ್ತುಗಳು ಅವರಿಗೆ

ಅನ್ಯಾಯವಾಗಿದ್ದಲ್ಲಿ (ಹಾಗೆ ಆಗಲು ದೇವರು ಅವಕಾಶಕೊಡದಿರಲಿ!) ಅವರು ಸರಕಾರದೊಡನೆ ಸಹಕಾರವನ್ನೆಲ್ಲಾ ಬಿಟ್ಟುಬಿಡುವರು. ಹೀಗೆ ಸಹಾಯಸಂಬಂಧವನ್ನು ನಿರಾಕರಿಸುವದು ಪ್ರಜೆಗಳ ಆಜನ್ಮಸಿದ್ಧ ಅಧಿಕಾರ. ಸರಕಾರದ ಬಿರುದುಬಾವಲಿಗಳನ್ನು ಇಟ್ಟುಕೊಳ್ಳುವದಾಗಲಿ ಸರಕಾರಿ ಚಾಕರಿಗೆ ಅಂಟಿಕೊಂಡಿರುವದಾಗಲಿ ನಮ್ಮ ಕರ್ತವ್ಯವಲ್ಲ. ಖಿಲಾಫತ್ತಿನಂತಹ ದೊಡ್ಡ ವಿಷಯದಲ್ಲಿ ಸರಕಾರದವರು ನಮಗೆ ದ್ರೋಹವೆಸಗುವದಾದರೆ ನಾವು ಅವರೊಡನೆ ಅಸಹಕರಿಸಿದಲ್ಲದೆ ಅನ್ಯಮಾರ್ಗವಿಲ್ಲ. ಆದುದರಿಂದ ಸರಕಾರವು ತನ್ನ ಮಾತಿಗೆ ತಪ್ಪಿದರೆ ನಾವು ಅವರೊಡನೆ ಅಸಹಕಾರ ಮಾಡಲು ನಮಗೆ ಹಕ್ಕುಂಟು."

ಆದರೆ 'ನಾನ್‌ಕೋಆಪರೇಷನ್' (ಅಸಹಯೋಗ) ಎಂಬ ಮಾತು ಸಾಧಾರಣ ಉಪಯೋಗಕ್ಕೆ ಬರಲು ಇನ್ನೂ ಕೆಲವು ತಿಂಗಳಾಯಿತು. ಆಗ್ಗಮಟ್ಟಿಗೆ ಅದು ಆ ಸಭೆಯ ಕಾರ್ಯಕಲಾಪದಲ್ಲಿ ಮಾಯವಾಯಿತು. ಅಷ್ಟೇಕೆ, ಅದಾದ ಒಂದು ತಿಂಗಳ ನಂತರ ಅಮೃತಸರದಲ್ಲಿ ನಡೆದ ರಾಷ್ಟ್ರಮಹಾಸಭೆ (ಕಾಂಗ್ರೆಸ್)ಯಲ್ಲಿ ನಾನು ಸರಕಾರದೊಡನೆ ಸಹಕರಿಸಬೇಕೆಂಬ ಗೊತ್ತುವಳಿಯನ್ನು ಸಮರ್ಥಿಸಿದುದು ಸರಕಾರವು ಮಾತಿಗೆ ತಪ್ಪುವದಿಲ್ಲವೆಂಬ ಆಸೆಯಿಟ್ಟುಕೊಂಡೇ.



೩೮

# ಅಮೃತಸರದ ಮಹಾಸಭೆ

ಯುದ್ಧದ ಕಾನೂನಿನ ಆಡಳಿತದಲ್ಲಿ ನೂರಾರು ಮಂದಿ ಪಂಜಾಬಿಗಳನ್ನು ಬಂಧಿಸಿದ್ದರು ಇವರುಗಳನ್ನು ವಿಚಾರಣೆ ಮಾಡಿದ ನ್ಯಾಯಸ್ಥಾನಗಳು ಹೆಸರಿಗೆ ಮಾತ್ರ ನ್ಯಾಯಸ್ಥಾನಗಳಾಗಿದ್ದುವು ಅತ್ಯಲ್ಪ ಸಾಕ್ಷ್ಯದ ಮೇಲೆ ಇವರಿಗೆಲ್ಲರಿಗೂ ಕಾರಾಗೃಹವಾಸದ ಶಿಕ್ಷೆಯನ್ನು ವಿಧಿಸಿದ್ದುವು ಇಂತಹ ನೂರಾರು ಜನರನ್ನು ಪಂಜಾಬ್ ಸರಕಾರವು ಬಹುಕಾಲ ಸೆರೆಯಲ್ಲಿಟ್ಟಿರುವಂತಿರಲಿಲ್ಲ ಎಲ್ಲ ಕಡೆಯಿಂದಲೂ ಈ ಪರಮ ಅನ್ಯಾಯದ ವಿಷಯವಾಗಿ ಜನರು ಬೊಬ್ಬೆಯಿಟ್ಟುದರಿಂದ ಈ ಜನರನ್ನು ಇನ್ನೂ ಬಂಧಿಸಿರುವದು ಅಸಾಧ್ಯವಾಯಿತು ಮಹಾಸಭೆಯು ಆರಂಭವಾಗುವದಕ್ಕೆ ಮುಂಚೆ ಮುಕ್ಕಾಲುಪಾಲು ಬಂದಿಗಳಿಗೆ ಬಿಡುಗಡೆಯಾಯಿತು ಮಹಾಸಭೆಯು ನಡೆಯುತ್ತಿರುವಾಗಲೇ ಲಾಲಾ ಹರಕಿಶನ್ ಲಾಲ್ ಮುಂತಾದ ನಾಯಕರನ್ನು ಬಿಟ್ಟರು ಅಲೀ ಸಹೋದರರೂ ನೇರವಾಗಿ ಕಾರಾಗೃಹದಿಂದ ಅಲ್ಲಿಗೆ ಬಂದಿಳಿದರು ಜನರ ಸಂತೋಷಕ್ಕೆ ಪಾರವೇ ಇರಲಿಲ್ಲ ಮೋತೀಲಾಲ್ ನಹರೂರವರು ಮಹಾಸಭೆಯ ಅಧ್ಯಕ್ಷರಾಗಿದ್ದರು ಇವರು ಅತ್ಯುತ್ಕೃಷ್ಟವಾಗಿ ನಡೆಯುತ್ತಿದ್ದ ವಕೀಲವೃತ್ತಿಯನ್ನು ಬಿಟ್ಟು ತಮಗುಂಟಾದ ನಷ್ಟವನ್ನು ಲೆಕ್ಕಿಸದೆ ಪಂಜಾಬಿಗೆ ಬಂದು ನಿಂತು ದೇಶಸೇವೆ ಮಾಡಿದ್ದರು ಸ್ವಾಮಿ ಶ್ರದ್ಧಾನಂದರು ಸ್ವಾಗತಸಮಿತಿಯ ಅಧ್ಯಕ್ಷರಾಗಿದ್ದರು

ಇದುವರೆಗೆ ಮಹಾಸಭೆಯ ವಾರ್ಷಿಕ ಸಮ್ಮೇಳನಗಳಲ್ಲಿ ನನ್ನ ಭಾಗವು ಇಷ್ಟೇ ಆಗಿದ್ದಿತು ರಾಷ್ಟ್ರಭಾಷೆಯಲ್ಲಿ ಮಾತನಾಡುವದರ ಮೂಲಕ ಕಾರ್ಯತಃ ಹಿಂದೀಪ್ರಚಾರ ಮಾಡುವದು

ಮತ್ತು ಆ ಭಾಷಣದಲ್ಲಿ ವಿದೇಶದಲ್ಲಿದ್ದ ಭಾರತೀಯರ ವಿಷಯವನ್ನು ಸಭೆಯು ಮುಂದಿಡುವದು ಈ ವರ್ಷ ನನ್ನಿಂದ ಹೆಚ್ಚಾಗಿ ಆಗಬೇಕಾದುದೇನಾದರೂ ಇದ್ದಿತೆಂದು ನಾನು ಎಣಿಸಿರಲಿಲ್ಲ ಆದರೆ ಹಿಂದೆ ಎಷ್ಟೋ ಬಾರಿ ಸಂಭವಿಸಿದಂತೆ ಈಗಲೂ ಜವಾಬ್ದಾರಿಯು ಕೆಲಸವು ಇದ್ದಕ್ಕಿದ್ದಹಾಗೆಯೇ ನನ್ನ ತಲೆಯ ಮೇಲೆ ಬಿದ್ದಿತು

ಹೊಸ ಸುಧಾರಣೆಗಳನ್ನು ಕುರಿತ ಚಕ್ರವರ್ತಿಗಳ ಪ್ರಸಿದ್ಧ ಪತ್ರಿಕೆಯು ಆಗತಾನೆ ಪ್ರಕಟವಾಗಿದ್ದಿತು ನನಗೆ ಕೂಡ ಅದು ಸಂಪೂರ್ಣವಾಗಿ ಸಮರ್ಪಕವಾಗಿರಲಿಲ್ಲ ಇತರರೆಲ್ಲರಿಗೂ ಅದು ಅಸಮರ್ಪಕವಾಗಿದ್ದಿತು ಸುಧಾರಣೆಗಳಲ್ಲಿ ಕುಂದಕವಿದ್ದರೂ ಅದು ಸ್ವೀಕಾರಯೋಗ್ಯವಾಗಿದ್ದಿತೆಂದು ನನಗೆ ಆಗ ತೋರಿತು ನನಗೆ ಅದರ ಭಾಷೆಯಲ್ಲಿಯೂ ಆ ಪ್ರಸಿದ್ಧ ಪತ್ರಿಕೆಯಲ್ಲಿಯೂ ಲಾರ್ಡ್ ಸಿಂಹರ ಕೈವಾಡವಿದೆಯೆಂದು ಕಂಡಿತು ಇದು ನನಗೆ ಆಶಾಜನಕವಾಗಿ ಹೊಳೆಯಿತು ಆದರ ಲೋಕಮಾನ್ಯ ತಿಲಕರು ದೇಶಬಂಧು ಚಿತ್ತರಂಜನ ದಾಸರು ಮುಂತಾದ ಅನುಭವಿಗಳಾದ ನಾಯಕರು ತಲೆಯಲ್ಲಾಡಿಸಿದರು ಪಂಡಿತ ಮಾಲವೀಯರು ತಟಸ್ಥರಾಗಿದ್ದರು

ಪಂಡಿತ ಮಾಲವೀಯರು ನನಗೆ ತಮ್ಮ ಕೋಣೆಯಲ್ಲಿ ಇಂಬುಗೊಟ್ಟಿದ್ದರು ಹಿಂದೂ ವಿಶ್ವವಿದ್ಯಾನಿಲಯದ ಸ್ಥಾಪನೆಯ ಕಾಲದಲ್ಲಿ ಅವರ ಜೀವನವೆಷ್ಟು ಸರಳವೆಂದು ನನಗೆ ಗೊತ್ತಾಗಿದ್ದಿತು ಆದರೆ ಈ ಸಂದರ್ಭದಲ್ಲಿ ನಾನು ಅವರ ಕೊಠಡಿಯಲ್ಲಿಯೇ ಇದ್ದುದರಿಂದ ಅವರ ದಿನಚರಿಯನ್ನು ಅತ್ಯಂತ ಸೂಕ್ಷ್ಮವಾಗಿ ದಿಟ್ಟಿಸಲು ನನಗೆ ಅವಕಾಶ ದೊರಕಿತು ನನ್ನ ಕಣ್ಣಿಗೆ ಬಿದ್ದುದು ನನ್ನನ್ನು ಆಶ್ಚರ್ಯದಿಂದಲೂ ಸಂತೋಷದಿಂದಲೂ ತುಂಬಿತು ಅವರ ಕೋಣೆಯು ಎಲ್ಲಾ ಬಡಬಗ್ಗರ ಧರ್ಮಸತ್ರದಂತೆ ಕಾಣುತ್ತಿದ್ದಿತು. ಒಂದು ಕಡೆಯಿಂದ ಇನ್ನೊಂದು ಕಡೆಗೆ

ದಾಟುವದೇ ಕಷ್ಟವಾಗಿದ್ದಿತು—ಅದರ ತುಂಬ ಅಷ್ಟು ಜನರಿರುತ್ತಿದ್ದರು ಯಾರೇ ಆಗಲಿ ಎಷ್ಟುಹೊತ್ತಿಗೇ ಆಗಲಿ ಅಲ್ಲಿಗೆ ಬರಬಹುದಾಗಿದ್ದಿತು ಹಾಗೆ ಬಂದವರು ಅವರೊಡನೆ ಎಷ್ಟು ಹೊತ್ತು ಇರಲೂ ಅಡಚಣೆಯಿರಲಿಲ್ಲ ಈ ಕೊಟ್ಟಿಗೆಯ ಒಂದು ಮೂಲೆಯಲ್ಲಿ ನನ್ನ ಮಂಚವೂ ಗಾಂಭೀರ್ಯದಿಂದ ಕಂಗೊಳಿಸುತ್ತಿದ್ದಿತು ಆದರೆ ನಾನು ಈ ಅಧ್ಯಾಯವನ್ನೆಲ್ಲಾ ಮಾಲವೀಯರ ಜೀವನಸಂಪ್ರದಾಯದ ವರ್ಣನೆಯಿಂದ ತುಂಬಿಸಲಾಗದು ಇನ್ನು ಪ್ರಕೃತ ವಿಷಯಕ್ಕೆ ತೆರಳೋಣ

ಹೀಗೆ ನಾನು ಪ್ರತಿ ದಿನವೂ ಮಾಲವೀಯರೊಡನೆ ಚರ್ಚೆ ಮಾಡಲು ಸಾಧ್ಯವಾಯಿತು ಅವರು ಅಣ್ಣನು ತಮ್ಮನಿಗೆ ಹೇಳುವಂತೆ ವಿವಿಧ ಪಕ್ಷಗಳ ಅಭಿಪ್ರಾಯವನ್ನು ನನಗೆ ವಿವರಿಸುತ್ತಿದ್ದರು ಸುಧಾರಣೆಗಳಿಗೆ ಸಂಬಂಧಪಟ್ಟ ಗೊತ್ತುವಳಿಯ ಮೇಲಿನ ಚರ್ಚೆಯಲ್ಲಿ ನಾನು ಭಾಗಿಯಾಗದಿರುವದು ಅಸಾಧ್ಯವೆಂದು ನನಗೆ ಕಂಡಿತು ಪಂಜಾಬಿನ ಅತ್ಯಾಚಾರಗಳನ್ನು ಕುರಿತು ಮಹಾಸಭೆಯ ವರದಿಯನ್ನು ಬರೆಯುವದರಲ್ಲಿ ನನ್ನ ಜವಾಬ್ದಾರಿಯೂ ಇದ್ದಿತು. ಆದುದರಿಂದ ಅದರ ಸಂಬಂಧವಾಗಿ ಮಾಡಲುಳಿದಿದ್ದ ಅನೇಕ ವಿಷಯಗಳಿಗೆ ನನ್ನ ಲಕ್ಷ್ಯವನ್ನುಕೊಡಬೇಕೆಂದು ನನಗೆ ತೋರಿತು ಈ ವಿಚಾರದಲ್ಲಿ ಸರಕಾರದೊಡನೆ ವ್ಯವಹಾರ ನಡೆಸಬೇಕಾಗಿಯೂ ಇದ್ದಿತು ಮತ್ತು ಹೀಗೆಯೇ ಖಿಲಾಫತ' ಪ್ರಶ್ನೆಯೂ ಇದ್ದಿತು. ಇದಲ್ಲದೆ ಆಗ ನನಗೆ ಮಿ ಮಾಂಟೆಗ್ಯೂರವರು ಭರತಖಂಡಕ್ಕೆ ಎರಡು ಬಗೆಯುವದೂ ಇಲ್ಲ, ಇತರರು ಹಾಗೆ ಮಾಡಲು ಬಿಡುವದೂ ಇಲ್ಲ ಎಂಬ ನಂಬಿಕೆಯಿದ್ದಿತು ಅಲೀ ಭ್ರಾತೃಗಳೇ ಮುಂತಾದ ಕೈದಿಗಳ ಬಂಧವಿಮೋಚನೆಯು ನನಗೆ ಶುಭಸೂಚನೆಯಾಗಿ ಕಂಡಿತು ಹೀಗಿರುವಲ್ಲಿ ಸುಧಾರಣೆಗಳನ್ನು ತ್ಯಜಿಸದೆ ಸ್ವೀಕರಿಸುವ ಗೊತ್ತುವಳಿಯೇ ಉಚಿತವಾದುದೆಂದು ನನಗೆ ತೋರಿತು. ದೇಶಬಂಧು ಚಿತ್ತರಂಜನ ದಾಸರಾದರೋ ಸುಧಾರಣೆಗಳು ಕೇವಲ ಅಲ್ಪವಾಗಿಯೂ ಅಸಮರ್ಪಕವಾಗಿಯೂ ಇದ್ದು

ದರಿಂದ ಅವುಗಳನ್ನು ನಿರಾಕರಿಸಬೇಕೆಂಬ ದೃಢಾಭಿಪ್ರಾಯವುಳ್ಳವರಾಗಿದ್ದರು ಇವರು ಲೋಕಮಾನ್ಯರು ತಟಸ್ಥರಾಗಿದ್ದರೆನ್ನಬಹುದು ಆದರ ಅವರು ತಮ್ಮ ಬೆಂಬಲವನ್ನು ದೇಶಬಂಧುಗಳು ಒಪ್ಪಿದ ಗೊತ್ತುವಳಿಗೆ ಕೂಡಲು ನಿಶ್ಚಯಿಸಿದ್ದರು

ಇಂತಹ ಪಕ್ವಾನುಭವಿಗಳಾದ, ಸಹಸ್ರ ಸಮರಗಳಲ್ಲಿ ನುರಿತ, ಸರ್ವಮಾನ್ಯರಾದ ನಾಯಕರೊಡನೆ ಮತಭೇದದಿಂದಿರುವದು ನನಗೆ ಸಹನಾತೀತವಾಗಿದ್ದಿತು ಆದರ ಇನ್ನೊಂದು ಕಡೆ ಅಂತಸ್ಸಾಕ್ಷಿಯ ಆಜ್ಞೆಯು ಸ್ಪಷ್ಟವಾಗಿದ್ದಿತು ನಾನು ಮಹಾಸಭೆಯನ್ನು ಬಿಟ್ಟು ಓಡಿಹೋಗಲು ಯತ್ನಿಸಿದೆನು ಮಹಾಸಭೆಯ ಅಧಿವೇಶನದ ಉಳಿದ ಭಾಗದಲ್ಲಿ ನಾನು ಇಲ್ಲದಿರುವದೇ ಎಲ್ಲರಿಗೂ ಕ್ಷೇಮಕಾರಕವೆಂದೂ ಹಾಗೆ ಮಾಡಿದರ ನಾನು ಅಂತಹ ಮಾನ್ಯ ಮುಖಂಡರೊಡನೆ ಭಿನ್ನಾಭಿಪ್ರಾಯವುಳ್ಳವನೆಂಬುದನ್ನು ಸಾರಿ ಹೇಳುವ ಅಗತ್ಯವು ತಪ್ಪುವದೆಂದೂ ನಾನು ಪಂಡಿತ ಮಾಲವೀಯರಿಗೂ ಮೋತೀಲಾಲರಿಗೂ ಸೂಚಿಸಿದೆನು.

ಆದರ ಈ ಹಿರಿಯರಿಬ್ಬರೂ ಇದಕ್ಕೆ ಒಪ್ಪಲಿಲ್ಲ ಇದರ ಸುಳಿವು ಲಾಲಾ ಹರಕಿಶನ್ ಲಾಲರಿಗೆ ಹೇಗೋ ತಿಳಿಯಿತು "ಅದೆಂದೂ ಆಗುವದಿಲ್ಲ ಅದರಿಂದ ಪಂಜಾಬಿಗಳಿಗ ಮನಃಖೇದವುಂಟಾಗುತ್ತದೆ" ಎಂದರವರು ನಾನು ಈ ವಿಷಯವನ್ನು ಲೋಕಮಾನ್ಯರೊಡನೆಯೂ ದೇಶಬಂಧುಗಳೊಡನೆಯೂ ಮಿ ಜಿನ್ನಾರೊಡನೆಯೂ ಚರ್ಚಿಸಿದೆನು ಸಂಕಟದಿಂದ ತಪ್ಪಿಸಿಕೊಳ್ಳುವ ದಾರಿ ಯಾವದೂ ಕಾಣಲಿಲ್ಲ ಕಡೆಗೆ ನಾನು ನನ್ನ ದುಃಖವನ್ನು ಮಾಲವೀಯರಿಗೆ ಅರಿಕೆಮಾಡಿಕೊಂಡೆನು "ಎರಡು ಪಕ್ಷಗಳಿಗೂ ರಾಜಿಯಾಗುವ ಹಾಗೆ ನನಗೆ ಕಾಣುವದಿಲ್ಲ ನನ್ನ ಗೊತ್ತುವಳಿಯನ್ನು ನಾನು ಪ್ರಸ್ತಾಪಿಸುವದೇ ಆದರೆ ಅದನ್ನು ಕುರಿತು ಸಭೆಯ ಮತವನ್ನು ನಿರ್ಧರಿಸಲು 'ವೋಟ' (ಮತಸೂಚಿ) ತೆಗೆದುಕೊಳ್ಳಬೇಕಾಗುತ್ತದೆ ಅದಕ್ಕ ಇಲ್ಲಿ ಯಾವ

ಏರ್ಪಾಟೂ ಕಾಣಬರುವದಿಲ್ಲ ಮಹಾಸಭೆಯ ಅಧಿವೇಶನದಲ್ಲಿ ಕೈ ಎತ್ತುವದರಿಂದಲೇ 'ವೋಟ' ತಗದುಕೊಳ್ಳುವದು ಇದುವರೆಗಿನ ಅಭ್ಯಾಸ ಇದರ ಫಲವೇನೆಂದರೆ ಇದರಲ್ಲಿ ಸದಸ್ಯರಿಗೂ ಪ್ರೇಕ್ಷಕರಿಗೂ ವ್ಯತ್ಯಾಸ ಮಾಡಲಾಗುವದೇ ಇಲ್ಲ ಇಂತಹ ದೊಡ್ಡ ಸಮೂಹಗಳಲ್ಲಿ 'ವೋಟ' ಎಣಿಸುವದಕ್ಕೆ ನನಗೆ ಸಾಧನವೇ ಇಲ್ಲ ಇದೆಲ್ಲದರ ಸಾರಾಂಶವೇನೆಂದರೆ, ನಾನು ವೋಟ' ಎಣಿಸಲಿಚ್ಛಿಸಿದರೂ ಅದಕ್ಕೆ ಅನುಕೂಲವೂ ಇಲ್ಲ, ಅರ್ಥವೂ ಇಲ್ಲ' ಆದರೆ ಲಾಲಾ ಹರಕಿಶನ್ ಲಾಲರು ಸಹಾಯಕ್ಕೆ ಬಂದು ಇದಕ್ಕೆ ಬೇಕಾದ ಏರ್ಪಾಟು ಮಾಡುವ ಭಾರವನ್ನು ಹೊತ್ತುಕೊಂಡರು "ವೋಟ ತಗದುಕೊಳ್ಳುವ ದಿನ ನಾವು ಪ್ರೇಕ್ಷಕರನ್ನು ಮಹಾಸಭೆಯ ಹಪ್ಪರದೊಳಕ್ಕೆ ಬಿಡುವದಿಲ್ಲ ಲೆಕ್ಕ ಮಾಡುವ ವಿಚಾರ ನನಗೆ ಬಿಡಿ ನೀವಂತು ಮಹಾಸಭೆಯನ್ನು ಬಿಟ್ಟು ಹೋಗಬಾರದು" ಎಂದರವರು

ಕಡೆಗೆ ನಾನು ಸೋತೆನು ನನ್ನ ಗೊತ್ತುವಳಿಯನ್ನು ಸಿದ್ಧಪಡಿಸಿ ಅದನ್ನು ಸಭೆಯು ಮುಂದಿಡಲು ಒಪ್ಪಿಕೊಂಡೆನು ಹೀಗೆ ಮಾಡುವಾಗ ನನ್ನ ಹೃದಯವು ಅಧೈರ್ಯದಿಂದ ಕಂಪಿಸುತ್ತಿದ್ದಿತು ಪಂಡಿತ ಮಾಲವೀಯರೂ ಮಿ ಜಿನ್ನರೂ ಈ ಗೊತ್ತುವಳಿಯನ್ನು ಸಭೆಯಲ್ಲಿ ಸ್ವೀಕರಿಸಬೇಕೆಂದು ನಿರ್ಧಾರವಾಯಿತು ನಮ್ಮ ಮತಭೇದದಲ್ಲಿ ಎಳ್ಳಷ್ಟೂ ಹೊಟ್ಟೆಯುರಿ ಇಲ್ಲದಿದ್ದರೂ ನಮ್ಮ ಭಾಷಣಗಳಲ್ಲಿ ತರ್ಕವನ್ನುಳಿದು ಇನ್ನೇನೂ ಇರಲಿಲ್ಲವಾದರೂ ಹೀಗೆ ನಮ್ಮಲ್ಲಿ ಭೇದವಿರುವದೇ ಜನರಿಗೆ ಸರಿಬೀಳಲಿಲ್ಲವೆಂಬುದು ನನ್ನ ಗೋಚರಕ್ಕೆ ಬಂದಿತು ಇದು ಅವರ ಮನಸ್ಸನ್ನು ನೋಯಿಸಿತು ಅವರಿಗೆ ಐಕಮತ್ಯವು ಬೇಕಾಗಿದ್ದಿತು

ಭಾಷಣಗಳಾಗುತ್ತಿದ್ದಂತೆಯೇ ನಮ್ಮೊಳಗಿನ ಅಂತರವನ್ನು ತೊಲಗಿಸಲು ವೇದಿಕೆಯ ಮೇಲೆ ಪ್ರಯತ್ನವು ನಡೆಯುತ್ತಿದ್ದಿತು ಈ ಉದ್ದೇಶಕ್ಕಾಗಿ ನಾಯಕರಲ್ಲಿ ಒಬ್ಬರಿಂದೊಬ್ಬರಿಗೆ ಚೀಟಿಗಳು ಓಡಾಡುತ್ತಿದ್ದುವು ಮಾಲವೀಯರು ರಾಜಿಯನ್ನು ಮಾಡಿಸಲು

ಎಲ್ಲಾ ಸಾಹಸವನ್ನೂ ಮಾಡಿದರು ಆಗತಾನೆ ಜಯರಾಮದಾಸರು ಗೊತ್ತುವಳಿಯ ತಿದ್ದುಪಡಿಯೊಂದನ್ನು ನನ್ನ ಕೈಲಿ ಕೊಟ್ಟು, ತಮಗೆ ಸಹಜವಾದ ಮಧುರ ವಚನದಿಂದ ಪ್ರತಿನಿಧಿಗಳನ್ನು ಈ ಸಂದರ್ಭದಲ್ಲಿ 'ವೋಟ್' ಕೊಡುವ ಸಂಕಟದಿಂದ ತಪ್ಪಿಸಬೇಕೆಂದು ಕೇಳಿಕೊಂಡರು ಅವರ ತಿದ್ದುಪಡಿಯು ನನಗೆ ಉಚಿತವಾಗಿ ಕಂಡಿತು ಮಾಲವೀಯರ ದೃಷ್ಟಿಯಂತು ಆಗಲೇ ಆಶಾಕಿರಣಗಳನ್ನರಸುತ್ತಾ ನಾಲ್ಕೂಕಡೆ ಬೀರುತ್ತಿದ್ದಿತು. ಜಯರಾಮದಾಸರ ತಿದ್ದುಪಡಿಯು ಎರಡು ಕಡೆಯವರ ಒಪ್ಪಿಗೆಗೂ ಬರುವಂತಿದೆಯೆಂದು ನನಗೆ ಕಾಣುವದೆಂದು ನಾನು ಮಾಲವೀಯರಿಗೆ ಹೇಳಿದೆನು ಇದಾದಮೇಲೆ ಲೋಕಮಾನ್ಯರಿಗೆ ತೋರಿಸಿದೆವು ಅವರು "ಸಿ ಆರ್ ದಾಸರು ಒಪ್ಪಿದರೆ ನನಗೂ ಆಗಬಹುದು" ಎಂದರು ದೇಶಬಂಧುಗಳು ಕಡೆಗೆ ಮನಃಕರಗಿ ಒಪ್ಪಿಗೆಗಾಗಿ ಶ್ರೀ ವಿಪಿನಚಂದ್ರ ಪಾಲರ ಕಡೆಗೆ ನೋಡಿದರು ಮಾಲವೀಯರು ಆಸೆಯಿಂದ ತುಂಬಿದರು ತಿದ್ದುಪಡಿಯಿದ್ದ ಚೀಟಿಯನ್ನು ಕಿತ್ತುಕೊಂಡು ದೇಶಬಂಧುಗಳು ಸ್ಪಷ್ಟವಾಗಿ 'ಆಗಲಿ' ಎನ್ನುವದಕ್ಕೆ ಮುಂಚೆಯೇ "ಪ್ರತಿನಿಧಿ ಸಹೋದರರೇ, ರಾಜಿಯಾಗಿದೆಯೆಂಬ ಸಂತೋಷದ ಸುದ್ದಿಯನ್ನು ನಿಮಗೆ ತಿಳಿಸುತ್ತೇನೆ" ಎಂದು ಕೂಗಿದರು ಮುಂದೆ ನಡೆದುದನ್ನು ವರ್ಣಿಸಲು ಶಕ್ಯವಲ್ಲ ಚಪ್ಪಾಳೆಯ ಸದ್ದಿನಿಂದ ಚಪ್ಪರವು ನಡುಗಿತು ಅಲ್ಲಿಯವರೆಗೆ ನಿರಾಸೆಯಿಂದ ಕಂಗೆಟ್ಟಿದ್ದ ಸಭಿಕರ ಮುಖಗಳು ಆನಂದದಿಂದ ಕಳೆಗೊಂಡವು

ತಿದ್ದುಪಡಿಯ ವಿಷಯವನ್ನು ವಿಶದವಾಗಿ ಹೇಳಲು ಆವಶ್ಯಕತೆಯಿಲ್ಲ ಈ ಪ್ರಕರಣಗಳ ವಿಷಯವಾದ ನನ್ನ ಪ್ರಯೋಗಗಳಲ್ಲಿ ಒಂದಾಗಿ ಈ ಗೊತ್ತುವಳಿಯ ಭಾರವನ್ನು ನಾನು ಹೊತ್ತುಕೊಂಡುದು ಹೇಗೆಂಬುದನ್ನು ತಿಳಿಸುವದೇ ಇಲ್ಲಿ ನನ್ನ ಉದ್ದೇಶ.

ಈ ರಾಜಿಯು ನನ್ನ ಜವಾಬ್ದಾರಿಯನ್ನು ಇನ್ನೂ ಹೆಚ್ಚಿಸಿತು.

# ೩೯

# ಖಾದಿಯ ಜನ್ಮ

೧೯೦೮ನೆಯ ಇಸವಿಯಲ್ಲಿ 'ಹಿಂದ್ ಸ್ವರಾಜ್' ಎಂಬ ಪುಸ್ತಕದಲ್ಲಿ ನಾನು ಚರಖವೇ ಭರತಖಂಡದಲ್ಲಿ ದಿನವೂ ಹೆಚ್ಚುತ್ತಿರುವ ದಾರಿದ್ರ್ಯಕ್ಕೆ ಮದ್ದೆಂದು ವರ್ಣಿಸುವವರೆಗೂ ನಾನು ಚರಖವನ್ನಾಗಲಿ ಮಗ್ಗವನ್ನಾಗಲಿ ನೋಡಿದ್ದಂತೆ ಕಾಣೆ. ಹಿಂದುಸ್ಥಾನದ ಮನುಷ್ಯಕೋಟಿಯ ಕಡುಬಡತನವನ್ನು ಪರಿಹರಿಸುವ ಸಾಧನವೇ ಸ್ವರಾಜ್ಯಸ್ಥಾಪನೆಗೂ ಸಾಧನವೆಂಬುದನ್ನು ನಾನು ಆ ಪುಸ್ತಕದಲ್ಲಿ ಆಧಾರವಾಗಿಟ್ಟುಕೊಂಡೆನು. ೧೯೧೫ರಲ್ಲಿ ನಾನು ದಕ್ಷಿಣ ಆಫ್ರಿಕದಿಂದ ಭರತಖಂಡಕ್ಕೆ ಹಿಂತಿರುಗಿದಾಗ ಕೂಡ ನಾನು ನೂಲುವ ರಾಟೆಯನ್ನು ನೋಡಿದ್ದಿಲ್ಲ. ಸಾಬರ್ಮತಿಯಲ್ಲಿ ಸತ್ಯಾಗ್ರಹಾಶ್ರಮವನ್ನು ಸ್ಥಾಪಿಸಿದಾಗ ನಾವು ಅಲ್ಲಿ ಒಂದೆರಡು ಕೈಮಗ್ಗಗಳನ್ನು ಹೂಡಿದೆವು. ಆದರೆ ಒಡನೆಯೇ ಒಂದು ಕಷ್ಟವು ನಮಗೆ ಅಡ್ಡವಾಗಿ ಬಂದಿತು. ನಾವೆಲ್ಲರೂ ಓದುಬರಹದ ಕಲಸಕ್ಕೆ ಅಥವಾ ವ್ಯಾಪಾರಕ್ಕೆ ಸೇರಿದವರಾಗಿದ್ದೆವು. ಕೈಗಾರಿಕೆಯು ನಮ್ಮೊಬ್ಬರಿಗೂ ತಿಳಿಯದು. ಮಗ್ಗದಲ್ಲಿ ನೆಯ್ಯುವದಕ್ಕ ಮುಂಚೆ ಅದರ ಉಪಯೋಗವನ್ನು ನಮಗೆ ಕಲಿಸಲಿಕ್ಕೆ ಜಾಡನೊಬ್ಬನು ಬೇಕಾಗಿದ್ದಿತು. ಕಟ್ಟಕಡೆಗೆ ಪಾಲಣಪುರದಿಂದೊಬ್ಬನನ್ನು ಕರೆಸಿದೆವು. ಆದರೆ ಆತನು ನಮಗೆ ತನ್ನ ಕಸಬನ್ನೆಲ್ಲಾ ಹೇಳಿಕೊಡಲಿಲ್ಲ. ಮಗನಲಾಲ ಗಾಂಧಿಯಾದರೋ ಇಷ್ಟಕ್ಕೇ ಸೋತುಹೋಗುವವರಾಗಿರಲಿಲ್ಲ. ಕೈಗಾರಿಕೆಯ ಕೆಲಸಗಳಲ್ಲಿ ಅವರಿಗೆ ನೈಜವಾದ ಚಾತುರ್ಯವಿದ್ದುದರಿಂದ ಅವರು ಸ್ವಲ್ಪ ಕಾಲದಲ್ಲಿಯೇ ಈ ಕಸಬಿನ ಮರ್ಮವನ್ನೆಲ್ಲಾ ಅರಿತುಕೊಂಡರು. ಆಶ್ರಮದಲ್ಲಿ ಒಬ್ಬರಾದ ಮೇಲೊಬ್ಬರಂತೆ ಹಲವರು ನೆಯ್ಗೆಯನ್ನು ಕಲಿತುಕೊಂಡರು.

ನಾವೇ ತಯಾರು ಮಾಡಿದ ಬಟ್ಟೆಯು ನಮ್ಮೆಲ್ಲರಿಗೂ ಸಾಕಾಗಬೇಕೆಂಬುದೇ ನಾವಿಟ್ಟುಕೊಂಡ ಧ್ಯೇಯ. ಆದುದರಿಂದ ನಾವು ಒಡನೆಯೇ ಗಿರಣಿಯ ಬಟ್ಟೆಯುಡುವುದನ್ನು ಬಿಟ್ಟುಬಿಟ್ಟೆವು ಆಶ್ರಮವಾಸಿಗಳೆಲ್ಲರೂ ಭರತಖಂಡದಲ್ಲೇ ತಯಾರಾದ ನೂಲಿನಿಂದ ಕೈಮಗ್ಗದಲ್ಲಿ ನೇಯ್ದ ಬಟ್ಟೆಯನ್ನೇ ಉಡಲು ಸಂಕಲ್ಪಮಾಡಿದರು ಈ ಅಭ್ಯಾಸದಿಂದ ನಾವು ಎಷ್ಟೋ ಅನುಭವವನ್ನು ಸಂಪಾದಿಸಿದೆವು ನೇಯ್ಗೆಯವರೊಡನೆ ನಮಗೆ ಗಾಢ ಸಂಬಂಧವುಂಟಾದುದರಿಂದ ಅವರ ಜೀವನದ ರೀತಿ, ಅವರ ನೇಯ್ಗೆಯ ಪರಿಮಾಣ, ನೂಲನ್ನು ಪಡೆಯಲು ಅವರು ಪಡುತ್ತಿದ್ದ ಕಷ್ಟ, ಅವರಿಗಾಗುತ್ತಿದ್ದ ಮೋಸ ಮತ್ತು ಸದಾ ಹೆಚ್ಚುತ್ತಿದ್ದ ಅವರ ಸಾಲಗಾರಿಕೆ ಇವೆಲ್ಲಾ ನಮ್ಮ ಅರಿವಿಗೆ ಬಂದುವು ನಮಗೆ ಬೇಕಾದ ಬಟ್ಟೆಯನ್ನೆಲ್ಲಾ ನಾವು ಒಡನೆಯೇ ತಯಾರು ಮಾಡುವಂತಿರಲಿಲ್ಲ ಆದುದರಿಂದ ಕೈಮಗ್ಗದ ಜಾಡರಿಂದ ಬಟ್ಟೆಯನ್ನು ತರಿಸಿಕೊಳ್ಳುವದೊಂದೇ ಮಾರ್ಗವಾಗಿದ್ದಿತು ಹಿಂದೂಸ್ಥಾನದಲ್ಲಿ ತಯಾರಾದ ನೂಲಿನಿಂದ ನೆಯ್ದ ಬಟ್ಟೆಯು ಬಟ್ಟೆ ಅಂಗಡಿಗಳಲ್ಲಾಗಲೀ ನೇಯ್ಗೆಯವರಲ್ಲಿಯೇ ಆಗಲಿ ಸುಲಭವಾಗಿ ದೊರಕುತ್ತಿರಲಿಲ್ಲ ಜಾಡರು ತಾವು ನೇಯುತ್ತಿದ್ದ ನಯವಾದ ಬಟ್ಟೆಗಲ್ಲಾ ವಿದೇಶಿ ನೂಲನ್ನು ಉಪಯೋಗಿಸುತ್ತಿದ್ದರು ಏಕೆಂದರೆ ಈ ದೇಶದ ಗಿರಣಿಗಳಲ್ಲಿ ನಯವಾದ ನೂಲು ತಯಾರಾಗುತ್ತಿರಲಿಲ್ಲ ಇಂದು ಕೂಡ ಇಲ್ಲಿಯ ಗಿರಣಿಗಳಲ್ಲಿ ತಯಾರಾಗುವ ನಯವಾದ ನೂಲು ಬಹು ಕಡಿಮೆ. ಅತ್ಯಂತ ನಯವಾದುದು ಇಲ್ಲಿ ಆಗುವದೇ ಇಲ್ಲ ನಾವು ಎಷ್ಟೋ ಪ್ರಯತ್ನಪಟ್ಟು ಕಟ್ಟಕಡೆಗೆ ಸ್ವದೇಶಿ ನೂಲನ್ನು ನೆಯ್ಯಲು ಒಪ್ಪುವ ಜಾಡರನ್ನು ಕಂಡುಹಿಡಿದೆವು ಆಗ ಕೂಡ ಅವರು ನೇಯ್ದ ಬಟ್ಟೆಯನ್ನೆಲ್ಲಾ ನಾವು ಕೊಂಡುಕೊಳ್ಳುವವೆಂದು ಮಾತುಕೊಟ್ಟ ಮೇಲೆಯೇ ಅವರು ಒಪ್ಪಿದುದು ಹೀಗೆ ಗಿರಣಿ ನೂಲಿನಿಂದ ನೇಯ್ದ ಬಟ್ಟೆಯನ್ನು ನಾವೂ ತೊಟ್ಟು ನಮ್ಮ ಮಿತ್ರರೂ ತೊಡುವಂತೆ ಮಾಡಿ ನಾವಾಗಿ ನಾವೇ ಈ ದೇಶದ ನೂಲುವ ಗಿರಣಿಗಳ

ಪ್ರತಿನಿಧಿಗಳಂತಾದೆವು ಇದರಿಂದ ನಮಗೆ ಗಿರಣಿಗಳೊಡನೆ ಸಂಬಂಧ ಬೆಳೆದು ತಕ್ಕಮಟ್ಟಿಗೆ ಅವುಗಳ ಆಡಳಿತ ಮತ್ತು ಕಷ್ಟ ನಿಷ್ಠುರಗಳ ಪರಿಚಯವಾಯಿತು ತಾವು ನೂಲಿದ ದಾರ ವನ್ನೆಲ್ಲಾ ತಾವೇ ನೆಯ್ಯುವದು ಅವುಗಳ ಉದ್ದೇಶವೆಂದೂ ಕೈ ಮಗ್ಗದವರೊಡನೆ ಅವುಗಳು ಈಗ ಸಹಕರಿಸುತ್ತಿದ್ದುದು ಆವಶ್ಯ ಕತೆಯಿಂದಲೇ ಹೊರತು ಆತ್ಮಸಂತೋಷದಿಂದಲ್ಲವೆಂದೂ ಅದು ನಿರಂತರ ನಡೆಯುವದಲ್ಲವೆಂದೂ ನಮಗೆ ಗೊತ್ತಾಯಿತು. ನಮ್ಮ ನೂಲನ್ನು ನಾವೇ ಮಾಡಿಕೊಳ್ಳಬೇಕೆಂಬ ಆತುರವು ನಮಗೆ ಹಚ್ಚಿತು. ಅದು ಸಾಧ್ಯವಾಗುವವರೆಗೂ ನಾವು ಗಿರಣಿಗಳನ್ನು ನಂಬಿಕೊಂ ಡೇ ಇರಬೇಕೆಂಬುದು ಸ್ಪಷ್ಟವಾಗಿದ್ದಿತು. ಈ ದೇಶದ ನೂಲುವ ಗಿರಣಿಗಳ ಪ್ರತಿನಿಧಿಗಳಾಗಿದ್ದು ನಾವೇನೂ ದೇಶಸೇವೆ ಮಾಡ ಲಾರವೆಂದು ನಮಗೆ ತೋರಿತು

ಪುನಃ ನಮಗಿದಿರಾದ ತೊಡಕುಗಳಿಗೆ ಕೊನೆಯೇ ಇರಲಿಲ್ಲ. ನೂಲಿಗೆಯನ್ನು ಕಲಿತುಕೊಳ್ಳಲು ನಮಗೆ ರಾಟೆಯೂ ದೊರಕ ಲಿಲ್ಲ, ಕಲಿಸುವವರೂ ಸಿಕ್ಕಲಿಲ್ಲ. ಆಶ್ರಮದಲ್ಲಿ ನಾವು ಕೆಲವು ರಾಟಗಳನ್ನು ಉಪಯೋಗಿಸುತ್ತಿದ್ದೆವು. ಆದರೆ ಇವುಗಳನ್ನು ಚರಖಗಳಾಗಿ ಉಪಯೋಗಿಸಲು ಸಾಧ್ಯವೆಂಬ ಕಲ್ಪನೆಯೇ ನಮ ಗಿರಲಿಲ್ಲ ಒಂದು ದಿನ ಕಾಳಿದಾಸ ಝಾವೇರಿಯವರು ನೂಲು ವದು ಹೇಗೆಂದು ತೋರಿಸಿಕೊಡುವ ಹೆಂಗಸೊಬ್ಬಳನ್ನು ತಾವು ಕಂಡುಹಿಡಿದೆವೆಂದು ನಮಗೆ ತಿಳಿಸಿದರು. ಹೊಸ ವಿಷಯಗಳನ್ನು ಸುಲಭವಾಗಿ ಕಲಿತುಕೊಳ್ಳುವದರಲ್ಲಿ ಪ್ರವೀಣರೆಂದು ಗೊತ್ತಿದ್ದ ಒಬ್ಬರನ್ನು ನಮ್ಮ ಆಶ್ರಮದಿಂದ ಆಕೆಯ ಬಳಿಗೆ ಕಳಿಸಿದೆವು. ಆದರೆ ಅವರು ಕೂಡ ಈ ಕಲೆಯ ಮರ್ಮವನ್ನು ಕೈವಶಮಾಡಿ ಕೊಳ್ಳದೆ ಹಿಂತಿರುಗಿದರು

ಹೀಗೆಯೇ ಕಾಲ ಕಳೆಯಿತು. ಇದರ ಜೊತೆಗೆ ನನ್ನ ಆತು ರವೂ ಹೆಚ್ಚುತ್ತಾ ಬಂದಿತು. ಅಕಸ್ಮಾತ್ ಆಶ್ರಮಕ್ಕೆ ಬಂದವ

ರನ್ನೆಲ್ಲಾ, ಅವರಿಗೆ ಈ ವಿಷಯವಾಗಿ ಏನಾದರೂ ತಿಳಿದಿರಬಹುದೆಂದು ತೋರಿದರೆ, ನೂಲಿಗೆಯನ್ನು ಕುರಿತು ಪ್ರಶ್ನಿಸುತ್ತಿದ್ದೆನು. ಆದರೆ ಈ ಕಲೆಯನ್ನು ಹೆಂಗಸರು ಮಾತ್ರ ಅಭ್ಯಾಸ ಮಾಡಿದ್ದುದರಿಂದಲೂ ಅವರಲ್ಲಿ ಕೂಡ ಅದು ತೀರ ಅಂತಿಮಾವಸ್ಥೆಗೆ ಬಂದಿದ್ದುದರಿಂದಲೂ ದೇಶದ ಯಾವ ಮೂಲೆಯಲ್ಲಾದರೂ ಈ ಕೈಗಾರಿಕೆಯನ್ನರಿತ ಒಬ್ಬಿಬ್ಬರಿದ್ದರೆ ಅಂತಹವರನ್ನು ಪತ್ತೆ ಮಾಡುವದಕ್ಕೆ ಹೆಂಗಸರೇ ಬೇಕಾಗಿದ್ದಿತು

೧೯೧೭ ರಲ್ಲಿ ಭರೋಚದಲ್ಲಿ ನಡದ ಶಿಕ್ಷಣ ಪರಿಷತ್ತಿಗೆ ಅಧ್ಯಕ್ಷನಾಗಲು ನನ್ನ ಮಿತ್ರರು ನನ್ನನ್ನು ಅಲ್ಲಿಗೆ ಕರೆದುಕೊಂಡು ಹೋದರು ಅಲ್ಲಿಯೇ ನಾನು ಆ ಮಹಾಸಾಹಸಿಯಾದ ಗಂಗಾಬಾಯೀ ಮಜಮುನದಾರರನ್ನು ಕಂಡುಹಿಡಿದುದು ಆಕೆಯು ವಿಧವೆ ಆದರೂ ಅವರ ಸಾಹಸಕ್ಕೆ ಎಲ್ಲೆಯಿರಲಿಲ್ಲ. ಸಾಮಾನ್ಯ ಎಣಿಕೆಯಂತೆ ಅವರು ಅಷ್ಟೇನೂ ಶಿಕ್ಷಿತರಲ್ಲದಿದ್ದರೂ ಧೈರ್ಯದಲ್ಲಿಯೂ ತಿಳಿವಳಿಕೆಯಲ್ಲಿಯೂ ಆಕಯು ನಮ್ಮ ಸುಶಿಕ್ಷಿತ ಸ್ತ್ರೀಯರನ್ನು ಬಹುಮಟ್ಟಿಗ ಮಿರಿಸಿದ್ದರು ಅವರು ಆಗಲೇ ಅಸ್ಪೃಶ್ಯತಾಕಳಂಕವನ್ನು ತೊಲಗಿಸಿದ್ದರಲ್ಲದೆ ನಿರ್ಭಯವಾಗಿ ಅಸ್ಪೃಶ್ಯರೊಡನೆ ಕಲೆತು ಅವರಿಗೆ ಸೇವೆಗೈದಿದ್ದರು ಆಕಗೆ ಸ್ವಂತ ಆಸ್ತಿಯಿದ್ದಿತು. ಅವರಿಗೆ ಬೇಕಾದುದು ಅತ್ಯಲ್ಪ ಅವರು ಸುಗರಿತ ಶರೀರವುಳ್ಳವರಾಗಿದ್ದು ಕಾವಲಿಲ್ಲದೆ ಎಲ್ಲೆಲ್ಲಿಯೂ ಸಂಚಾರ ಮಾಡುತ್ತಿದ್ದರು. ಕುದುರೆಯ ಸವಾರಿಯೆಂದರೆ ಆಕೆಗೆ ಸಾಮಾನ್ಯ ಗೋಧರದಲ್ಲಿ ನಡೆದ ಪರಿಷತ್ತಿನಲ್ಲಿ ನನಗೆ ಈಕೆಯೊಡನೆ ಇನ್ನೂ ಗಾಢಪರಿಚಯವಾಯಿತು. ಚರಖದ ಸಂಬಂಧವಾಗಿ ನನ್ನ ದುಃಖವನ್ನು ಇವರಿಗೆ ಹೇಳಿಕೊಂಡೆನು. ತಾವು ರಾಟೆಯನ್ನು ಪರಿಶೋಧಿಸಲು ನಿರಂತರ ಪ್ರಯತ್ನಮಾಡುವದಾಗಿ ಹೇಳಿ ಆಕೆಯು ನನ್ನ ಭಾರವನ್ನು ಕಡಿಮೆ ಮಾಡಿದರು.



೪೧

# ಮಹಾಸಭಾಪ್ರವೇಶ

ಅಮೃತಸರದ ಮಹಾಸಭೆಯ ಕಾರ್ಯಕಲಾಪಗಳಲ್ಲಿ ಭಾಗಿಯಾದುದರಿಂದ ನಾನು ವಸ್ತುತಃ ಮಹಾಸಭೆಯ ರಾಜಕಾರಣದಲ್ಲಿ ಪ್ರವೇಶಿಸಿದೆನೆಂದು ನಾನು ಎಣಿಸುವದಿಲ್ಲ ಅದರ ಮುಂಚಿನ ಮಹಾಸಭಾಧಿವೇಶನಗಳಿಗೆ ನಾನು ಹೋದುದು ಪ್ರಾಯಶಃ ವರ್ಷೇ ವರ್ಷೇ ಮಹಾಸಭೆಗೆ ನನ್ನ ಭಕ್ತಿಪ್ರದರ್ಶನ ಮಾಡಿದಂತಾಗುತ್ತಿದ್ದಿತೇ ಹೊರತು ಇನ್ನೇನೂ ಅಲ್ಲ. ಈ ಸಂದರ್ಭಗಳಲ್ಲಿ ನನ್ನ ಪಾಲಿನದು ಕೇವಲ ಸಿಪಾಯಿಯ ಕೆಲಸವಲ್ಲದೆ ಹೆಚ್ಚಿನದೇನಾದರೂ ಉಂಟೆಂದು ನನಗೆ ಎಂದೂ ತೋರಲಿಲ್ಲ. ನಾನು ಇದಕ್ಕೆ ಹೆಚ್ಚಾಗಿ ಆಸಿಸಲೂ ಇಲ್ಲ

ನನಗೆ ಒಂದೆರಡು ವಿಷಯಗಳಲ್ಲಿ ತಕ್ಕಮಟ್ಟಿಗೆ ವಿಶೇಷ ಯೋಗ್ಯತೆಯಿದ್ದಿತೆಂದೂ ಅದರಿಂದ ಮಹಾಸಭೆಗೆ ಲಾಭವಾಗಬಹುದೆಂದೂ ಅಮೃತಸರದ ಮಹಾಸಭೆಯಲ್ಲಿ ನನ್ನ ಅನುಭವಕ್ಕೆ ಬಂದಿದ್ದಿತು. ಪಂಜಾಬಿನ ವಿಮರ್ಶೆಯನ್ನು ಕುರಿತು ನಾನು ಮಾಡಿದ ಕಾರ್ಯದಿಂದ ಲೋಕಮಾನ್ಯರೂ ದೇಶಬಂಧುಗಳೂ ಪಂಡಿತ ಮೋತೀಲಾಲರೂ ಪ್ರಸನ್ನರಾಗಿದ್ದರೆಂಬುದು ಆಗಲೇ ನನ್ನ ದೃಷ್ಟಿಗೆ ಬಿದ್ದಿದ್ದಿತು ಇವರು ಆಗಾಗ ಒಟ್ಟುಗೂಡುತ್ತಿದ್ದರು. ಇಂತಹ ಕೂಟಗಳಿಗೆ ನನ್ನನ್ನೂ ಕರೆದರು. ಈ ಕೂಟಗಳಲ್ಲಿಯೇ ವಿಷಯನಿರ್ಧಾರಣಾಸಮಿತಿಯಲ್ಲೊದಗುವ ಪ್ರಶ್ನೆಗಳಿಗೆ ಉತ್ತರವನ್ನು ನಿರ್ಧರಿಸುತ್ತಿದ್ದರು. ಮುಖಂಡರುಗಳಿಗೆ ವಿಶೇಷ ಭರವಸೆಯಿದ್ದ ಮತ್ತು ಅವರಿಗೆ ಸಹಾಯಕರಾಗುವ ಜನರನ್ನು ಮಾತ್ರ

ಈ ಕೂಟಗಳಿಗೆ ಕರೆಯುತ್ತಿದ್ದರು. ಒಮ್ಮೊಮ್ಮೆ 'ಕರೆಯದ ಕಲ್ಲಪ್ಪ'ನವರೂ ಹೇಗೋ ಒಳಗೆ ಸೇರಿಕೊಳ್ಳುತ್ತಿದ್ದರು.

ಮುಂದಿನ ವರ್ಷಕ್ಕೆ ಸಂಬಂಧಪಟ್ಟ ಎರಡು ವಿಷಯಗಳಲ್ಲಿ ನನಗೆ ಕುತೂಹಲವಿದ್ದಿತು. ಏಕೆಂದರೆ ಅವುಗಳ ಸಂಬಂಧವಾಗಿ ನನಗೆ ತಕ್ಕಮಟ್ಟಿಗೆ ವಿಶೇಷ ಯೋಗ್ಯತೆಯಿದ್ದಿತು ಜಲಿಯಾನ್ ವಾಲಾ ಹತ್ಯಾಕಾಂಡದ ಸ್ಮಾರಕವು ಇವುಗಳಲ್ಲೊಂದು ಮಹಾ ಸಭೆಯು ಇಂತಹ ಸ್ಮಾರಕವನ್ನು ಕಟ್ಟಬೇಕೆಂಬ ಠರಾವಿಗೆ ಅತ್ಯು ತ್ಸಾಹದಿಂದ ಸಮ್ಮತಿಸಿದ್ದಿತು ಇದಕ್ಕಾಗಿ ಐದು ಲಕ್ಷ ರೂಪಾ ಯಿಗಳನ್ನು ಕೂಡಿಸಬೇಕಾಗಿದ್ದಿತು. ನನ್ನನ್ನೊಬ್ಬ ಧರ್ಮದರ್ಶಿ ಯಾಗಿ ನೇಮಿಸಿದರು. ಸಾರ್ವಜನಿಕ ಕಾರ್ಯಗಳಿಗಾಗಿ ತಿರುಪೆ ಬೇಡುವವರಲ್ಲಿ ಮಾಲವೀಯರು ಭಿಕ್ಷುಕಚಕ್ರವರ್ತಿಯೆಂಬ ಬಿರುದನ್ನು ಸಂಪಾದಿಸಿದ್ದರು. ಆದರ ಈ ವಿಷಯದಲ್ಲಿ ನಾನು ಅವರಿಗಿಂತ ಬಹು ಕಡಿಮೆಯಲ್ಲವೆಂದು ನನಗೆ ಗೊತ್ತಿದ್ದಿತು ನನ್ನ ಈ ಯೋಗ್ಯತೆಯನ್ನು ನಾನು ಕಂಡುಹಿಡಿದುದು ದಕ್ಷಿಣ ಆಫ್ರಿಕ ದಲ್ಲಿ ಹಿಂದುಸ್ಥಾನದ ರಾಜಮಹಾರಾಜರುಗಳಿಂದ ಸಹ ಸಾವಿರು ರೂಪಾಯಿಗಳನ್ನು ವಸೂಲು ಮಾಡಲು ಮಾಲವೀಯ ರಲ್ಲಿದ್ದ ಅನನ್ಯ ಇಂದ್ರುಜಾಲವು ನನ್ನಲ್ಲಿರಲಿಲ್ಲ ಆದರೆ ಜಲಿಯಾನ್ ವಾಲಾ ಸ್ಮಾರಕನಿಧಿಗೆ ರಾಜಮಹಾರಾಜರುಗಳ ಬಳಿಗೆ ಹೋಗ ಬೇಕಾದ ಪ್ರಮೇಯವೇನೂ ಇಲ್ಲವಂಬುದು ನನಗೆ ಗೊತ್ತಿದ್ದಿತು. ಹೀಗೆ ನಾನು ನಿರೀಕ್ಷಿಸಿದ್ದಂತೆ ಧನಸಂಚಯದ ಮುಖ್ಯ ಜವಾಬ್ದಾ ರಿಯು ನನ್ನ ಮೇಲೆ ಬಿದ್ದಿತು. ಮುಂಬಯಿಯ ಉದಾರ ನಾಗರಿ ಕರು ಕೈತುಂಬ ಹಣ ಕೊಟ್ಟರು. ಈಗ ಈ ಸ್ಮಾರಕದ ಹೆಸರಿನಲ್ಲಿ ಬ್ಯಾಂಕಿನಲ್ಲಿರುವ ಹಣವೇನೂ ಅಲ್ಪವಾಗಿಲ್ಲ. ಆದರೆ ಇಂದು ನಾಡಿನಿದಿರಿಗಿರುವ ಸಮಸ್ಯೆಯೇನೆಂದರೆ, ಹಿಂದೂ, ಮುಸಲ್ಮಾನ ಸಿಖ್ ಜನರ ಸಮ್ಮಿಳಿತ ರಕ್ತದಿಂದ ಪವಿತ್ರವಾದ ಆ ಭೂಮಿಯ ಮೇಲೆ ಯಾವ ರೀತಿಯ ಕಟ್ಟಡವನ್ನು ನಿಲ್ಲಿಸಬೇಕೆಂಬುದು ಈ ಮೂರು ಕೋಮುಗಳು ವೈರತ್ವದಿಂದಲೂ ಪ್ರೇಮದಿಂದಲೂ

ಒಂದುಗೂಡುವದರ ಬದಲು ಹೊರಗೆ ಕಾಣುವ ಮಟ್ಟಿಗೆ ಪರಸ್ಪರ ಹೊಡೆದಾಟದಲ್ಲಿ ಮಗ್ನವಾಗಿವೆ. ಈ ಮಧ್ಯೆ ಜನಾಂಗವು ನಿಧಿಯನ್ನು ಹೇಗೆ ಉಪಯೋಗಿಸಬೇಕೆಂಬುದು ತೋಚದೆ ಸುಮ್ಮನಿದೆ.

ನನಗೆ ವಿಶೇಷ ಯೋಗ್ಯತೆಯಿದ್ದ ಎರಡನೆಯ ವಿಷಯವೇನೆಂದರೆ, ಬರೆವಣಿಗೆ. ಯಾವ ವಿಷಯವನ್ನಾಗಲಿ ಸಂಕ್ಷೇಪವಾಗಿ ವ್ಯಕ್ತಗೊಳಿಸುವ ಶಕ್ತಿಯು ನನ್ನಲ್ಲಿದ್ದಿತೆಂಬುದು ಮಹಾಸಭೆಯ ಮುಖಂಡರ ಗಮನಕ್ಕೆ ಬಂದಿದ್ದಿತು ಈ ಗುಣವನ್ನು ನಾನು ಚಿರಾಭ್ಯಾಸದಿಂದ ಸಂಪಾದಿಸಿದ್ದೆನು ಆಗ ಮಹಾಸಭೆಗಿದ್ದ ಅಂಗವಿಧಾನವು ಗೋಖಲೆಯವರು ನಿರ್ಮಿಸಿದುದಾಗಿದ್ದಿತು. ಅವರು ರಚಿಸಿದ ಹಲಕೆಲವು ಸೂತ್ರಗಳಮೇಲೆ ಮಹಾಸಭಯ ಯಂತ್ರವು ನಡೆಯುತ್ತಿದ್ದಿತು. ಈ ಸೂತ್ರಗಳು ಉದ್ಭವಿಸಿದ ಸಕುತೂಹಲ ಇತಿಹಾಸವನ್ನು ನಾನು ಗೋಖಲೆಯವರ ಮುಖದಿಂದಲೇ ಕೇಳಿದೆನು. ಆದರೆ ಮಹಾಸಭೆಯ ಕಾರ್ಯಕಲಾಪವು ವರ್ಷೇ ವರ್ಷೇ ಹೆಚ್ಚುತ್ತಿದ್ದುದರಿಂದ ಈ ಸೂತ್ರಗಳು ಅಸಮರ್ಪಕವಾಗಿಬಿಟ್ಟಿದ್ದುವೆಂದು ಎಲ್ಲರಿಗೂ ತೋರುತ್ತಿದ್ದಿತು ಈ ಪ್ರಶ್ನೆಯು ಪ್ರತಿವರ್ಷವೂ ಚರ್ಚೆಗೆ ಬರುತ್ತಿದ್ದಿತು ಆಗ ಮಹಾಸಭೆಯ ಅಧಿವೇಶನಗಳಿಗೆ ಮಧ್ಯೆ ಕೆಲಸ ಮಾಡುವ ವ್ಯವಸ್ಥೆಯಾಗಲಿ ವರ್ಷದ ಮಧ್ಯೆ ಸಂಭವಿಸಬಹುದಾದ ಅನಿರೀಕ್ಷಿತ ಸನ್ನಿವೇಶಗಳಿಗೆ ತಕ್ಕ ಕಾರ್ಯಕ್ರಮವನ್ನು ನಿರ್ಧರಿಸುವ ಏರ್ಪಾಟಾಗಲಿ ಇರಲಿಲ್ಲ ಆಗ ಜಾರಿಯಲ್ಲಿದ್ದ ನಿಯಮಗಳ ಪ್ರಕಾರ ಮೂರು ಮಂದಿ ಕಾರ್ಯದರ್ಶಿಗಳಿಗೆ ಸ್ಥಾನವಿದ್ದಿತು ಇವರಲ್ಲಿಯೂ ಒಬ್ಬರೇ ಒಬ್ಬರು ನಿಜವಾಗಿ ಕೆಲಸ ನಡೆಸುತ್ತಿದ್ದರು ಈ ಒಬ್ಬರು ಕೂಡ ವರ್ಷವೆಲ್ಲಾ ಕೆಲಸ ಮಾಡುವವರಾಗಿರಲಿಲ್ಲ ಅವರು ಇನ್ನಾರ ಸಹಾಯವೂ ಇಲ್ಲದೆ ಮಹಾಸಭೆಯ ಕಚೇರಿಯನ್ನು ನಡೆಸುವದಾಗಲಿ ಮುಂದಿನ ಯೋಚನೆ ಮಾಡುವದಾಗಲಿ ಅಥವಾ ಹಿಂದೆ ಮಹಾಸಭೆಯು ಹೊತ್ತುಕೊಂಡ ಜವಾಬ್ದಾರಿಯನ್ನು ವರ್ತಮಾನ ಸಂವತ್ಸರದಲ್ಲಿ

ನಿರ್ವಹಿಸುವದಾಗಲಿ ಹೇಗೆ ಸಾಧ್ಯ? ಆದುದರಿಂದ ಆ ವರ್ಷ ಈ ಪ್ರಶ್ನೆಗೆ ಇನ್ನೂ ಹೆಚ್ಚಿನ ಮಹತ್ವವೊದಗುವುದೆಂದು ಎಲ್ಲರೂ ನಿರೀಕ್ಷಿಸಿದರು ಸಾರ್ವಜನಿಕ ವಿಚಾರಗಳನ್ನು ಚರ್ಚಿಸಲು ಮಹಾಸಭೆಯು ಅತ್ಯಗಾಧವಾಗಿದ್ದಿತು ಮಹಾಸಭೆಯ ಸದಸ್ಯರಿಷ್ಟು ಮಂದಿಯೆಂದಾಗಲಿ ಇಂತಿಂತಹ ಪ್ರಾಂತವು ಇಷ್ಟಿಷ್ಟು ಮಂದಿ ಪ್ರತಿನಿಧಿಗಳನ್ನು ಕಳಿಸಬಹುದೆಂದಾಗಲಿ ಮಿತಿಯಿಟ್ಟಿರಲಿಲ್ಲ ಹೀಗೆ ಆಗಿದ್ದ ಅನಾಯಕ ಪರಿಸ್ಥಿತಿಯನ್ನು ಉತ್ತಮಗೊಳಿಸಲು ಯಾವ ರೀತಿಯ ಏರ್ಪಾಡನ್ನಾದರೂ ಮಾಡುವದು ಅತ್ಯಗತ್ಯವೆಂದು ಎಲ್ಲರಿಗೂ ತೋರುತ್ತಿದ್ದಿತು ನಾನು ಮಹಾಸಭೆಯ ವ್ಯವಸ್ಥಾಕ್ರಮವನ್ನು ರಚಿಸಲು ಒಪ್ಪಿಕೊಂಡೆನು. ಒಂದು ಷರತ್ತಿನ ಮೇಲೆ ಅದೇನೆಂದರೆ, ಜನರ ಮೇಲೆ ಅತ್ಯಂತ ಪ್ರಭಾವವುಳ್ಳ ನಾಯಕರಿಬ್ಬರು, ಲೋಕಮಾನ್ಯರು ಮತ್ತು ದೇಶಬಂಧುಗಳು, ಎಂಬುದನ್ನು ನಾನು ಕಂಡೆನು ಜನತೆಯ ಪರವಾಗಿ ಅವರಿಬ್ಬರೂ ಅಂಗವಿಧಾನರಚನಾಸಮಿತಿಯಲ್ಲಿ ನನ್ನೊಡನೆ ಸದಸ್ಯರಾಗಬೇಕೆಂದು ನಾನು ಕೇಳಿದೆನು ಆದರೆ ಅವರಿಬ್ಬರೂ ವ್ಯಕ್ತಿತಃ ರಚನಾಕಾರ್ಯದಲ್ಲಿ ಭಾಗಿಗಳಾಗುವದು ಅಸಾಧ್ಯವೆಂದು ಸ್ಪಷ್ಟವಾಗಿದ್ದುದರಿಂದ ಅವರ ಬದಲು ಅವರ ನಂಬಿಕೆಗೆ ಪಾತ್ರರಾದ ಇಬ್ಬರನ್ನು ನನ್ನೊಡನೆ ಆ ಸಮಿತಿಗೆ ನೇಮಿಸಬೇಕೆಂದೂ ಸಮಿತಿಯಲ್ಲಿ ಈ ಮೂರು ಮಂದಿ ಮಾತ್ರ ಇರಬೇಕೆಂದೂ ನಾನು ಸೂಚಿಸಿದೆನು ಇದಕ್ಕೆ ದಿವಂ ಲೋಕಮಾನ್ಯರೂ ದಿವಂ ದೇಶಬಂಧುಗಳೂ ಒಪ್ಪಿದರು ಲೋಕಮಾನ್ಯರು ತಮ್ಮ ಪರವಾಗಿ ಶ್ರೀ. ಕೇಳ್ಕರರನ್ನೂ ದೇಶಬಂಧುಗಳು ಐ ಬಿ ಸೇನರನ್ನೂ ನೇಮಿಸಿದರು ಸಮಿತಿಯ ಸದಸ್ಯರು ಒಂದು ಬಾರಿಯೂ ಒಟ್ಟುಗೂಡಲಾಗಲಿಲ್ಲ. ಆದರೆ ಪತ್ರವ್ಯವಹಾರದ ಮೂಲಕ ನಾವು ಪರಸ್ಪರ ಅಭಿಪ್ರಾಯಗಳನ್ನು ತಿಳಿದುಕೊಳ್ಳಲು ಸಾಧ್ಯವಾಯಿತು. ಕಡೆಗೆ ನಾವು ಒಮ್ಮತದ ವರದಿಯನ್ನು ಅರ್ಪಿಸಿದೆವು ನನಗೆ ಈ ವ್ಯವಸ್ಥಾಕ್ರಮದಲ್ಲಿ ಸ್ವಲ್ಪಮಟ್ಟಿಗೆ ಅಭಿಮಾನವುಂಟು. ನಾವು ಅದನ್ನು ಸಂಪೂರ್ಣವಾಗಿ ಕಾರ್ಯರಂಗಕ್ಕಿಳಿಸಿದರೆ ಹಾಗೆ ಮಾಡಿದ

ವೆಂಬುದರಿಂದಲೇ ನಮಗೆ ಸ್ವರಾಜ್ಯವು ಲಭಿಸುವದೆಂದು ನಾನು ಅಭಿಪ್ರಾಯಪಡುತ್ತೇನೆ. ಈ ಜವಾಬ್ದಾರಿಯನ್ನು ಹೊತ್ತುಕೊಂಡಂದಿನಿಂದ ನಾನು ವಾಸ್ತವಿಕವಾಗಿ ಮಹಾಸಭೆಯನ್ನು ಪ್ರವೇಶಿಸಿದೆನೆಂದು ಹೇಳಬಹುದು.



# ೪೨

## ಲಭಿಸಿತು ಕಡೆಗೆ!

ಅನೇಕ ದಿನ ಗುಜರಾತಿನಲ್ಲಿ ಅಲೆದ ಮೇಲೆ ಬರೋಡಾ ಸಂಸ್ಥಾನದಲ್ಲಿರುವ ವಿಜಾಪುರವೆಂಬ ಊರಿನಲ್ಲಿ ಗಂಗಾಬಾಯಿಗೆ ಕಟ್ಟಕಡೆಗೆ ಚರಖವು ದೊರಕಿತು ಅಲ್ಲಿ ಅನೇಕ ಜನರ ಬಳಿ ಚರಖಗಳಿದ್ದುವು; ಆದರೆ ಬಹುಕಾಲಕ್ಕೆ ಹಿಂದೆಯೇ ಅವರು ಅವುಗಳನ್ನು ಕಸವೆಂದು ಅಟ್ಟದ ಮೇಲೆಸೆದುಬಿಟ್ಟಿದ್ದರು ಯಾರಾದರೂ ತಮಗೆ ತಪ್ಪದೆ ಕ್ರಮವಾಗಿ ಹಂಜಿಗಳನ್ನೊದಗಿಸಿ ತಾವು ನೂತ ದಾರವನ್ನು ಕೊಳ್ಳುವದಾದರೆ ತಾವು ಪುನಃ ನೂಲಲು ಸಿದ್ಧರಾಗಿರುವೆವೆಂದು ಅವರು ಗಂಗಾಬಾಯಿಗೆ ಹೇಳಿದರು. ಈ ಸಂತೋಷದ ವೃತ್ತಾಂತವನ್ನು ಗಂಗಾಬಾಯಿಯು ನನಗೆ ತಿಳಿಸಿದರು ಹಂಜಿಗಳನ್ನೊದಗಿಸುವದು ಕಷ್ಟವಾದ ಕೆಲಸವೆಂದು ಕಂಡುಬಂದಿತು ನಾನು ಈ ಕಷ್ಟವನ್ನು ದಿವಂ ಉಮರ್ ಸುಬಾನಿಯವರಿಗೆ ತಿಳಿಸಲು ಅವರು ತಮ್ಮ ಗಿರಣಿಯಿಂದ ಹಂಜಿಗಳನ್ನು ಕಳಿಸಿಕೊಡುವೆವೆಂದು ಒಡನೆಯೇ ಮಾತುಕೊಟ್ಟು ಈ ಆತಂಕವನ್ನು ಪರಿಹರಿಸಿದರು. ಸುಬಾನಿಯವರಿಂದ ಬಂದ ಹಂಜಿಗಳನ್ನು ನಾನು ಗಂಗಾಬಾಯಿಗೆ ಕಳಿಸಿಕೊಟ್ಟೆನು ಅಲ್ಪಕಾಲದಲ್ಲಿಯೇ ನೂಲು ಬರತೊಡಗಿತು ಇದರ ಪ್ರವಾಹವು ಎಷ್ಟು ತ್ವರಿತವಾಗಿದ್ದಿತೆಂದರೆ ಅದನ್ನು ನಿರ್ವಹಿಸುವದೇ ಒಂದು ಸಮಸ್ಯೆಯಾಯಿತು

ಉಮರ್ ಸುಬಾನಿಯವರ ಔದಾರ್ಯವೇನೋ ಅಗಾಧವಾಗಿದ್ದಿತು. ಆದರೆ ಅದರಿಂದ ಮಿತಿಯಿಲ್ಲದೆ ಪ್ರಯೋಜನ ಪಡೆಯುವದು ಉಚಿತವಾಗಿರಲಿಲ್ಲ ಅವರಿಂದ ನಿರಂತರ ಹಂಜಿಗಳನ್ನು ತರಿಸಿಕೊಳ್ಳುವದರಿಂದ ನನಗೆ ಮನಸ್ಸಂಕೋಚಕ್ಕೆ ಕಾರಣವಾಯಿತು. ಅದೂ ಅಲ್ಲದೆ ಗಿರಣಿಯಲ್ಲಿ ತಯಾರಾದ ಹಂಜಿಗಳನ್ನು ಪಯೋಗಿಸುವದೇ ಮೊಟ್ಟಮೊದಲು ತಪ್ಪೆಂದು ನನಗೆ ಭಾಸವಾ

ಯಿತು ಗಿರಣಿಯ ಹಂಜಿಗಳನ್ನುಪಯೋಗಿಸಬಹುದಾದರೆ ಗಿರಣಿಯ ನೂಲನ್ನೇಕೆ ಉಪಯೋಗಿಸಕೂಡದು? ನಮ್ಮ ಪೂರ್ವಜರಿಗೆ ಯಾವ ಗಿರಣಿಯಿಂದಲೂ ಹಂಜಿಗಳು ದೊರಕುತ್ತಿರಲಿಲ್ಲ! ಹಾಗಾದರೆ ಅವರು ಹಂಜಿಗಳನ್ನು ಹೇಗೆ ಮಾಡುತ್ತಿದ್ದರು? ನನ್ನ ಮನಸ್ಸಿನಲ್ಲಿ ಈ ವಿಚಾರಗಳಿರಲು ಹಂಜಿಗಳನ್ನೊದಗಿಸಬಲ್ಲ ಪಿಂಜಾರರನ್ನು ಹುಡುಕಬೇಕೆಂದು ನಾನು ಗಂಗಾಬಾಯಿಗೆ ಸೂಚಿಸಿದೆನು ಅವರು ಭರವಸೆಯಿಂದ ಆ ಕಾರ್ಯವನ್ನು ಕೈಗೊಂಡರು ಹತ್ತಿಯನ್ನು ಎಕ್ಕಬಲ್ಲ ಪಿಂಜಾರನೊಬ್ಬನನ್ನು ಗೊತ್ತುಮಾಡಿದರು. ಅವನು ತಿಂಗಳಿಗೆ ಮೂವತ್ತೈದು ರೂಪಾಯಿಯನ್ನೋ ಅಥವಾ ಇನ್ನೂ ಹೆಚ್ಚು ಸಂಬಳವನ್ನೋ ಕೇಳಿದನು ನಾನು ಆ ಕಾಲದಲ್ಲಿ ಎಷ್ಟು ಬೆಲೆಯನ್ನೂ ಹೆಚ್ಚೆಂದೆಣಿಸಲಿಲ್ಲ ಎಕ್ಕಿದ ಹತ್ತಿಯಿಂದ ಹಂಜಿ ಮಾಡುವದನ್ನು ಆಕೆಯು ಕೆಲವು ಹುಡುಗರಿಗೆ ಕಲಿಸಿಕೊಟ್ಟರು ನಾನು ಮುಂಬಯಿಯಲ್ಲಿ ಹತ್ತಿಗಾಗಿ ಭಿಕ್ಷೆ ಬೇಡಿದೆನು ಶ್ರೀ ಯಶವಂತ ಪ್ರಸಾದ ದೇಸಾಯಿಯವರು ಒಡನೆಯೇ ಈ ಭಾರವನ್ನು ಹೊತ್ತುಕೊಂಡರು ಹೀಗೆ ಗಂಗಾಬಾಯಿಯವರ ಸಾಹಸವು ನಿರೀಕ್ಷಣೆಗೆ ಮಿಗಿಲಾಗಿ ಪ್ರವರ್ಧಿಸಿತು ವಿಜಾಪುರದಲ್ಲಿ ನೂತ ನೂಲನ್ನು ನೆಯ್ಯಲು ಅವರು ಜಾಡರನ್ನು ಹುಡುಕಿದರು ಶೀಘ್ರದಲ್ಲಿಯೇ ವಿಜಾಪುರದ ಖಾದಿಯು ಪ್ರಸಿದ್ಧವಾಯಿತು

ಈ ಉದ್ಯಮಗಳೆಲ್ಲಾ ವಿಜಾಪುರದಲ್ಲಿ ನಡೆಯುತ್ತಿರಲು ಇತ್ತಕಡೆ ಆಶ್ರಮದಲ್ಲಿ ಚರಖವು ತ್ವರಿತಗತಿಯಿಂದ ಪ್ರಮುಖ ಸ್ಥಾನವನ್ನು ಪಡೆಯಿತು ತನಗೆ ಸಹಜವಾಗಿ ಯಂತ್ರನಿರ್ಮಾಣದಲ್ಲಿದ್ದ ಅದ್ಭುತ ಶಕ್ತಿಯನ್ನೆಲ್ಲಾ ಉಪಯೋಗಿಸಿ ಮಗನಲಾಲ ಗಾಂಧಿಯವರು ನೂಲುವ ರಾಟೆಯನ್ನು ಅನೇಕ ವಿಧವಾಗಿ ಉತ್ತಮಗೊಳಿಸಿದರು ರಾಟೆಗಳೂ ಅವುಗಳಿಗೆ ಸಹಾಯಕವಾದ ಇತರ ಸಾಮಾನುಗಳೂ ಆಶ್ರಮದಲ್ಲಿ ಸಿದ್ಧವಾಗ ತೊಡಗಿದುವು ಆಶ್ರಮದಲ್ಲಿ ಮೊಟ್ಟಮೊದಲು ತಯಾರಾದ ಖಾದಿಯ ಧಾನಿಗೆ ಗಜಕ್ಕೆ

೧೭ ಆಣೆಯಂತೆ ಬೆಲೆಬಿದ್ದಿತು ಈ ಅತಿ ಒರಟಾದ ಖಾದಿಯನ್ನು ಆ ಬೆಲೆಗೆ ಕೊಂಡುಕೊಳ್ಳಬೇಕೆಂದು ನಾನು ಮಿತ್ರರಿಗೆ ಹೇಳಲು ಹಿಂದೆಗೆಯಲಿಲ್ಲ ಅವರೂ ಸಂತೋಷದಿಂದ ಅಷ್ಟು ಬೆಲೆಯನ್ನು ಕೊಟ್ಟರು

ನಾನು ಮುಂಬಯಿಯಲ್ಲಿ ಕಾಹಿಲೆ ಮಲಗಿದೆನು ಆದರೂ ನನಗೆ ಅಲ್ಲಿ ರಾಟೆಯನ್ನು ಕಂಡುಹಿಡಿಯುವದಕ್ಕೆ ತಕ್ಕಷ್ಟು ಚೈತನ್ಯವಿದ್ದಿತು ಕಟ್ಟಕಡೆಗೆ ಇಬ್ಬರು ನೂಲಿಗರು ನನ್ನ ದೃಷ್ಟಿಗೆ ಬಿದ್ದರು ಅವರು ಒಂದು ಸೇರು (ಎಂದರೆ ೨೮ ತೊಲ, ಅಥವಾ ಸುಮಾರು ಮುಕ್ಕಾಲು ಪೌಂಡು) ನೂಲಿಗೆ ಒಂದು ರೂಪಾಯಿ ಬೆಲೆ ತೆಗದುಕೊಂಡರು ಆಗ ನನಗೆ ಖಾದಿಯ ಅರ್ಥಶಾಸ್ತ್ರವು ತಿಳಿದಿರಲಿಲ್ಲ ಆಗ ಕೈನೂಲನ್ನು ಪಡೆಯಲು ಎಷ್ಟು ಬೆಲೆಯಾಗಲಿ ಹೆಚ್ಚೆಂದು ನಾನು ಎಣಿಸುತ್ತಿರಲಿಲ್ಲ ವಿಜಾಪುರದಲ್ಲಿ ಕೊಡುತ್ತಿದ್ದ ಬೆಲೆಯನ್ನೂ ಈ ಬೆಲೆಯನ್ನೂ ಹೋಲಿಸಿ ನೋಡಲು ನನ್ನನ್ನು ಮೋಸಗೊಳಿಸುತ್ತಿದ್ದರೆಂದು ನನಗೆ ಗೊತ್ತಾಯಿತು ಆ ನೂಲಿಗರು ತಮ್ಮ ದರವನ್ನು ಕಡಿಮೆ ಮಾಡಲು ಒಪ್ಪಲಿಲ್ಲ ಆದುದರಿಂದ ನಾನು ಅವರನ್ನು ಬಿಟ್ಟುಬಿಡಬೇಕಾಯಿತು ಆದರೆ ಅವರಿಂದ ಉಪಯೋಗವಿಲ್ಲದೆ ಹೋಗಲಿಲ್ಲ ಅವರು ಶ್ರೀಮತಿಗಳಾದ ಅವಂತಿಕಾಬಾಯಿ, ರಮಾಬಾಯಿ ಕಾಮದಾರ್, ಶ್ರೀ ಶಂಕರಲಾಲ್ ಬ್ಯಾಂಕರ ತಾಯಿ ಮತ್ತು ಶ್ರೀಮತೀ ವಸುಮತೀಬಾಯೀ, ಇವರುಗಳಿಗೆ ನೂಲಿಗೆಯನ್ನು ಕಲಿಸಿಕೊಟ್ಟರು ರಾಟೆಯು ನನ್ನ ಕೋಣೆಯಲ್ಲಿ ಆನಂದದಿಂದ ಹಾಡತೊಡಗಿತು ನಾನು ಪುನಃ ಆರೋಗ್ಯಸ್ಥಿತಿಗೆ ಬರಲು ಅದರ ಮಧುರ ಸಂಗೀತವು ಮಾಡಿದ ಸಹಾಯವೇನೂ ಕಡಿಮೆಯಲ್ಲವೆಂದು ಹೇಳಿದರೆ ಅದು ಅತ್ಯುಕ್ತಿಯಲ್ಲ ಅದರ ಪರಿಣಾಮವು ಶಾರೀರಿಕವಾಗಿದ್ದುದಕ್ಕಿಂತ ಹೆಚ್ಚಾಗಿ ಮಾನಸಿಕವಾಗಿದ್ದಿತೆಂದು ನಾನು ಒಪ್ಪಿಕೊಳ್ಳುತ್ತೇನೆ ಆದರೆ ಇದರಿಂದ ಮನುಷ್ಯನ ಶರೀರದ ಮೇಲೆ ಮಾನಸಿಕ ಪರಿಣಾಮದ ಪ್ರಭಾವವೆಷ್ಟೆಂಬುದೇ ವ್ಯಕ್ತವಾಗುತ್ತದೆ ನಾನೂ

ರಾಟಿಗೆ ಕೈಹಾಕಿದೆನು ಆದರ ಆಗೇನೂ ಹೆಚ್ಚು ಕೆಲಸ ಮಾಡಲಿಲ್ಲ

ಪುನಃ ಮುಂಬಯಿಯಲ್ಲಿ ಕೂಡ ಅದೇ ಹಳೆಯ ಸಮಸ್ಯೆಯೇ—ಕೈಯಲ್ಲಿ ಮಾಡಿದ ಹಂಜಿಗಳನ್ನು ಸಂಪಾದಿಸುವದು—ಒದಗಿತು ಪ್ರತಿದಿನವೂ ಒಬ್ಬ ಪಿಂಜಾರನು ಬಿಲ್ಲನ್ನು 'ಠ್ಯಂ' ಎಂದು ಸದ್ದುಮಾಡುತ್ತಾ ಶ್ರೀ ರೇವಾಶಂಕರ ಜೌಹರಿಯವರ ಮನೆಯ ಮುಂದೆ ಹೋಗುತ್ತಿದ್ದನು ನಾನು ಅವನನ್ನು ಕರೆಸಿ ವಿಚಾರಿಸಲು ಅವನು ಹಾಸಿಗೆ ತುಂಬಲು ಹತ್ತಿಯನ್ನು ಎಕ್ಕುವದಾಗಿ ತಿಳಿಯಬಂದಿತು ಹಂಜಿ ಮಾಡುವದಕ್ಕಾಗಿ ಹತ್ತಿಯನ್ನು ಎಕ್ಕಲು ಅವನು ಒಪ್ಪಿದನು ಅವನು ಹೇಳಿದ ಕೂಲಿಯೇನೋ ಬಹು ಹೆಚ್ಚಾಗಿದ್ದಿತು ಆದರೂ ನಾನು ಅದನ್ನು ಕೊಟ್ಟನು ಹೀಗ ಮಾಡಿದ ನೂಲನ್ನು ಪವಿತ್ರ ಏಕಾದಶಿಯ ಪೂಜೆಗೆ ಗೆಜ್ಜೆವಸ್ತ್ರಗಳಿಗಾಗಿ ನಾನು ನನ್ನ ವೈಷ್ಣವ ಮಿತ್ರರಿಗೆ ಕೊಟ್ಟೆನು ಶ್ರೀ ಶಿವಜಿಯವರು ಮುಂಬಯಿಯಲ್ಲೊಂದು ನೂಲುವ ವರ್ಗವನ್ನು ಆರಂಭಿಸಿದರು ಈ ಪ್ರಯೋಗಗಳಿಗಲ್ಲಾ ಎಷ್ಟೋ ಹಣ ಖರ್ಚಾಯಿತು ಆದರೆ ಇದೆಲ್ಲವನ್ನೂ ಖಾದಿಯಲ್ಲಿ ವಿಶ್ವಾಸವುಳ್ಳ ದೇಶಭಕ್ತರಾದ ಮಿತ್ರರು ಸಂತೋಷದಿಂದ ವಹಿಸಿದರು ಹೀಗೆ ವೆಚ್ಚವಾದ ಹಣವು ವ್ಯರ್ಥವಾಗಲಿಲ್ಲವೆಂದು ನನ್ನ ನಮ್ರ ಅಭಿಪ್ರಾಯ ಅದರಿಂದ ನಮಗೆ ಅಮೂಲ್ಯ ಅನುಭವವು ಲಭಿಸಿ ಚರಖದ ಸಂಭಾವ್ಯ ಉಪಯೋಗವು ಸ್ಪಷ್ಟವಾಯಿತು

ಈಗ ನಾನು ನನ್ನ ಉಡುಪಿಗೆ ಪೂರ್ಣವಾಗಿ ಖಾದಿಯನ್ನೇ ಉಪಯೋಗಿಸಲು ಆತುರನಾದೆನು ನನ್ನ ಪಂಚೆಯು ಇನ್ನೂ ನಮ್ಮ ದೇಶದ ಗಿರಣಿಯದಾಗಿದ್ದಿತು. ಆಶ್ರಮದಲ್ಲಿಯೂ ವಿಜಾಪುರದಲ್ಲಿಯೂ ತಯಾರುಮಾಡುತ್ತಿದ್ದ ಒರಟು ಖಾದಿಯ ಅಗಲವು ೩೦ ಅಂಗುಲ ಮಾತ್ರ ಇದ್ದಿತು. ಒಂದು ತಿಂಗಳೊಳಗಾಗಿ ೪೫ ಅಂಗುಲದ ಖಾದೀ ಧೋತ್ರವನ್ನು ನನಗೆ ಒದಗಿಸಿಕೊಡದಿದ್ದರೆ

ನಾನು ಒರಟಾದ ಅಗಲವಿಲ್ಲದ ಖಾದೀ ಪಂಚೆಯನ್ನೇ ಉಡುವೆನೆಂದು ಗಂಗಾಬಾಯಿಗೆ ಎಚ್ಚರಿಕೆ ಕೊಟ್ಟೆನು. ಇದರಿಂದ ಅವರಿಗೆ ಗಾಬರಿಯಾಯಿತು ಆದರೂ ನನ್ನ ಈ ತಗಾದೆಯು ಅವರ ಯೋಗ್ಯತೆಯನ್ನೇನೂ ಮೀರಲಿಲ್ಲ ಆಕೆಯು ಒಂದು ತಿಂಗಳಿಗಿಂತ ಮುಂಚೆಯೇ ಒಂದು ಜೊತೆ ೪೫॥ ಅಗಲದ ಧೋತ್ರವನ್ನು ಕಳಿಸಿದರು ಅವರು ಹೀಗೆ ಮಾಡದಿದ್ದರೆ ನನ್ನ ಸನ್ನಿವೇಶವು ಬಹು ಕಷ್ಟವಾಗುತ್ತಿದ್ದಿತು ಇದರಿಂದ ಅವರು ನನ್ನನ್ನು ಪಾರು ಮಾಡಿದರು

ಸುಮಾರು ಇದೇ ಸಮಯದಲ್ಲಿ ಶ್ರೀ ಲಕ್ಷ್ಮೀದಾಸರು ಶ್ರೀ ರಾಮಜಿ ಎಂಬ ನೆಯ್ಗೆಯವರನ್ನೂ ಅವರ ಹೆಂಡತಿಯಾದ ಗಂಗಾಬಾಯಿಯನ್ನೂ ಲಾರಿಯೆಂಬ ಗ್ರಾಮದಿಂದ ಆಶ್ರಮಕ್ಕೆ ಕರೆತಂದು ಆಶ್ರಮದಲ್ಲಿ ಖಾದಿಯನ್ನು ನೇಯಿಸಿದರು ಖಾದಿಯ ಪ್ರಸಾರದಲ್ಲಿ ಈ ದಂಪತಿಗಳು ವಹಿಸಿದ ಪಾತ್ರವೇನೂ ಅಗಣ್ಯವಾದುದಲ್ಲ. ಗುಜರಾತಿನಲ್ಲಿಯೂ ಹೊರಗೂ ಅನೇಕ ಮಂದಿಗೆ ಇವರು ಕೈನೂಲಿಗೆಯ ದಾರವನ್ನು ನೇಯುವದನ್ನು ಕಲಿಸಿಕೊಟ್ಟರು ಮಗ್ಗವನ್ನು ನಡೆಸುತ್ತಾ ಕುಳಿತಿರುವ ಗಂಗಾಬಾಯಿಯನ್ನು ನೋಡುವದೊಂದು ವಿಸ್ಮಯದ ದೃಶ್ಯ ನಿರಕ್ಷರರಾದರೂ ಸ್ವಾಧೀನಚಿತ್ತರಾದ ಈ ಸಹೋದರಿಯು ಮಗ್ಗವನ್ನು ನಡೆಸುತ್ತಿರುವಾಗ ಅವರ ಗಮನವು ಅದರಲ್ಲಿಯೇ ಲೀನವಾಗುತ್ತದೆ ಆಗ ಅವರ ಲಕ್ಷ್ಯವನ್ನು ಬೇರೆಕಡೆಗೆ ಎಳೆಯುವದು ಕಷ್ಟ ಮಗ್ಗವನ್ನು ಬಿಟ್ಟು ಬೇರಕಡೆ ಅವರ ದೃಷ್ಟಿಯು ಬೀಳುವಂತೆ ಮಾಡುವದು ಇನ್ನೂ ಕಷ್ಟ

---

೪೩

## ಶಿಕ್ಷಾಪ್ರದ ಸಂಭಾಷಣೆ

ಖಾದೀ ಚಳವಳಿಯು (ಆಗ ಇದನ್ನು ಸ್ವದೇಶೀ ಚಳವಳಿಯೆಂದು ಕರೆಯುತ್ತಿದ್ದರು) ಮೊಟ್ಟಮೊದಲಿನಿಂದಲೂ ಹೆಚ್ಚಾಗಿ ಗಿರಣಿ ಮಾಲಿಕರ ಖಂಡನೆಗೂ ಟೀಕೆಗೂ ಗುರಿಯಾಯಿತು ದಿವಂ ಉಮರ್ ಸುಬಾನಿಯವರು (ಇವರು ತಾವೇ ದಕ್ಷರಾದ ಗಿರಣಿ ಮಾಲಿಕರಾಗಿದ್ದರು ) ತಮ್ಮ ಸ್ವಂತ ಅನುಭವದ ಮತ್ತು ತಿಳಿವಳಿಕೆಯ ವಿಷಯಗಳನ್ನು ನನಗೆ ಹೇಳುತ್ತಿದ್ದರಲ್ಲದೆ ಇತರ ಗಿರಣಿ ಮಾಲಿಕರ ಅಭಿಪ್ರಾಯಗಳನ್ನೂ ನನಗೆ ತಿಳಿಸುತ್ತಿದ್ದರು ಇವರಲ್ಲಿ ಒಬ್ಬರು ಮಾಡಿದ ವಾದವು ಅವರ ಮನಸ್ಸನ್ನು ಹಿಡಿಯಿತು ಅವರು ಆ ಗೃಹಸ್ಥರನ್ನು ನಾನು ಹೋಗಿ ನೋಡಬೇಕೆಂದು ಒತ್ತಾಯ ಮಾಡಿದರು ನಾನು ಒಪ್ಪಿದೆನು ಸುಬಾನಿಯವರು ನಮ್ಮ ಬೇಟಿಗ ಏರ್ಪಾಟು ಮಾಡಿದರು ಗಿರಣಿ ಮಾಲಿಕರು ಸಂಭಾಷಣೆಯನ್ನಾರಂಭಿಸಿದರು

"ಇದಕ್ಕೆ ಮುಂಚೆ ಸ್ವದೇಶೀ ಚಳವಳಿಯಿದ್ದಿತೆಂಬುದು ನಿಮಗೆ ಗೊತ್ತುತಾನೆ?"

"ನನಗೆ ಗೊತ್ತು"

"ವಂಗವಿಭಜನೆಯ ಕಾಲದಲ್ಲಿ ನಾವು, ಗಿರಣಿ ಮಾಲಿಕರು, ಸ್ವದೇಶೀ ಚಳವಳಿಯಿಂದ ಆದಷ್ಟು ಲಾಭವನ್ನು ಹೀರಿದೆವು ಆ ಚಳಿವಳಿಯು ಅತ್ಯುಗ್ರವಾಗಿದ್ದಾಗ ನಾವು ಬಟ್ಟೆಯ ಬೆಲೆಯನ್ನೇರಿಸಿದೆವು; ಇನ್ನೂ ಕೇಡಾದ ಕೆಲಸಗಳನ್ನು ಮಾಡಿದೆವು. ಇದೂ ನಿಮಗೆ ಗೊತ್ತಿರಬೇಕು."

"ಹೌದು ಈ ವಿಷಯಗಳು ಅಷ್ಟು ಇಷ್ಟು ನನಗೆ ತಿಳಿದಿವೆ. ಇದರಿಂದ ನನಗೆ ಖೇದವುಂಟಾಗಿದೆ."

"ನಿಮಗೆ ಖೇದವಾಗಿರುವದು ನನಗೆ ಅರ್ಥವಾಗುತ್ತದೆ ಆದರೆ ಅದಕ್ಕೆ ಯಾವ ಕಾರಣವನ್ನೂ ಕಾಣೆ ನಾವು ನಮ್ಮ ವ್ಯಾಪಾರವನ್ನು ನಡೆಸುತ್ತಿರುವದು ಜನೋಪಕಾರಬುದ್ಧಿಯಿಂದಲ್ಲ, ಲಾಭ ಸಂಪಾದಿಸುವದಕ್ಕೆ ನಮ್ಮ ಕಂಪೆನಿಗಳ ಶೇರು (ಭಾಗ) ದಾರರನ್ನು ನಾವು ತೃಪ್ತಿಗೊಳಿಸಬೇಕು ಯಾವ ಪದಾರ್ಥದ ಬೆಲೆಯೂ ಅದಕ್ಕಿರುವ ಗಿರಾಕಿಯಿಂದ ನಿರ್ಧಾರವಾಗುತ್ತದೆ ಗಿರಾಕಿಯು ಹೆಚ್ಚಾದಷ್ಟೂ ಬೆಲೆ ಏರುವದೆಂಬ ನಿಯಮವನ್ನು ನಿರೋಧಿಸಬಲ್ಲವರಾರು ? ತಮ್ಮ ಚಳವಳಿಯಿಂದ ಸ್ವದೇಶೀ ವಸ್ತ್ರಕ್ಕೆ ಗಿರಾಕಿ ಹೆಚ್ಚಿ ಅದರ ಬೆಲೆಯೇರುವದು ಖಂಡಿತವೆಂದು ವಂಗರಿಗ ತಿಳಿದಿರಬೇಕಾಗಿದ್ದಿತು"

ಅವರ ಮಾತನ್ನು ತಡೆದು ನಾನು "ವಂಗರು ನನ್ನಂತೆಯೇ ನಂಬಿಕೆಯ ಸ್ವಭಾವದವರಾಗಿದ್ದರು ಗಿರಣಿ ಮಾಲಿಕರು ತಮ್ಮ ನಾಡಿಗೆ ವಿಷಮಸನ್ನಿವೇಶವೊದಗಿರುವಾಗ ಎರಡು ಬಗೆಯುವಷ್ಟು ಮತ್ತು ವಿದೇಶೀ ಬಟ್ಟೆಯನ್ನು ಸ್ವದೇಶಿಯೆಂದು ಮೋಸದಿಂದ ಮಾರಾಟಕೂಡ ಮಾಡುವಷ್ಟು ಸ್ವಾರ್ಥತೆಯಿಂದಲೂ ದೇಶಘಾತುಕತೆಯಿಂದಲೂ ವರ್ತಿಸುವದಿಲ್ಲನೆಂದು ವಂಗರು ಪಾಪ ಪೂರ್ಣ ಭರವಸೆಯಿಟ್ಟು ನಂಬಿದ್ದರು" ಎಂದೆನು

"ನೀವು ವಿಶ್ವಾಸಶೀಲರೆಂದು ನನಗೆ ಗೊತ್ತಿದ್ದಿತು ಅದಕ್ಕೇ ನಾನು ನಿಮಗೆ ಇಲ್ಲಿಗೆ ಬರಲು ತೊಂದರೆ ಕೊಟ್ಟೆರು. ಆ ಸರಳ ಮಾನಸರಾದ ವಂಗರಂತೆ ನೀವೂ ತಪ್ಪುಮಾಡದಿರುವಂತೆ ನಿಮ್ಮನ್ನು ಎಚ್ಚರಿಸಬೇಕೆಂದೇ ನಾನು ನಿಮ್ಮನ್ನು ನೋಡಲಿಚ್ಛಿಸಿದುದು"

ಹೀಗ ಹೇಳಿ ಅವರು ಹತ್ತಿರ ನಿಂತಿದ್ದ ಗುಮಾಸ್ತೆಯನ್ನು ಕರೆದು ತಮ್ಮ ಗಿರಣಿಯಲ್ಲಿ ತಯಾರಾಗುತ್ತಿದ್ದ ಬಟ್ಟೆಯ ನಮೂನೆಗಳನ್ನು ತೋರಿಸಹೇಳಿದರು ಅವುಗಳನ್ನು ತೋರಿಸುತ್ತಾ "ಇದನ್ನು ನೋಡಿ ಇದು ಎಲ್ಲಕ್ಕಿಂತಲೂ ಹೊಸದಾಗಿ ನಮ್ಮ ಗಿರಣಿಯಲ್ಲಿ ತಯಾರಾದ ರಖಮು. ಇದಕ್ಕೆ ಎಲ್ಲೆಲ್ಲಿಯೂ ಗಿರಾಕಿಯಿದೆ ಬೇರೆ ಬಟ್ಟೆ ತಯಾರಾಗುವಾಗ ಉಪಯೋಗವಾಗದ

ನೂಲಿನಿಂದ ನಾವು ಇದನ್ನು ಮಾಡುತ್ತೇವೆ. ಆದುದರಿಂದ ಸಹಜವಾಗಿ ಅದರ ಬೆಲೆ ಕಡಿಮೆ. ನಾವು ಇದನ್ನು ಉತ್ತರದ ಗಡಿನಾಡಿನವರೆಗೂ, ಹಿಮಾಲಯದ ಕಣಿವೆಗಳವರೆಗೂ, ಕಳಿಸುತ್ತೇವೆ. ದೇಶದಲ್ಲೆಲ್ಲಾ ನಮ್ಮ ದಳ್ಳಾಳಿಗಳುಂಟು. ಆದುದರಿಂದ ನಮಗೆ ದಳ್ಳಾಳಿಗಳ ಕೊರತೆಯೇನೂ ಇಲ್ಲವೆಂಬುದು ನಿಮಗೆ ಸ್ಪಷ್ಟವಾಗುತ್ತದೆ. ಇದಲ್ಲದೆ ಹಿಂದುಸ್ಥಾನಕ್ಕೆ ಬೇಕಾದ ಬಟ್ಟೆಗಿಂತ ಇಲ್ಲಿ ಸಿದ್ಧವಾಗುವದು ಬಹಳ ಕಡಿಮೆಯೆಂಬುದನ್ನು ನೀವು ಗಮನಿಸಬೇಕು ಆದುದರಿಂದ ಸ್ವದೇಶೀ ಪ್ರಶ್ನೆಯೆಂದರೆ ಪ್ರಧಾನವಾಗಿ ಬಟ್ಟೆಯುನ್ನೊದಗಿಸುವ ಪ್ರಶ್ನೆಯಾಗಿ ಪರಿಣಮಿಸುತ್ತದೆ ಸಾಕಾದಷ್ಟು ಬಟ್ಟೆಯುನ್ನೊದಗಿಸಿ ಅದರ ದರ್ಜೆಯನ್ನೂ ಅಗತ್ಯವಿದ್ದಷ್ಟು ಉತ್ತಮಗೊಳಿಸಿದ ಕ್ಷಣವೇ ವಿದೇಶೀ ವಸ್ತ್ರದ ಆಮದು ತಾನಾಗಿತಾನೇ ನಿಲ್ಲುತ್ತದೆ ಆದುದರಿಂದ ನನ್ನ ಸಲಹೆ ಇಷ್ಟು ಈಗ ಮಾಡುತ್ತಿರುವ ರೀತಿಯಲ್ಲಿ ನಿಮ್ಮ ಚಳವಳಿಯನ್ನು ನಡೆಸಬೇಡಿ ನಿಮ್ಮ ಲಕ್ಷ್ಯವನ್ನು ಹೊಸ ಗಿರಣಿಗಳನ್ನು ಸ್ಥಾಪಿಸುವಕಡೆ ತಿರುಗಿಸಿ ನಮಗೆ ಆವಶ್ಯಕವಾದುದು ಸಾಕಾದಷ್ಟು ಬಟ್ಟೆಯ ತಯಾರಿಯೇ ಹೊರತು ನಮ್ಮ ಸಾಮಾನಿಗೆ ಗಿರಾಕಿ ಹೆಚ್ಚಬೇಕಾದುದಲ್ಲ" ಎಂದರು

"ಹಾಗಾದರೆ ನಾನು ಆಗಲೆ ಅದೇ ಕೆಲಸವನ್ನೇ ಮಾಡುತ್ತಿದ್ದರೆ ನೀವು ನನ್ನ ಪ್ರಯತ್ನವನ್ನು ಹರಸುವಿರಿ ತಾನೆ?" ಎಂದು ನಾನು ಕೇಳಲು ಅವರು ಸ್ವಲ್ಪಮಟ್ಟಿಗೆ ಅಚ್ಚರಿಗೊಂಡು

"ಅದು ಹೇಗೆ ಸಾಧ್ಯ? ಓಹೋ, ನೀವು ಹೊಸ ಗಿರಣಿಗಳನ್ನು ಸ್ಥಾಪಿಸುವ ಉದ್ಯಮವನ್ನು ಘೋಷಿಸುತ್ತಿರಬಹುದು ಹಾಗಾದರ ನೀವು ನಿಜವಾಗಿಯೂ ಅಭಿನಂದನೆಗರ್ಹರು" ಎಂದರು.

"ಅದಲ್ಲ ನಾನು ಮಾಡುತ್ತಿರುವದು ನಾನು ನೂಲುವ ರಾಟೆಯ ಪುನರುಜ್ಜೀವನದಲ್ಲಿ ತೊಡಗಿದ್ದೇನೆ" ಎಂದು ನಾನು ವಿವರಿಸಿದೆನು.

"ಅದೇನು, ನೀವು ಹೇಳುವದು? ಎಂದು ಅವರು ಇನ್ನೂ ದಿಗ್ಭ್ರಮೆ ಹಿಡಿದು ಕೇಳಿದರು

ನಾನು ಅವರಿಗೆ ಚರಖದ ವಿಚಾರವೆಲ್ಲವನ್ನೂ ನಾನು ಅದನ್ನು ದೀರ್ಘಕಾಲ ಅರಸಿದ ಕಥೆಯನ್ನೂ ಅವರಿಗೆ ಹೇಳಿ "ನಿಮ್ಮಂತೆಯೇ ನಾನೂ ಅಭಿಪ್ರಾಯಪಡುತ್ತೇನೆ ನಾನು ವಸ್ತುತಃ ಗಿರಣಿಗಳ ದಳ್ಳಾಳಿಯಾಗುವದರಿಂದ ಏನೂ ಪ್ರಯೋಜನ ವಿಲ್ಲ ಅದರಿಂದ ದೇಶಕ್ಕೆ ಒಳಿತಿಗಿಂತ ಹೆಚ್ಚಾಗಿ ಕೆಡುಕೇ ಉಂಟಾಗುವುದು. ಇನ್ನೂ ಬಹುಕಾಲದ ವರೆಗೆ ಗಿರಣಿಗಳಿಗೆ ಗಿರಾಕಿಯ ಕೊರತೆಯೇನೂ ಒದಗುವದಿಲ್ಲ ಕೈನೂಲಿನ ಬಟ್ಟೆಯ ತಯಾರಿಗೆ ವ್ಯವಸ್ಥೆಮಾಡಿ ಅದನ್ನು ಖರ್ಚು ಮಾಡುವದಕ್ಕೆ ತಕ್ಕ ಉಪಾಯ ವನ್ನು ಕಂಡುಹಿಡಿಯುವದೇ ನಾನು ಮಾಡಬೇಕಾದ ಕೆಲಸ ಅದೇ ನನ್ನ ಕರ್ತವ್ಯ ಆದುದರಿಂದ ಖಾದಿಯ ಉತ್ಪತ್ತಿಯ ಕಡೆಗೆ ಸಂಪೂರ್ಣ ಗಮನ ಕೊಡುತ್ತಿದ್ದೇನೆ ಈ ರೀತಿಯ ಸ್ವದೇಶಿಯಲ್ಲಿ ನನಗೆ ಅನನ್ಯ ವಿಶ್ವಾಸವಿದೆ. ಏಕೆಂದರೆ ಇದರ ಮೂಲಕ ಭರತಖಂಡದ ಅರೆಹೊಟ್ಟೆ ಉಂಡ, ಪೂರ್ಣೋದ್ಯೋಗ ದೊರಕದ, ಹೆಂಗಸರಿಗೆ ಉದ್ಯೋಗ ಕೊಡಬಲ್ಲೆನು ಈ ಹೆಂಗಸರಿಂದ ನೂಲನ್ನು ತೆಗೆಸಿ ಆ ನೂಲನ್ನು ನೆಯ್ದು ಮಾಡಿದ ಖಾದಿಯಿಂದ ಹಿಂದುಸ್ಥಾನದ ಜನರಿಗೆ ಉಡುಗೆಯನ್ನೊದಗಿಸುವದೇ ನನ್ನ ಕಲ್ಪನೆ. ಈ ಉದ್ಯಮವು ಎಷ್ಟುಮಟ್ಟಿಗೆ ಫಲಿಸುವುದೋ ನಾನು ಹೇಳಲಾರೆ ಈಗ ಅದಿನ್ನೂ ಕೇವಲ 'ಶ್ರೀಓಂ ನಮಃ' ದ ಸ್ಥಿತಿಯಲ್ಲಿದೆ ಆದರೆ ನನಗೆ ಅದರಲ್ಲಿ ಸಂಪೂರ್ಣ ಭರವಸೆಯುಂಟು. ಅದೇನೇ ಆಗಲಿ, ಅದರಿಂದ ಯಾವ ಕೆಡಕೂ ಉಂಟಾಗಲಾರದು. ಹಾಗೆ ನೋಡಿದರೆ ದೇಶದಲ್ಲಿ ಉತ್ಪತ್ತಿಯಾಗುವ ಬಟ್ಟೆಯು ಇದರಿಂದ ಹೆಚ್ಚಿದಮಟ್ಟಿಗೆ, ಅದು ಎಷ್ಟೇ ಅಲ್ಪವಾಗಿರಲಿ, ದೇಶಕ್ಕೆ ಲಾಭವೇ ಸರಿ. ಹೀಗೆ ನಮ್ಮ ಉದ್ಯಮದಲ್ಲಿ ನೀವು ಹೇಳಿದ ಕುಂದುಗಳಾವವೂ ಇಲ್ಲವೆಂಬುದು ಸ್ಪಷ್ಟವಾಗಿದೆ" ಎಂದು ಹೇಳಿದೆನು.

ಅವರು, "ನಿಮ್ಮ ಚಳವಳಿಯನ್ನು ಹೂಡುವದರಲ್ಲಿ ನಾಡಿನ ಬಟ್ಟೆಯ ಉತ್ಪತ್ತಿಯನ್ನು ಏರಿಸುವದೇ ನಿಮ್ಮ ಉದ್ದೇಶವಾದರೆ ನಾನು ಅದಕ್ಕೆ ವ್ಯತಿರಿಕ್ತವಾಗಿ ಹೇಳುವದೇನೂ ಇಲ್ಲ ಈ ನೈಸರ್ಗಿಕಬಲಚಲಿತ ಯಂತ್ರಯುಗದಲ್ಲಿ ನೂಲುವ ರಾಟೆಯು ಮುಂದುವರಿಯುವದು ಸಾಧ್ಯವೆ ಎಂಬುದು ಬೇರೆ ಪ್ರಶ್ನೆ. ಅದೇನೇ ಆಗಲಿ ನಾನಂತು ನಿಮಗೆ ವಿಜಯವನ್ನು ಹಾರೈಸುತ್ತೇನೆ." ಎಂದುತ್ತರವಿತ್ತರು.

---

೪೪

# ನೆರೆಯೇರಿದುದು

ಇದಾದ ಮೇಲೆ ಖಾದಿಯು ಅಭಿವೃದ್ಧಿಹೊಂದಿದ ವಿಷಯವಾಗಿ ನಾನು ಇನ್ನು ಹೆಚ್ಚಾಗಿ ಬರೆಯುವಂತಿಲ್ಲ ನನ್ನ ವಿವಿಧ ಕಾರ್ಯಕಲಾಪಗಳು ಜನರ ಗಮನಕ್ಕೆ ಬಂದಮೇಲೆ ಅವುಗಳ ವೃತ್ತಾಂತವನ್ನು ಬರೆಯುವದು ಈ ಅಧ್ಯಾಯಗಳಿಗೆ ಸೇರಿದುದಲ್ಲ ನಾನು ಹಾಗೆ ಬರೆಯಲು ಪ್ರಯತ್ನಪಡುವಂತೆಯೂ ಇಲ್ಲ— ಏಕೆಂದರೆ, ಇನ್ನೇತಕ್ಕಲ್ಲದಿದ್ದರೂ ಹಾಗೆ ಮಾಡಲು ಒಂದು ಗ್ರಂಥವೇ ಬೇಕು ನಾನು ಸತ್ಯದ ಸಂಬಂಧವಾಗಿ ನಡೆಸಿದ ಶೋಧನೆಗಳಲ್ಲಿ ಕೆಲವು ವಿಷಯಗಳು, ತಾವಾಗಿ ತಾವೇ ಎಂಬಂತೆ, ನನ್ನ ಲಕ್ಷ್ಯಕ್ಕೆ ಬಂದುದೆಂತೆಂಬುದನ್ನು ವರ್ಣಿಸುವದು ಮಾತ್ರ ಈ ಅಧ್ಯಾಯಗಳನ್ನು ಬರೆಯುವದರ ಉದ್ದೇಶ

ಹಾಗಾದರೆ ಅಸಹಯೋಗ ಚಳವಳಿಯ ಕಥೆಯನ್ನು ಮುಂದುವರಿಸೋಣ ಅಲೀ ಸಹೋದರರು ಹೂಡಿದ ಪ್ರಚಂಡ ಚಳವಳಿಯು ಪೂರ್ಣ ರಭಸದಿಂದ ನಡೆಯುತ್ತಿರುವಾಗ ಈ ವಿಷಯವಾಗಿ, ಅದರಲ್ಲಿಯೂ ವಿಶೇಷವಾಗಿ ಮುಸಲ್ಮಾನರು ಅಹಿಂಸಾನಿಯಮವನ್ನು ಎಷ್ಟುಮಟ್ಟಿಗೆ ಆಚರಿಸಬಲ್ಲರೆಂಬುದನ್ನು ಕುರಿತು, ನಾನು ದಿವಂ ಮೌಲಾನಾ ಅಬ್ದುಲ್ ಬಾರಿಗಳೊಡನೆಯೂ ಇತರ ಉಲೇಮಾಗಳೊಡನೆಯೂ ಚರ್ಚೆಮಾಡಿದೆನು ಕಡೆಗೆ ಇವರೆಲ್ಲರೂ ಒಮ್ಮತದಿಂದ ಇಸ್ಲಾಮ್ ಧರ್ಮವು ಅಹಿಂಸೆಯನ್ನು ವ್ಯವಹಾರ ನೀತಿರೂಪದಿಂದ ಅನುಸರಿಸುವದನ್ನು ನಿರೋಧಿಸುವದಿಲ್ಲವೆಂದೂ ಅಷ್ಟೇ ಅಲ್ಲದೆ ಆ ನೀತಿಗೆ ಒಪ್ಪಿದಮೇಲೆ ಅದನ್ನು ವಂಚನೆಯಿಲ್ಲದೆ ಸಂಪೂರ್ಣವಾಗಿ ನಡೆಸಲು ಮುಸಲ್ಮಾನರು ಬದ್ಧರೆಂದೂ ಅಭಿಪ್ರಾಯಪಟ್ಟರು ಕಟ್ಟಕಡೆಗೆ ಅಸಹಯೋಗದ ಗೊತ್ತುವಳಿಯು ಖಿಲಾಫತ್ ಸಭೆಯಲ್ಲಿ ಮುಂದಿಡಲ್ಪಟ್ಟು ದೀರ್ಘ ಚರ್ಚೆಯಾದ

ಮೇಲೆ ಸಮ್ಮತಿಪಡಿಯಿತು ಒಮ್ಮೆ ಅಲಹಾಬಾದಿನಲ್ಲಿ ಒಂದು ಸಮಿತಿಯು ಈ ವಿಷಯವನ್ನು ಕುರಿತು ಇರುಳೆಲ್ಲಾ ಚರ್ಚಿಸಿದುದು ನನಗೆ ಸ್ಪಷ್ಟವಾಗಿ ನೆನಪಿದೆ ಮೊದಮೊದಲು ದಿವಂ ಹಕೀಂ ಸಾಹೇಬರು ಅಹಿಂಸಾತ್ಮಕ ಅಸಹಯೋಗವು ಕಾರ್ಯರಂಗದಲ್ಲಿ ಸಾಧ್ಯವೇ ಎಂಬುದನ್ನು ಕುರಿತು ಸಂಶಯಪಡುತ್ತಿದ್ದರು ಮೊದಲು ಈ ಸಂಶಯನಿವೃತ್ತಿಯಾದ ಮೇಲೆ ಅವರು ಚಳವಳಿಯನ್ನು ಪೂರ್ಣ ಮನಸ್ಸಿನಿಂದ ಸೇರಿದರು ಅವರ ನೆರವಿನಿಂದ ಚಳವಳಿಗೆ ಅಮೂಲ್ಯ ಲಾಭವುಂಟಾಯಿತು

ಇವಾದ ಸ್ವಲ್ಪ ಕಾಲದಲ್ಲಿಯೇ ನರೆದ ಗುಜರಾತ್ ರಾಜಕೀಯ ಪರಿಷತ್ತಿನಲ್ಲಿ ನಾನು ಅಸಹಕಾರದ ಠರಾವನ್ನು ಸಭೆಯ ಮುಂದಿಟ್ಟೆನು ರಾಷ್ಟ್ರ ಮಹಾಸಭೆಗಿಂತ ಮುಂಚೆಯೇ ಠರಾವನ್ನು ಅಂಗೀಕರಿಸಲು ಪ್ರಾಂತೀಯ ಪರಿಷತ್ತಿಗೆ ಅಧಿಕಾರವಿಲ್ಲವೆಂಬುದೇ ಇದಿರುಕಡೆಯವರ ಮೊದಲ ಆಕ್ಷೇಪಣೆ ಇದಕ್ಕೆ ಉತ್ತರವಾಗಿ ನಾನು ಈ ನಿರ್ಬಂಧವು ಅನ್ವಯಿಸುವದು ಹಿಂದಿರುಗುವದಕ್ಕೆ ಹೊರತು ಮುಂದ ಹೋಗುವದಕ್ಕಲ್ಲವೆಂದೂ ಹಾಗೂ ಮುಂದೆ ಹೋಗಲು ಕೆಳಗಿನ ದರ್ಜೆಯ ಅಧೀನಸಂಸ್ಥೆಗಳು ಪೂರ್ಣಾಧಿಕಾರ ಪಡೆದಿರುವದಷ್ಟೇ ಅಲ್ಲದೆ ತಮ್ಮಲ್ಲಿ ಅಗತ್ಯವಾದ ಧೈರ್ಯಸ್ಥೈರ್ಯವೂ ಆತ್ಮವಿಶ್ವಾಸವೂ ಇದ್ದರ ಹಾಗೆ ಪ್ರಗತಿಮಾರ್ಗವನ್ನನುಸರಿಸುವದು ಅವುಗಳ ಕರ್ತವ್ಯವೆಂದೂ ನಾನು ಸೂಚಿಸಿದೆನು ಪ್ರಧಾನಸಂಸ್ಥೆಯ ಗೌರವವನ್ನು ಹೆಚ್ಚಿಸಲು ಪ್ರಯತ್ನಪಡುವದಕ್ಕೆ ಅಪ್ಪಣೆ ಅವಶ್ಯಕವಿಲ್ಲ, ಅದರಿಂದುಂಟಾಗಬಹುದಾದ ಅಪಾಯಕ್ಕೆ ತನ್ನನ್ನು ಹೊರತು ಪ್ರಧಾನ ಸಂಸ್ಥೆಯನ್ನೀಡುಮಾಡದಿದ್ದರಾಯಿತು, ಎಂದು ನಾನು ವಾದಿಸಿದೆನು ಅನಂತರ ಗೊತ್ತುವಳಿಯ ಗುಣದೋಷಗಳ ಚರ್ಚೆಯಾಯಿತು ಇದರ ವಿಶೇಷಾಂಶಗಳೇನೆಂದರೆ ಚರ್ಚೆಯ ತೀಕ್ಷ್ಣತೆ, ಮತ್ತು ಪರಸ್ಪರ ಸಹನೆಯಿಂದಲೂ ಗೌರವದಿಂದಲೂ ಫಲಿಸಿದ ಸ್ನಿಗ್ಧವಾತಾವರಣ ಮತಸೂಚಿಗಳನ್ನೆಣಿಸಿ ನೋಡಲು ಗೊತ್ತುವಳಿಯು ಅತ್ಯಧಿಕ

ಬಹುಮತದಿಂದ ಅಂಗೀಕೃತವಾಯಿತು ಹೀಗೆ ಅಂಗೀಕಾರವಾಗಲು ಶ್ರೀ. ವಲ್ಲಭಭಾಯಿಯಾ ಮತ್ತು ಅಬ್ಬಾಸ್ ತಯ್ಯಬ್‌ಜೀ ಇವರ ವ್ಯಕ್ತಿಪ್ರಭಾವದಿಂದೊದಗಿದ ಸಹಾಯವೇನೂ ಅಲ್ಪವಾಗಿರಲಿಲ್ಲ ಎರಡನೆಯವರು ಅಧ್ಯಕ್ಷರಾಗಿದ್ದರು ಅವರ ಸ್ವಂತ ಅಭಿಪ್ರಾಯವು ಸಂಪೂರ್ಣವಾಗಿ ಗೊತ್ತುವಳಿಯ ಪರವಾಗಿಯೇ ಇದ್ದಿತು

ಈ ಪ್ರಶ್ನೆಯನ್ನು ಕುರಿತು ಆಲೋಚನೆ ಮಾಡಲು ೧೯೨೦ರ ಸೆಪ್ಟೆಂಬರಿನಲ್ಲಿ ಕಲ್ಕತ್ತೆಯಲ್ಲಿ ಅಖಿಲಭಾರತ ರಾಷ್ಟ್ರ ಮಹಾಸಭೆಯ ವಿಶೇಷ ಅಧಿವೇಶನವನ್ನು ಕೂಡಿಸಬೇಕೆಂದು ಮಹಾಸಭಾ ಸಮಿತಿಯು ನಿರ್ಧರಿಸಿತು ಇದರ ಸಿದ್ಧತೆಯು ಕಾರ್ಯವು ಬಹು ದೊಡ್ಡದಾಗಿ ನಡೆಯಿತು ಲಾಲಾ ಲಜಪತರಾಯರನ್ನು ಅಧ್ಯಕ್ಷ ರಾಗಿ ಚುನಾಯಿಸಿದರು ಮುಂಬಯಿಯಿಂದ ಕಲ್ಕತ್ತೆಗೆ 'ಕಾಂಗ್ರೆಸ್' ಮತ್ತು 'ಖಿಲಾಫತ್' ಸ್ಪೆಷಲ್ (ವಿಶೇಷ) ರೈಲು ಗಾಡಿಗಳನ್ನು ಬಿಟ್ಟರು ಕಲ್ಕತ್ತೆಯಲ್ಲಿ ಪ್ರತಿನಿಧಿಗಳ ಮತ್ತು ಪ್ರೇಕ್ಷಕರ ಅಗಾಧ ಸಂದಣಿಯು ನೆರೆಯಿತು

ಮೌಲಾನಾ ಶೌಕತ್ ಅಲಿಯವರು ಕೇಳಲು ನಾನು ರೈಲ ನಲ್ಲಿ ಅಸಹಕಾರದ ಗೊತ್ತುವಳಿಯನ್ನು ರಚಿಸಿದನು ಇದುವರೆಗೂ ನಾನು ಇದಕ್ಕೆ ಸಂಬಂಧಪಟ್ಟ ಗೊತ್ತುವಳಿಗಳಲ್ಲಿ 'ಅಹಿಂಸಾತ್ಮಕ' ಎಂಬ ಪದವನ್ನು ಪ್ರಾಯಶಃ ಉಪಯೋಗಿಸಿರಲಿಲ್ಲ ಭಾಷಣ ಗಳಲ್ಲಿ ಆ ಶಬ್ದವನ್ನು ತಪ್ಪದೆ ಉಪಯೋಗಿಸುತ್ತಿದ್ದೆನು ಈ ವಿಷಯವನ್ನು ಕುರಿತ ನನ್ನ ಶಬ್ದಕೋಶವು ಇನ್ನೂ ಪೂರ್ತಿಯಾಗಿ ಬೆಳೆದಿರಲಿಲ್ಲ 'ಅಹಿಂಸಾತ್ಮಕ,' 'ಶಾಂತಿಮಯ' ಎಂಬ ಸಂಸ್ಕೃತ ಪದಗಳ ಮೂಲಕ ನನ್ನ ಮನೋಭಾವವನ್ನು ಕೇವಲ ಮುಸಲ್ಮಾನರಿರುವ ಕೂಟಕ್ಕೆ ಮನವರಿಕೆಯಾಗುವಂತೆ ಮಾಡುವದು ನನಗೆ ಅಸಾಧ್ಯವಾಗಿ ಕಂಡುಬಂದಿತು ಆದುದರಿಂದ ನಾನು ಅಬುಲ್ ಕಲಾಮ್ ಆಜಾದರನ್ನು ಈ ಅರ್ಥಬರುವ ಪದವನ್ನು ಸೂಚಿಸ ಬೇಕೆಂದು ಕೇಳಿದೆನು ಅವರು ಇದಕ್ಕೆ 'ಬಾ-ಅಮನ್ ಎಂಬ

ಮಾತನ್ನೂ ಇದೇ ರೀತಿಯಾಗಿ ಅಸಹಕಾರಕ್ಕೆ 'ತರ್ಕ-ಇ-ಮುವಾಲಾತ್' ಎಂಬ ಪದವನ್ನೂ ಸೂಚಿಸಿದರು

ಹೀಗೆ ನಾನಿನ್ನೂ ಹಿಂದೀ, ಗುಜರಾತೀ ಮತ್ತು ಉರ್ದೂ ಭಾಷೆಗಳಲ್ಲಿ ಅಸಹಕಾರಕ್ಕೆ ಸಂಬಂಧಪಟ್ಟ ಶಬ್ದಸಾಮಗ್ರಿಯನ್ನು ಹೊಂದಿಸಲನುವಾಗುತ್ತಿದ್ದಂತೆಯೇ ಅಷ್ಟರಲ್ಲಿಯೇ ಕೂಡಲಿದ್ದ ಮಹಾಸಭೆಯ ಅಧಿವೇಶನದ ಮುಂದಿಡಲು ಅಸಹಯೋಗದ ಠರಾವನ್ನು ರಚಿಸುವ ಭಾರವು ನನ್ನಮೇಲೆ ಬಿದ್ದಿತು ನಾನು ಮೊದಲು ಬರೆದಿದ್ದ ಗೊತ್ತುವಳಿಯಲ್ಲಿ 'ಅಹಿಂಸಾತ್ಮಕ' ಎಂಬ ಮಾತನ್ನು ಬಿಟ್ಟುಬಿಟ್ಟಿದ್ದೆನು ಇದು ನನ್ನ ಲಕ್ಷ್ಯಕ್ಕೆ ಬಂದಿರಲಿಲ್ಲ ಗೊತ್ತುವಳಿಯನ್ನು ಹಾಗಯೇ ನಾನು ಆ ಗಾಡಿಯಲ್ಲೇ ನನ್ನೊಡನೆ ಪಯಣಮಾಡುತ್ತಿದ್ದ ಮೌಲಾನಾ ಶೌಕತ್ ಅಲಿಯವರಿಗೆ ಕೊಟ್ಟಿದ್ದೆನು ಆ ರಾತ್ರಿ ನನಗೆ 'ಅಹಿಂಸಾತ್ಮಕ' ಎಂಬ ಪದವು ಬಿಟ್ಟುಹೋಗಿರುವದು ಹೊಳೆಯಿತು ಬೆಳಿಗ್ಗೆ ನಾನು ಮಹದೇವ ದೇಶಾಯಿಯೊಡನೆ ಗೊತ್ತುವಳಿಯು ಅಚ್ಚಾಗುವದಕ್ಕೆ ಮುಂಚೆ ಈ ತಪ್ಪನ್ನು ತಿದ್ದಬೇಕೆಂದು ಹೇಳಿಕಳಿಸಿದೆನು ಆದರೆ ಹಾಗ ಮಾಡಲಾಗುವದಕ್ಕೆ ಮುಂಚೆಯೇ ಅದು ಅಚ್ಚಾಗಿಬಿಟ್ಟಿದ್ದಂತೆ ನನಗೆ ಜ್ಞಾಪಕವಿದೆ ವಿಷಯನಿರ್ಧಾರಕ ಸಮಿತಿಯು ಆ ಸಂಜೆ ಸೇರುವದಿದ್ದಿತು ಆದುದರಿಂದ ನಾನು ಅಚ್ಚಾದ ಪ್ರತಿಗಳನ್ನು ತಿದ್ದಬೇಕಾಯಿತು ಗೊತ್ತುವಳಿಯ ಶಬ್ದರೂಪವನ್ನು ನಾನು ಸಿದ್ಧಪಡಿಸದೆ ಇದ್ದಿದ್ದರೆ ಬಹು ಕಷ್ಟವಾಗುತ್ತಿದ್ದಿತೆಂದು ನನಗೆ ಆ ಮೇಲೆ ಗೊತ್ತಾಯಿತು

ಆದರೂ ನನ್ನ ಸ್ಥಿತಿಯು ಕರುಣಾಜನಕವಾಗಿದ್ದಿತು ಗೊತ್ತುವಳಿಯನ್ನು ಅನುಮೋದಿಸುವವರು ಯಾರು, ವಿರೋಧಿಸುವವರು ಯಾರು ಎಂಬುದರ ಅರಿವೇ ನನಗಿರಲಿಲ್ಲ ಲಾಲಾಜಿಯವರು ಇದನ್ನು ಯಾವ ರೀತಿಯಲ್ಲಿ ದೃಷ್ಟಿಸುವರೆಂಬುದೂ ನನಗೆ ಗೊತ್ತಿರಲಿಲ್ಲ. ನೂರು ಕಾಳಗಗಳಲ್ಲಿ ನುರಿತ ವೀರಯೋಧರ

ಗಭೀರವ್ಯೂಹವು ಕಲ್ಕತ್ತೆಯ ಕದನಕ್ಕೆ ಸಜ್ಜಾಗಿದ್ದುದನ್ನು ಮಾತ್ರ ನಾನು ನೋಡಿದೆನು. ಡಾ. ಬೆಸಂಟರು, ಪಂಡಿತ ಮಾಲವೀಯರು, ಶ್ರೀ. ವಿಜಯರಾಘವಾಚಾರ್ಯರು, ಪಂಡಿತ ಮೋತೀಲಾಲರು ಇವರಲ್ಲಿ ಕೆಲವರಾಗಿದ್ದರು

ನನ್ನ ಪ್ರಸ್ತಾವದಲ್ಲಿ ಪಂಜಾಬಿನ ಅತ್ಯಾಚಾರಕ್ಕೂ ಖಿಲಾಫತ್ ವಚನಭಂಗಕ್ಕೂ ಚಿಕಿತ್ಸೆಪಡೆಯಲು ಮಾತ್ರ ಅಸಹಯೋಗವು ಪ್ರಸ್ತಾಪಿತವಾಗಿದ್ದಿತು ಆದರೆ ಅದು ಶ್ರೀ ವಿಜಯರಾಘವಾಚಾರ್ಯರ ಮನಸ್ಸಿಗೆ ಒಪ್ಪಲಿಲ್ಲ "ಅಸಹಯೋಗವನ್ನು ಸಾರುವದಾದರೆ ಸರ್ವವ್ಯಾಪಿಯಾದ ಮಹತ್ತ್ವದ ಅನ್ಯಾಯದ ಸಂಬಂಧವಾಗಿ ಸಾರುವದರ ಬದಲು ಒಂದೆರಡು ಅನ್ಯಾಯಗಳನ್ನು ಆರಿಸಿ ಅವುಗಳನ್ನು ಮಾತ್ರ ಕುರಿತು ಏಕೆ ಸಾರಬೇಕು ? ಸ್ವರಾಜ್ಯದ ಅಭಾವವೇ ರಾಷ್ಟ್ರಕ್ಕೆ ಎಲ್ಲಕ್ಕಿಂತ ದೊಡ್ಡ ಅನ್ಯಾಯ ಆದುದರಿಂದ ಅಸಹಕಾರವನ್ನು ಸ್ವರಾಜ್ಯಸಾಧನಗಾಗಿಯೇ ಉಪಯೋಗಿಸಬೇಕು." ಎಂದು ವಾದಿಸಿದರವರು ಪಂಡಿತ ಮೋತೀಲಾಲರೂ ಸ್ವರಾಜ್ಯಸಾಧನೆಯನ್ನು ಗೊತ್ತುವಳಿಗೆ ಸೇರಿಸಬೇಕೆಂದು ಇಷ್ಟಪಟ್ಟರು ನಾನು ಈ ಸಲಹೆಯನ್ನು ಯಾವ ಅಭ್ಯಂತರವೂ ಇಲ್ಲದೆ ಒಡನೆಯೇ ಸ್ವೀಕರಿಸಿ ಸ್ವರಾಜ್ಯಸಾಧನೆಯನ್ನು ಠರಾವಿಗೆ ಸೇರಿಸಿದೆನು ಠರಾವಿನ ಚರ್ಚೆಯು ಸಮಗ್ರತೆಯಿಂದಲೂ ಜವಾಬ್ದಾರಿಯ ಬುದ್ಧಿಯಿಂದಲೂ ನಡೆಯಿತು ವಾತಾವರಣವು ಸ್ವಲ್ಪ ಮಟ್ಟಿಗೆ ಅಶಾಂತವಾಗಿಯೂ ಇದ್ದಿತು ಚರ್ಚೆಯಾದ ಮೇಲೆ ನನ್ನ ಪ್ರಸ್ತಾವವು ಅಂಗೀಕೃತವಾಯಿತು

ಚಳವಳಿಯನ್ನು ಮೊಟ್ಟಮೊದಲು ಸೇರಿದವರು ಪಂಡಿತ ಮೋತೀಲಾಲರು. ಗೊತ್ತುವಳಿಯನ್ನು ಕುರಿತು ಅವರಿಗೂ ನನಗೂ ನಡೆದ ಸುಮಧುರ ಸಂವಾದವು ನನಗಿನ್ನೂ ನೆನಪಿದೆ ಅದರ ಶಬ್ದಗಳ ವಿಷಯದಲ್ಲಿ ಅವರು ಕೆಲವು ಬದಲಾವಣೆಗಳನ್ನು ಸೂಚಿಸಿದರು ನಾನು ಅದರಂತೆಯೇ ತಿದ್ದುಪಾಟು ಮಾಡಿದೆನು ದೇಶ

ಬಂಧುಗಳನ್ನು . ಪ್ರೇರಿಸುವ ಭಾರವನ್ನು ಅವಗು ಹೊತ್ತುಕೊಂಡರು ದೇಶಬಂಧುಗಳ ಅಂತಃಕರಣವು ಅಸಹಯೋಗದ ಕಡಯೇ ಇದ್ದರೂ ಅದರ ಕಾರ್ಯಕ್ರಮವನ್ನು ನಡೆಸಲು ಜನರಿಗೆ ಯೋಗ್ಯತೆಯಿದೆಯೋ ಇಲ್ಲವೋ ಎಂದು ಅವರು ಸಂಶಯಪಟ್ಟರು ಅವರೂ ಲಾಲಾಜಿಯವರೂ ಸಂಪೂರ್ಣ ಮನಸ್ಸಿನಿಂದ ಅದನ್ನು ಸ್ವೀಕರಿಸಿದುದು ನಾಗಪುರದ ಮಹಾಸಭೆಯಲ್ಲೇ

ವಿಶೇಷ ಅಧಿವೇಶನದಲ್ಲಿ ಲೋಕಮಾನ್ಯರಿಲ್ಲದುದು ನನ್ನ ಮನಸ್ಸನ್ನು ಬಹುವಾಗಿ ಕೊರೆಯಿತು ಲೋಕಮಾನ್ಯರು ಆಗ ಜೀವಂತರಾಗಿದ್ದರೆ ಅವರು ಆಗ ನನ್ನನ್ನು ಆಶೀರ್ವದಿಸುತ್ತಿದ್ದರೆಂದು ಇಂದಿನವರೆಗೂ ನನ್ನ ದೃಢನಂಬಿಕೆ ಒಂದು ವೇಳೆ ಹಾಗಾಗದೆ ಅವರು ಅಸಹಯೋಗ ಚಳವಳಿಯನ್ನು ವಿರೋಧಿಸಿದ್ದರೂ ಅವರ ವಿರೋಧವನ್ನು ನನಗೆ ಮನ್ನಣೆಯೆಂದೂ ಶಿಕ್ಷಣವೆಂದೂ ಎಣಿಸುತ್ತಿದ್ದೆನು ನಮ್ಮಿಬ್ಬರಿಗೂ ಸದಾ ಮತಭೇದವಿರುತ್ತಿದ್ದರೂ ಅದರಿಂದ ಎಂದೂ ಮನಃಕಷಾಯವು ಫಲಿಸಲಿಲ್ಲ ನಮ್ಮಿಬ್ಬರ ಸಂಬಂಧವು ಅತ್ಯಂತ ನಿಕಟವಾದುದೆಂಬ ವಿಶ್ವಾಸವನ್ನೇ ಅವರು ಸದಾ ನನ್ನಲ್ಲಿ ಹುಟ್ಟಿಸಿದ್ದರು ಈಗ, ನಾನು ಈ ವಾಕ್ಯಗಳನ್ನು ಬರೆಯುತ್ತಿರುವಾಗ, ಅವರ ಮರಣದ ಸನ್ನಿವೇಶವು ನನ್ನ ಮನೋನೇತ್ರದಿದಿರಿಗೆ ನಿಂತಿದೆ ನನ್ನ ಸಹಯೋಗಿಗಳಾಗಿದ್ದ ಪಟವರ್ಧನರು ಲೋಕಮಾನ್ಯರ ದೇಹಾಂತ ವೃತ್ತಾಂತವನ್ನು ಟಿಲಿಫೋನಿನ ಮೂಲಕ ನನಗೆ ತಿಳಿಸಿದಾಗ ಸುಮಾರು ಮಧ್ಯರಾತ್ರಿಯಾಗಿದ್ದಿತು ನನ್ನ ಜೊತೆಗಾರರು ಸುತ್ತಮುತ್ತಲೂ ಕುಳಿತಿದ್ದರು ಯಾವ ಪ್ರಯತ್ನವೂ ಇಲ್ಲದೆ ತಾನಾಗಿ ತಾನೇ "ನನ್ನ ಪ್ರಬಲತಮ ಬೆಂಬಲವು ಮಾಯವಾಯಿತು!" ಎಂಬ ಮಾತು ನನ್ನ ಬಾಯಿಂದ ಹೊರಟಿತು ಅಸಹಯೋಗ ಚಳವಳಿಯು ಆಗ ಪೂರ್ಣಾವೇಶದಿಂದ ಚಲಿಸುತ್ತಿದ್ದಿತು ನಾನು ಲೋಕಮಾನ್ಯರ ಪ್ರೋತ್ಸಾಹವನ್ನೂ ಸ್ಫೂರ್ತಿಯನ್ನೂ ಆತುರದಿಂದ ನಿರೀಕ್ಷಿಸುತ್ತಿದ್ದೆನು ಅಸಹಕಾರ ಆಂದೋ

ಲನದ ಅಂತಿಮರೂಪದ ವಿಷಯದಲ್ಲಿ ಅವರ ಮನೋವೃತ್ತಿಯೇನಾಗಿರುತ್ತಿದ್ದಿತೆಂಬುದು ಎಂದೂ ಕೇವಲ ಊಹೆಯ ಮಾತಾಗಿಯೇ ಉಳಿಯುವುದು ಅದೂ ಅಲ್ಲದೆ ಅಂತಹ ಊಹೆಯೂ ವ್ಯರ್ಥ ಅದೇನೇ ಆಗಲಿ ಇಷ್ಟು ಮಾತ್ರ ಖಂಡಿತ ಅವರ ಮರಣದಿಂದುಂಟಾದ ಶೂನ್ಯತೆಯು ಕಲ್ಕತ್ತೆಯಲ್ಲಿ ನೆರದಿದ್ದವರೆಲ್ಲರ ಮನಸ್ಸನ್ನೂ ಕುಗ್ಗಿಸಿತು ಜನಾಂಗದ ಇತಿಹಾಸದಲ್ಲಿ ಈ ವಿಷಮ ಮುಹೂರ್ತವೊದಗಿರುವಾಗ ಅವರ ಬುದ್ಧಿವಾದವು ದೊರಕದಂತಿದ್ದುದಕ್ಕಾಗಿ ಪ್ರತಿಯೊಬ್ಬರೂ ವಿಷಾದಗೊಂಡರು.



೪೫

# ನಾಗಪುರದಲ್ಲಿ

ಕಲ್ಕತ್ತೆಯಲ್ಲಿ ವಿಶೇಷ ಅಧಿವೇಶನದಲ್ಲಿ ಸ್ವೀಕೃತವಾದ ಗೊತ್ತುವಳಿಗಳನ್ನು ನಾಗಪುರದಲ್ಲಿ ಮಹಾಸಭೆಯ ವಾರ್ಷಿಕಾಧಿವೇಶನವು ಒಪ್ಪಿ ಸ್ಥಿರಪಡಿಸಬೇಕಾಗಿದ್ದಿತು. ಪುನಃ ಇಲ್ಲಿಯೂ ಕಲ್ಕತ್ತೆಯಲ್ಲಿ ನಡೆದಂತೆಯೇ ಪ್ರೇಕ್ಷಕರ ಮತ್ತು ಪ್ರತಿನಿಧಿಗಳ ಪ್ರವಾಹವು ನುಗ್ಗಿತು ಆಗ ಮಹಾಸಭೆಯು ಪ್ರತಿನಿಧಿಗಳ ಸಂಖ್ಯೆಗೆ ಮಿತಿಯನ್ನು ಇನ್ನೂ ಇಟ್ಟಿರಲಿಲ್ಲ ಇದರ ಫಲವಾಗಿ, ನನಗೆ ನೆನಪಿರುವಮಟ್ಟಿಗೆ, ಆ ಸಂದರ್ಭದಲ್ಲಿ ಪ್ರತಿನಿಧಿಗಳ ಸಂಖ್ಯೆಯು ಹದಿನಾಲ್ಕು ಸಾವಿರಕ್ಕೆ ಏರಿತು ಲಾಲಾಜಿಯವರು ಶಾಲೆಗಳ ಬಹಿಷ್ಕಾರದ ವಿಷಯದಲ್ಲಿ ಸಣ್ಣ ತಿದ್ದುಪಾಟನ್ನು ಸೂಚಿಸಿ ಒತ್ತಾಯ ಮಾಡಲು ನಾನು ಅದಕ್ಕೆ ಒಪ್ಪಿದೆನು ಹಾಗೆಯೇ ದೇಶಬಂಧುಗಳ ಸಲಹೆಯ ಮೇರೆಗೆ ಇನ್ನು ಕೆಲವು ತಿದ್ದುಪಾಟುಗಳಾದಮೇಲೆ ಅಸಹಕಾರದ ಪ್ರಸ್ತಾಪವು ಏಕಮತದಿಂದ ಅಂಗೀಕೃತವಾಯಿತು

ಮಹಾಸಭೆಯ ವ್ಯವಸ್ಥಾಕ್ರಮದ ಮಾರ್ಪಾಟನ್ನು ಕುರಿತ ಗೊತ್ತುವಳಿಯೂ ಈ ಅಧಿವೇಶನದಲ್ಲಿಯೇ ಚರ್ಚೆಗೆ ಬರುವದಿದ್ದಿತು ಉಪಸಮಿತಿಯು ಸೂಚಿಸಿದ ಗೊತ್ತುವಳಿಯು ಕಲ್ಕತ್ತೆಯ ಅಧಿವೇಶನದಲ್ಲೇ ಮಹಾಸಭೆಯ ಮುಂದಿಡಲ್ಪಟ್ಟಿದ್ದಿತಾದುದರಿಂದ ಆ ವಿಷಯದಲ್ಲಿ ಅಭಿಪ್ರಾಯಪ್ರಕಟಣೆಯೂ ಚರ್ಚೆಯೂ ಸಂಪೂರ್ಣವಾಗಿ ನಡೆದಿದ್ದಿತು ನಾಗಪುರದ ಅಧಿವೇಶನದಲ್ಲಿ ಇದು ಅಂತಿಮ ತೀರ್ಮಾನಕ್ಕೆ ಬಂದಾಗ ಶ್ರೀ. ವಿಜಯರಾಘವಾಚಾರ್ಯರು ಅಧ್ಯಕ್ಷರಾಗಿದ್ದರು ವಿಷಯನಿರ್ಧಾರಕ ಸಮಿತಿಯು ಈ ಗೊತ್ತುವಳಿಯನ್ನು ಒಂದೇ ಒಂದು ಮುಖ್ಯ ಬದಲಾವಣೆಯೊಂದಿಗೆ ಸ್ವೀಕರಿಸಿತು ನಾನು ಬರೆದಿದ್ದ ಗೊತ್ತುವಳಿಯಲ್ಲಿ ಪ್ರತಿನಿಧಿಗಳ ಸಂಖ್ಯೆಯು ೧೫೦೦ ಎಂದು ಇದ್ದಿತು.

ವಿಷಯನಿರ್ಧಾರಕ ಸಮಿತಿಯು ಇದನ್ನು ೬,೦೦೦ಕ್ಕೆ ಒದಗಾಯಿಸಿತು. ಇದು ದುಡುಕಿನ ತೀರ್ಮಾನವೆಂದು ನನ್ನ ಎಣಿಕೆ. ಈಚೆಗೆ ಕಳೆದ ವರ್ಷಗಳ ಅನುಭವವೆಲ್ಲಾ ನನ್ನ ಈ ಅಭಿಪ್ರಾಯವನ್ನು ಸ್ಥಿರಗೊಳಿಸಿದೆ. ಹೆಚ್ಚು ಮಂದಿ ಪ್ರತಿನಿಧಿಗಳಿದ್ದರೆ ಕಾರ್ಯನಿರ್ವಾಹಕ್ಕೆ ಸಹಾಯವಾಗುವುದೆಂದಾಗಲಿ ಇದು ಪ್ರಜಾಪ್ರಭುತ್ವ ತತ್ತ್ವವನ್ನು ರಕ್ಷಿಸುವುದೆಂದಾಗಲಿ ನಂಬುವದು ಕೇವಲ ಭ್ರಮೆಯೆಂದು ನಾನು ಹೇಳುತ್ತೇನೆ. ಹೇಗಾದರೂ ಸರಿಯೆ ಎಂದು ಚುನಾಯಿಸಿದ ಆರು ಸಹಸ್ರ ಮಂದಿ ಜವಾಬ್ದಾರಿಯಿಲ್ಲದ ಜನರಿಗಿಂತ ಪ್ರಜಾಹಿತರಕ್ಷಕರೂ ವಿಶಾಲಮಾನಸರೂ ಸತ್ಯಶೀಲರೂ ಆದ ಹದಿನೈದುನೂರು ಮಂದಿ ಪ್ರತಿನಿಧಿಗಳು ಎಷ್ಟೋ ಉತ್ತಮರಾದ ಪ್ರಜಾತಂತ್ರರಕ್ಷಕರಾಗಿರುವರು. ಪ್ರಜಾತಂತ್ರವನ್ನು ರಕ್ಷಿಸಬೇಕಾದರೆ ಜನರಲ್ಲಿ ಪ್ರಖರವಾದ ಸ್ವಾತಂತ್ರ್ಯೇಚ್ಛೆಯೂ ಸ್ವಾಭಿಮಾನವೂ ಐಕ್ಯಭಾವವೂ ಇರಬೇಕಲ್ಲದೆ ಅವರು ಸತ್ಯಶೀಲರೂ ಪ್ರಾಮಾಣಿಕರೂ ಆದವರನ್ನೇ ತಮ್ಮ ಪ್ರತಿನಿಧಿಗಳನ್ನಾಗಿ ಚುನಾಯಿಸಲು ಕಂಕಣಬದ್ಧರಾಗಿರಬೇಕು. ಆದರೆ ವಿಷಯನಿರ್ಧಾರಕ ಸಮಿತಿಗೆ ಸಂಖ್ಯೆಯ ಭ್ರಮೆಯು ಹಿಡಿದುದರಿಂದ ಅದಕ್ಕೆ ಆರು ಸಹಸ್ರವನ್ನು ದಾಟಿಹೋಗಲು ಕೂಡ ಇಷ್ಟವಿದ್ದಿತು. ಅಷ್ಟಕ್ಕೆ ಒಪ್ಪಿದುದು ಕೇವಲ ರಾಜಿಯ ದೃಷ್ಟಿಯಿಂದ.

ಮಹಾಸಭೆಯ ಧ್ಯೇಯದ ವಿಷಯವಾಗಿ ವಿಶೇಷ ಚರ್ಚೆ ನಡೆಯಿತು. ನಾನು ಮಹಾಸಭೆಗೆ ಒಪ್ಪಿಸಿದ್ದ ವ್ಯವಸ್ಥಾಕ್ರಮದ ವರದಿಯಲ್ಲಿ ಧ್ಯೇಯವು 'ಶಕ್ಯವಿದ್ದರೆ ಬ್ರಿಟಿಷ್ ಚಕ್ರಾಧಿಪತ್ಯದೊಳಗೆ, ಇಲ್ಲದಿದ್ದರೆ ಅದರ ಹೊರಗೆ, ಸ್ವರಾಜ್ಯವನ್ನು ಸಾಧಿಸುವದು' ಎಂದಿದ್ದಿತು. ಮಹಾಸಭೆಯ ಒಂದು ಪಕ್ಷವು ಈ ಧ್ಯೇಯವನ್ನು ಸಾಮ್ರಾಜ್ಯದೊಳಗೆ ಸ್ವರಾಜ್ಯಸಾಧನೆಗೆ ಮಾತ್ರ ನಿಲ್ಲಿಸಲಿಷ್ಟಪಟ್ಟಿತು. ಈ ಪಕ್ಷದ ಅಭಿಪ್ರಾಯವನ್ನು ಪಂಡಿತ ಮಾಲವೀಯರೂ ಮಿ. ಜಿನ್ನಾರವರೂ ವ್ಯಕ್ತಪಡಿಸಿದರು. ಆದರೂ ಅವರಿಗೇನೂ ಹೆಚ್ಚು ಮತಸೂಚಿ(ವೋಟು)ಗಳು ದೊರಕಲಿಲ್ಲ. ಮತ್ತು

ಆ ವರದಿಯಲ್ಲಿ ಸ್ವರಾಜ್ಯಸಾಧನೆಯ ಸಲಕರಣೆಗಳು ಶಾಂತವಾದವೂ ನ್ಯಾಯವಾದವೂ ಆಗಿರಬೇಕೆಂದಿದ್ದಿತು ಸಾಧನಮಾರ್ಗವನ್ನು ನಿಯಮದಿಂದ ಕಟ್ಟಬಾರದೆಂದು ವಾದಿಸಿ ಈ ಷರತ್ತನ್ನೂ ವಿರೋಧಿಸಿದರು ಆದರೆ ಇದನ್ನು ಕುರಿತ ಚರ್ಚೆಯು ಶಿಕ್ಷಾಪ್ರದವಾಗಿಯೂ ನಿಸ್ಸಂಕೋಚವಾಗಿಯೂ ನಡೆದಮೇಲೆ ಮಹಾಸಭೆಯು ಮೂಲ ಗೊತ್ತುವಳಿಯನ್ನೇ ಅಂಗೀಕರಿಸಿತು ಈ ವ್ಯವಸ್ಥಾಯಂತ್ರವನ್ನು ಪ್ರಜೆಗಳು ಪ್ರಾಮಾಣಿಕತೆಯಿಂದಲೂ ಚಾತುರ್ಯದಿಂದಲೂ ಉತ್ಸಾಹದಿಂದಲೂ ನಡಸಿದ್ದರೆ ಅದು ಪ್ರಜಾಶಿಕ್ಷಣವನ್ನು ಹರಡಲು ಪ್ರಬಲ ಸಾಧನವಾಗುತ್ತಿದ್ದಿತಲ್ಲದೆ ಆ ಕಾರ್ಯನಿರ್ವಾಹವೇ ನಮಗೆ ಸ್ವರಾಜ್ಯವನ್ನು ತರುತ್ತಿದ್ದಿತೆಂದು ನನ್ನ ಅಭಿಪ್ರಾಯ ಆದರೆ ಈ ವಿಷಯವನ್ನು ಕುರಿತು ಚರ್ಚಿಸುವದು ಇಲ್ಲಿ ಪ್ರಸ್ತುತವಲ್ಲ

ಹಿಂದೂಮುಸಲ್ಮಾನರ ಒಗ್ಗಟ್ಟು, ಅಸ್ಪೃಶ್ಯತಾನಿವಾರಣೆ ಮತ್ತು ಖಾದೀಪ್ರಚಾರ ಈ ವಿಷಯಗಳನ್ನು ಕುರಿತೂ ಈ ಅಧಿವೇಶನದಲ್ಲಿ ಠರಾವುಗಳು ಅಂಗೀಕೃತವಾದುವು ಅಂದಿನಿಂದ ಮಹಾಸಭೆಯ ಹಿಂದೂ ಸದಸ್ಯರು ಹಿಂದೂ ಧರ್ಮದಿಂದ ಅಸ್ಪೃಶ್ಯತಾಕಳಂಕವನ್ನು ದೂರಮಾಡುವ ಜವಾಬ್ದಾರಿಯನ್ನು ತಮ್ಮ ಮೇಲೆ ಹೊತ್ತುಕೊಂಡಿದ್ದಾರೆ, ಮತ್ತು ಮಹಾಸಭೆಯು ಭರತಖಂಡದ 'ಸಜೀವ ಅಸ್ಥಿಪಂಜರ'ಗಳೊಂದಿಗೆ ಖಾದಿಯ ಮೂಲಕ ಚೈತನ್ಯದಾಯಕ ಸಂಬಂಧವನ್ನು ಸ್ಥಾಪಿಸಿದೆ ಖಿಲಾಫತ್ತಿನ ಸಲುವಾಗಿ ಅಸಹಯೋಗವನ್ನು ಹೂಡಿದುದೇ ಹಿಂದೂಮುಸಲ್ಮಾನರ ಐಕ್ಯತೆಯನ್ನು ಸಾಧಿಸಲು ಮಹಾಸಭೆಯು ಕೈಗೊಂಡ ದೊಡ್ಡ ಕಾರ್ಯರೂಪ ಪ್ರಯತ್ನವಾಗಿದ್ದಿತು



# ಸಮಾಪ್ತಿ

ಆದರೆ ಇನ್ನು ಈ ಅಧ್ಯಾಯಗಳನ್ನು ಮುಗಿಸುವ ಕಾಲವು ಬಂದಿದೆ.

ಇಲ್ಲಿಂದ ಮುಂದೆ ನನ್ನ ಜೀವನವು ಎಷ್ಟುಮಟ್ಟಿಗೆ ಬಹಿರಂಗವಾಗಿದೆಯೆಂದರೆ ಅದರಲ್ಲಿ ಜನರಿಗೆ ತಿಳಿಯದಿರುವ ಅಂಶವು ಇಲ್ಲವೇ ಇಲ್ಲವೆನ್ನಬಹುದು ಇದೂ ಅಲ್ಲದೆ ನಾನು ೧೯೨೧ ರಿಂದ ರಾಷ್ಟ್ರ ಮಹಾಸಭೆಯ ಮುಖಂಡರೊಡನೆ ಅತ್ಯಾಪ್ತ ಸಂಬಂಧದಿಂದ ಕೆಲಸ ಮಾಡಿರುವದರಿಂದ ಅಲ್ಲಿಂದೀಚೆಗೆ ನನ್ನ ಜೀವಮಾನದಲ್ಲಿ ನಡೆದಿರುವ ಯಾವ ಸಂಘಟನೆಯನ್ನೂ ಆ ಸಂಬಂಧವನ್ನು ಕುರಿತು ಬರೆಯದೆ ವಿವರಿಸಲು ಸಾಧ್ಯವಿಲ್ಲ ಏಕೆಂದರೆ ಸ್ವಾಮಿ ಶ್ರದ್ಧಾನಂದರು, ದೇಶಬಂಧುಗಳು, ಹಕೀಂ ಸಾಹೇಬರು ಮತ್ತು ಲಾಲಾಜಿಯವರು ಇಂದು ಜೀವಂತರಾಗಿಲ್ಲವಾದರೂ ನಮ್ಮ ಸುದೈವದಿಂದ ಮಹಾಸಭೆಯ ಇತರ ಅನೇಕ ವೃದ್ಧಯೋಧಾಗ್ರಣಿಗಳು ನಮ್ಮೊಡನೆ ಕಾರ್ಯವನ್ನು ನಿರ್ವಹಿಸುತ್ತಾ ಜೀವಂತರಾಗಿದ್ದಾರೆ ನಾನು ಮೇಲೆ ವಿವರಿಸುವ ದೊಡ್ಡ ಸುಧಾರಣೆಗಳಿಂದೀಚಿನ ಮಹಾಸಭೆಯ ಇತಿಹಾಸವು ಇನ್ನೂ ಪಾಕ ಇಳಿದಿಲ್ಲ ಆದುದರಿಂದ ನಾನು ನನ್ನ ಪ್ರಯೋಗಗಳನ್ನು ಇನ್ನೂ ಮುಂದೆ ವರ್ಣಿಸತೊಡಗಿದರೆ ಮುಖಂಡರೊಡನೆ ನನ್ನ ಸಂಬಂಧವನ್ನು ವಿವರಿಸದಿರುವದು ಶಕ್ಯವಲ್ಲ ಇದನ್ನು ನಾನು ಸದ್ಯಕ್ಕಾದರೂ ಮಾಡುವಂತಿಲ್ಲ—ಇನ್ನೇತಕ್ಕಲ್ಲದಿದ್ದರೂ ಔಚಿತ್ಯದ ದೃಷ್ಟಿಯಿಂದ. ಕಡೆಯ ಕಾರಣವೇನೆಂದರೆ, ಈಗ ನಡೆಯುತ್ತಲಿರುವ ಪ್ರಯೋಗಗಳ ವಿಷಯವಾಗಿ ನಾನು ಮಾಡಿರುವ ನಿರ್ಣಯಗಳು ಸುನಿಶ್ಚಿತವೆಂದು ಹೇಳುವಹಾಗಿಲ್ಲ. ಆದುದರಿಂದ ಈ ವೃತ್ತಾಂತವನ್ನು ಇಲ್ಲಿಗೆ ಮುಗಿಸುವದು ನನ್ನ ಸ್ಪಷ್ಟ ಕರ್ತವ್ಯವೆಂದು ತೋರುತ್ತದೆ. ಅಷ್ಟೇಕೆ, ನನ್ನ ಲೆಕ್ಕಣಿಯೇ ಹುಟ್ಟುಬುದ್ಧಿಯಿಂದ ನಿಶ್ಚಲತೆಯನ್ನು ಹೊಂದಿದೆ

ಪಾಠಕರನ್ನು ಬೀಳ್ಕೊಡಬೇಕಾಗಿ ಬಂದಿರುವದರಿಂದ ನನಗೆ ಸಂಕಟವಿಲ್ಲದಿಲ್ಲ ನನ್ನ ಪ್ರಯೋಗಗಳಿಗೆ ನಾನು ಕಟ್ಟುವ ಬೆಲೆ ಹೆಚ್ಚು. ಅವುಗಳ ಯೋಗ್ಯತೆಗೆ ತಕ್ಕಂತೆ ನಾನು ಅವುಗಳನ್ನು ವಿವರಿಸಿರುವೆನೋ ಇಲ್ಲವೋ ನಾನರಿಯೆ ವಿಶ್ವಾಸಯೋಗ್ಯವಾದ ವೃತ್ತಾಂತವನ್ನು ಬರೆಯಲು ಕೈಯಲ್ಲಾದ ಪ್ರಯತ್ನವನ್ನೆಲ್ಲಾ ಮಾಡಿರುವೆನೆಂದು ಮಾತ್ರ ನಾನು ಹೇಳಬಲ್ಲೆನು ನನ್ನ ದೃಷ್ಟಿಗೆ ಗೋಚರವಾದ ಹಾಗೆಯೇ ಸತ್ಯವನ್ನೂ ಅದು ನನಗೆ ದೊರತ ಮಾರ್ಗವನ್ನೂ ಸ್ವಲ್ಪವೂ ಹೆಚ್ಚುಕಡಿಮೆಯಿಲ್ಲದೆ ವರ್ಣಿಸುವದೇ ನನ್ನ ನಿರಂತರ ಪ್ರಯತ್ನವಾಗಿರುತ್ತದೆ ಈ ಅಭ್ಯಾಸದಿಂದ ನನಗೆ ಹೇಳಲಾಗದಷ್ಟು ಮನಶ್ಶಾಂತಿ ಲಭಿಸಿದೆ ಏಕೆಂದರೆ ಇದರಿಂದ ಸಂಶಯಾತ್ಮರಿಗೆ ಸತ್ಯದಲ್ಲಿಯೂ ಅಹಿಂಸೆಯಲ್ಲಿಯೂ ಭಕ್ತಿ ಹುಟ್ಟೀತೆಂಬ ಆಸೆಯು ನನ್ನಲ್ಲಿ ಉದಿಸಿದೆ

ನನ್ನ ಅನುಭವವೆಲ್ಲಾ ಸತ್ಯವಲ್ಲದೆ ಬೇರ ದೇವರಿಲ್ಲವೆಂದು ನನಗ ಮನಗಾಣಿಸಿದೆ ಸತ್ಯವನ್ನು ಸಾಧಿಸಲು ಅಹಿಂಸೆಯೊಂದೇ ಮಾರ್ಗವೆಂಬುದನ್ನು ಈ ಇತಿಹಾಸದ ಪ್ರತಿಯೊಂದು ಪುಟವೂ ಪಾಠಕರಿಗೆ ಸಾರದಿದ್ದರ ನಾನು ಈ ಅಧ್ಯಾಯಗಳೆಲ್ಲವನ್ನೂ ಬರದ ಶ್ರಮವು ಬರಿದೆಂದೆಣಿಸುತ್ತೇನೆ ಮತ್ತು ಒಂದು ವೇಳೆ ನನ್ನ ಶ್ರಮವು ಹೀಗೆ ನಿಷ್ಫಲವಾಗಿ ಪರಿಣಮಿಸಿದರೂ ಮೂಲತತ್ವನಾದ ನಾನು ಇದಕ್ಕೆ ಕಾರಣವೇ ಹೊರತು ಆ ತತ್ವವಲ್ಲವೆಂದು ತಿಳಿಯಲ ಅಹಿಂಸಯನ್ನು ಸಾಧಸಲು ನನ್ನ ಪ್ರಯತ್ನಗಳು ಎಷ್ಟೇ ಶ್ರದ್ಧಾಯುತವಾಗಿದ್ದರೂ ಅವು ಅಪೂರ್ಣ ಮತ್ತು ಅಪಕ್ವಗಳೆಂದೇ ಹೇಳಬೇಕು ನಾವು ದಿನವೂ ನೋಡುವ ಸೂರ್ಯನ ಪ್ರಭೆಗಿಂತ ಸತ್ಯದ ತೇಜಸ್ಸು ದಶಲಕ್ಷಣದಷ್ಟು ಅಧಿಕ ಅದರ ಪ್ರಕಾಶವು ಬಣ್ಣಿಸಲಸದಳವಾದುದು. ಅದರ ಸಹಸ್ರಕೋಟಿ ಕಿರಣಗಳಲ್ಲಿ ಆಗೊಂದು ಈಗೊಂದು ನನ್ನ ಕಣ್ಣಿಗೆ ಗೋಚರವಾಗಿದೆ ಇದರಿಂದ ಸತ್ಯದ ನಿಜಕಾಂತಿಯ ಪರಿಮಾಣವನ್ನು ಊಹಿಸುವದು ಶಕ್ಯವಲ್ಲ. ನಿಜವಾಗಿಯೂ ನನ್ನ ಕಣ್ಣಿಗೆ ಬಿದ್ದಿರುವದು ಆ ಪ್ರಚಂಡ ತೇಜೋ

ರಾಶಿಯು ಏರುಗಸ ಏರುಗು ಆದರೆ ನನ್ನ ಪ್ರಯೋಗಗಳ ಫಲಿತಾಂಶವಾಗಿ ನಾನು ಇಷ್ಟು ಮಾತ್ರ ವಿಶ್ವಾಸದಿಂದ ಹೇಳ ಬಲ್ಲೆನು—ಸತ್ಯದ ಪೂರ್ಣಕಾಂತಿಯು ದರ್ಶನವಾಗುವದಕ್ಕೆ ಮುಂಚೆ ಅಹಿಂಸೆಯನ್ನು ಪೂರ್ಣವಾಗಿ ಸಾಧಿಸಿರಬೇಕು

ಸರ್ವವ್ಯಾಪಿಯಾದ ಸತ್ಯನಾರಾಯಣನನ್ನು ಪ್ರತ್ಯಕ್ಷವಾಗಿ ಕಾಣಬೇಕಾದರೆ ಈ ಜಗತ್ತಿನ ಅತಿ ಕೀಳಾದ ಪ್ರಾಣಿಯನ್ನೂ ತನ್ನಂತೆಯೇ ಪ್ರೀತಿಸುವ ಯೋಗ್ಯತೆಯನ್ನು ಪಡೆಯಬೇಕು ಇದನ್ನು ಸಾಧಿಸಲಿಚ್ಛಿಸುವವನು ಜೀವನದ ಯಾವ ಕ್ಷೇತ್ರವನ್ನೂ ತ್ಯಜಿಸಲಾರನು ಇದರಿಂದಲೇ ನನ್ನ ಸತ್ಯೋಪಾಸನೆಯು ನನ್ನನ್ನು ರಾಜಕೀಯ ರಂಗಕ್ಕೆ ಎಳೆದಿದೆ ರಾಜಕಾರಣಕ್ಕೂ ಧರ್ಮಕ್ಕೂ ಸಂಬಂಧವಿಲ್ಲವೆಂದು ಹೇಳುವವರು ಧರ್ಮವೇನೆಂಬುದನ್ನೇ ಅರಿಯ ರೆಂದು ನಾನು ನಿಸ್ಸಂದೇಹವಾಗಿ, ಆದರೂ ಪೂರ್ಣ ನಮ್ರತೆ ಯಿಂದ, ಹೇಳಬಲ್ಲೆನು

ಆತ್ಮಶುದ್ಧಿಯಿಲ್ಲದೆ ಸಕಲ ಪ್ರಾಣಿಗಳಲ್ಲಿಯೂ ಆತ್ಮೀಯತೆ ಯನ್ನು ಕಾಣುವದು ಅಸಾಧ್ಯ, ಆತ್ಮಶುದ್ಧಿಯಿಲ್ಲದೆ ಅಹಿಂಸಾತತ್ವದ ಆಚರಣೆಯು ಕೇವಲ ಕನಸಾಗಿ ನಿಲ್ಲಬೇಕು, ಅಂತಃಶುದ್ಧಿಯಿಲ್ಲ ದವನು ಈಶ್ವರಸಾಕ್ಷಾತ್ಕಾರವನ್ನು ಎಂದಿಗೂ ಪಡೆಯಲಾರನು, ಆದುದರಿಂದ ಆತ್ಮಶುದ್ಧಿಯೆಂದರೆ ಜೀವನದ ಸಕಲ ಕ್ಷೇತ್ರಗಳ ಲ್ಲಿಯೂ ಶುದ್ಧತೆಯನ್ನು ಸ್ಥಾಪಿಸುವದೆಂದರ್ಥವಾಗಬೇಕು ಶುದ್ಧಿ ಯು ಬಹುಬೇಗನೆ ಹರಡುವ ಸ್ವಭಾವವುಳ್ಳದಾದುದರಿಂದ ಆತ್ಮ ಶುದ್ಧಿಯು ಅಗತ್ಯವಾಗಿ ಆವರಣಶುದ್ಧಿಯನ್ನು ಎಸಗುತ್ತದೆ

ಆದರೆ ಆತ್ಮಶುದ್ಧಿಯ ಪಥವು ಕಠಿಣ, ಕಡಿದು ಸಂಪೂರ್ಣ ಶುದ್ಧಿಯನ್ನು ಸಾಧಿಸಬೇಕಾದರೆ ಕಾಯಾ ವಾಚಾ ಮನಸಾ ನಿರ್ವಿಕಾರನಾಗಬೇಕು, ರಾಗದ್ವೇಷಗಳೆಂಬ ಪರಸ್ಪರವಿರುದ್ಧ ಪ್ರವಾಹಗಳನ್ನು ದಾಟಬೇಕು ನಾನು ಎಡೆಬಿಡದೆ ಪ್ರಯತ್ನಪಡು

ತ್ರಿರುವನಾದರೂ ಈ ತ್ರಿಮುಖಶುದ್ಧಿಯನ್ನು ಸಾಧಿಸಿಲ್ಲವೆಂದು ನನಗೆ ಗೊತ್ತು ಆದುದರಿಂದಲೇ ಜಗದ ಹೊಗಳಿಕೆಯು ನನ್ನನ್ನು ಸಂತಸಗೊಳಿಸುವದಿಲ್ಲ ಮತ್ತೆ ನೋಡಿದರೆ ಅನೇಕವೇಳೆ ಅದು ನನಗೆ ಮನೋವೇಧನೆಯನ್ನುಂಟುಮಾಡುತ್ತದೆ ಶಸ್ತ್ರಯುದ್ಧದಿಂದ ಬಾಹ್ಯಪ್ರಪಂಚವನ್ನು ಗೆಲ್ಲುವದಕ್ಕಿಂತ ಹಿಡಿತಕ್ಕೆ ಸಿಕ್ಕದ ಸೂಕ್ಷ್ಮಗತಿಯುಳ್ಳ ಈ ರಾಗದ್ವೇಷಗಳನ್ನು ಜಯಿಸುವದು ಬಹು ದುಸ್ಸಾಧ್ಯವೆಂದು ನನಗೆ ತೋರುತ್ತದೆ ನಾನು ಭರತಖಂಡಕ್ಕೆ ಹಿಂತಿರುಗಿದಂದಿನಿಂದ ನನ್ನೊಳಗಡಗಿ ಮಲಗಿರುವ ಈ ವಿಕಾರಗಳು ನನ್ನ ಅನುಭವಕ್ಕೆ ಬಂದಿರುತ್ತವೆ ಇದರ ಅರಿವಿನಿಂದ ನಾನು ಲಜ್ಜಿತನಾಗಿರುವೆನೇ ವಿನಾ ಎದೆಗುಂದಿಲ್ಲ ಈ ಅನುಭವಗಳೂ ಪ್ರಯೋಗಗಳೂ ನನ್ನ ಇರವಿನ ಹೊರೆಯನ್ನು ಕಳೆದಿವೆ, ಅತ್ಯಾನಂದವನ್ನುಂಟುಮಾಡಿವೆ ಆದರೆ ಇನ್ನೂ ನನ್ನ ಮುಂದೆ ದುರ್ಗಮವಾದ ದಾರಿಯಿರುವದು ನನಗೆ ಗೊತ್ತು ನಾನು ಶೂನ್ಯನಾಗಬೇಕು ತಾನು ಎಲ್ಲರಿಗಿಂತಲೂ ಕೀಳೆಂದು ಸ್ವತಂತ್ರಬುದ್ಧಿಯಿಂದ ತಿಳಿಯುವವರೆಗೂ ಯಾವನಿಗೂ ಮೋಕ್ಷವಿಲ್ಲ ಅಹಿಂಸೆಯು ನಮ್ರಭಾವದ ಚರಮಸೀಮೆ

ಇನ್ನು ಪಾಠಕರ ಅಪ್ಪಣೆಯನ್ನು ಪಡೆದು ಈ ವೃತ್ತಾಂತವನ್ನು ತಾತ್ಕಾಲಿಕವಾಗಿಯಾದರೂ ಮುಗಿಸುವೆನು ಅವರನ್ನು ಬೀಳ್ಕೊಡುತ್ತಾ ನಾನು ಬಿನ್ನವಿಸುವದೇನೆಂದರೆ ಸತ್ಯಮೂರ್ತಿಯಾದ ಈಶ್ವರನು ನನಗೆ ಕಾಯಾ ವಾಚಾ ಮನಸಾ ಅಹಿಂಸೆಯ ವರವನ್ನು ನೀಡಲೆಂಬ ಪ್ರಾರ್ಥನೆಯಲ್ಲಿ ಅವರೂ ನನ್ನೊಡನೆ ಭಾಗಿಗಳಾಗಲಿ



# ಟಿಪ್ಪಣಿಗಳು

**ಫೀನಿಕ್ಸ್ ಆಶ್ರಮ** (ಪು ೧)

ೡನೆಯ ಭಾಗ ಪು ೯೩–೯೬ ನೋಡಿ

**ಯುದ್ಧ** (ಪು ೧)

ೡನೆಯ ಭಾಗದ 'ಮಹಾಯುದ್ಧ' ಎಂಬ ಟಿಪ್ಪಣಿಯನ್ನು ನೋಡಿ

**ಆಂಡ್ರ್ಯೂಸ್, ರೆವರೆಂಡ್ ಸಿ. ಎಫ್.** (ಪು ೧)

ೡನೆಯ ಭಾಗದ ಟಿಪ್ಪಣಿಯನ್ನು ನೋಡಿ

**ಕಾಂಗ್ರಿಯ ಗುರುಕುಲ, ಸ್ವಾಮಿ ಶ್ರದ್ಧಾನಂದರು** (ಪು ೧

ಸ್ವಾಮಿ ಶ್ರದ್ಧಾನಂದರ ಹೆಸರು ಪೂರ್ವಾಶ್ರಮದಲ್ಲಿ ಮುನ್ಷೀರಾಮರೆಂದು ಇವರು ಲಾಹೋರಿನಲ್ಲಿ ಪ್ರಸಿದ್ಧ ವಕೀಲರಾಗಿದ್ದರು. ಆರ್ಯಸಮಾಜ ಸ್ಥಾಪಕರಾದ ಸ್ವಾಮಿ ದಯಾನಂದ ಸರಸ್ವತಿಯವರ ಮುಖ್ಯ ಶಿಷ್ಯರಲ್ಲಿ ಇವರೊಬ್ಬರು ವೇದಗಳಲ್ಲಿ ಪ್ರತೀತವಾಗಿರುವ ಧರ್ಮವು ಶುದ್ಧವಾದುದೆಂದೂ ಅದು ಇತ್ತೀಚಗೆ ಬೆಳೆದು ಬಂದ ಪದ್ಧತಿಗಳಿಂದ ಮುಸುಕಾಗಿರುವುದೆಂದೂ ಮೂರ್ತಿಪೂಜೆಗೆ ವೇದದ ಆಧಾರವಿಲ್ಲವೆಂದೂ ಆರ್ಯಸಮಾಜದವರ ನಂಬಿಕೆ ಪ್ರಾಚೀನ ಭಾರತದ ಸಾಂಸ್ಕೃತಿಕ ಉನ್ನತಿಗೆ ಅಂದಿನ ಗುರುಕುಲಗಳೇ ತಳಹದಿಯಾಗಿದ್ದುವೆಂದೂ ಅಂತಹ ಗುರುಕುಲಗಳ ಮೂಲಕವೇ ಇಂದಿನ ಭಾರತದ ಉದ್ಧಾರವಾಗಲು ಸಾಧ್ಯವೆಂದೂ ಎಣಿಸಿ ಶ್ರದ್ಧಾನಂದರು ಹರಿದ್ವಾರದ ಹತ್ತಿರವಿರುವ ಕಾಂಗ್ರಿಯಲ್ಲಿ ಗಂಗಾನದಿಯ ತೀರದಲ್ಲಿ ಗುರುಕುಲವನ್ನು ಸ್ಥಾಪಿಸಿದರು ಇವರು ಅಸ್ಪೃಶ್ಯತಾನಿವಾರಣೆಗಾಗಿ ಬಹು ಸಾಹಸಪಟ್ಟರು. ರಾಜಕೀಯ ವಿಚಾರದಲ್ಲಿ ಇವರು ಪ್ರಗತಿ ಪಕ್ಷಕ್ಕೆ ಸೇರಿದ್ದರು. ೧೯೧೯ರಲ್ಲಿ ಜಾಲಿಯಾನ್‌ವಾಲಾ

ಬಾಗಿನ ಹತ್ಯಾಕಾಂಡದ ಸಮಯದಲ್ಲಿ ದೆಹಲಿಯ ಚೀಫ್ ಕಮಿಷನರು ಜನರನ್ನು ಗುಂಡಿನಿಂದ ಸುಡುವೆವೆಂದು ಹೆದರಿಸಿದಾಗ ಎದೆಗೊಟ್ಟು ನಿಂತ ವೀರರಿವರು. ಹಿಂದೂ ಸಮಾಜದ ಪುನರುತ್ಥಾಪನೆಗಾಗಿ ಇವರು 'ಶುದ್ಧಿ'ಯನ್ನೂ 'ಸಂಘಟನೆ'ಯನ್ನೂ ಆರಂಭಿಸಿದುದರಿಂದ ಇವರು ಹಲವು ಮುಸಲ್ಮಾನರ ಹಗಗೇಡಾದರು. ಇಂತಹರಲ್ಲಿ ಒಬ್ಬನು ಇವರನ್ನು ೧೯೨೬ನೇ ಡಿಸಂಬರಿನಲ್ಲಿ ಕೊಂದು ಹಾಕಿದನು

**ರವೀಂದ್ರನಾಥ ಠಾಕೂರರು, ಶಾಂತಿನಿಕೇತನ** (ಪು ೧)

ಇವರು ಮಹರ್ಷಿ ದೇವೇಂದ್ರನಾಥ ಠಾಕೂರರ ಮಕ್ಕಳು ಇವರು ೧೮೬೧ರಲ್ಲಿ ಜನಿಸಿದರು 'ಗೀತಾಂಜಲಿ'ಯನ್ನು ರಚಿಸಿದುದಕ್ಕಾಗಿ ಇವರಿಗ ೧೯೧೩ರಲ್ಲಿ ನೊಬೇಲ್ ಬಹುಮಾನವು ದೊರಕಿತು ಅಂದಿನಿಂದೀಚೆಗೆ ಇವರು ಏಷಿಯದ ಕವಿಸಾರ್ವಭೌಮರೆಂದು ಖ್ಯಾತಿವೆತ್ತಿದ್ದಾರೆ ೧೯೧೯ರಲ್ಲಿ ಬ್ರಿಟಿಷ್ ಸರಕಾರವು ಪಂಜಾಬಿನಲ್ಲಿ ನಡೆಸಿದ ಅತ್ಯಾಚಾರದಿಂದ ಇವರು ಕಡು ಮನನೊಂದವರಾಗಿ ತಮಗೆ ದೊರೆತಿದ್ದ 'ಸರ್' ಎಂಬ ಬಿರುದನ್ನು ತ್ಯಜಿಸಿದರು ತಮ್ಮ ಶಿಕ್ಷಣದ ಧ್ಯೇಯಗಳನ್ನು ಕಾರ್ಯರಂಗದಲ್ಲಿ ರೂಪುಗೊಳಿಸಲು ಇವರು ಕಲ್ಕತ್ತೆಯ ಹತ್ತಿರವಿರುವ ಬೋಲ್ಪುರದಲ್ಲಿ 'ಶಾಂತಿನಿಕೇತನ' ವನ್ನು ಸ್ಥಾಪಿಸಿದರು. ಅದನ್ನು ಪ್ರಪಂಚಕ್ಕೆಲ್ಲಾ ಸಾಂಸ್ಕೃತಿಕ ಕೇಂದ್ರವನ್ನಾಗಿ ಮಾಡಬೇಕೆಂಬ ಆಶಯದಿಂದ ಇವರು ಅಲ್ಲಿಗೆ ನಾನಾ ದೇಶದ ಪಂಡಿತರನ್ನು ಕರಸಿ 'ವಿಶ್ವಭಾರತಿ'ಯೆಂಬ ಸಂಸ್ಥೆಯನ್ನು ನಡೆಸುತ್ತಿದ್ದಾರೆ.

**ರುದ್ರರು, ಅಧ್ಯಾಪಕ ಸುಶೀಲ** (ಪು ೧)

ಇವರು ದೆಹಲಿಯ ಮಿಷನ್ ಕಾಲೇಜಿನ ಮುಖ್ಯಾಧ್ಯಾಪಕರಾಗಿದ್ದರು ಇವರು ಗತಿಸಿ ನಾಲ್ಕೈದು ವರ್ಷವಾಯಿತು

**ಗೋಖಲೆ, ಗೋಪಾಲ ಕೃಷ್ಣ** (ಪು ೨)

**೨ನೆಯ ಭಾಗದ ಟಿಪ್ಪಣಿಯನ್ನು ನೋಡಿ**

**ಕರಾರು ಕೂಲಿಗಾರರು** (ಪು ೨)

೨ನೆಯ ಭಾಗದ ೭ನೆಯ ಅಧ್ಯಾಯವನ್ನು ನೋಡಿ

**ಪೆಟಿಟ್, ಜಹಾಂಗೀರ್** (ಪು ೨)

ಮುಂಬಯಿಯ ಲಕ್ಷಾಧಿಕಾರಿಗಳಲ್ಲೊಬ್ಬರು 'ಇಂಡಿಯನ್ ಡೆಯ್ಲಿ ಮೆಯಿಲ್' ಪತ್ರಿಕೆಯ ಮಾಲಿಕರು

**ಮಹೆತಾ, ಸರ್ ಫಿರೋಜ್ ಷಹಾ** (ಪು ೩)

೧ನೆಯ ಭಾಗದ ಟಿಪ್ಪಣಿಯನ್ನು ನೋಡಿ

**ಜಿನ್ನಾ, ಮಹಮ್ಮದ್ ಅಲೀ** (ಪು ೩)

ಮುಂಬಯಿಯ ಪ್ರಸಿದ್ಧ ವಕೀಲರು ಇವರು ಮೊಟ್ಟಮೊದಲು ರಾಜಕೀಯ ಕ್ಷೇತ್ರವನ್ನು ಪ್ರವೇಶಿಸಿದಾಗ ಹಿಂದೂ–ಮುಸಲ್ಮಾನರ ಐಕ್ಯಕ್ಕಾಗಿ ಬಹು ಪ್ರಯತ್ನಪಟ್ಟರು ೧೯೧೭ರಲ್ಲಿ ಲಖನೌ ನಗರದಲ್ಲಿ ನೆರೆದ ರಾಷ್ಟ್ರಮಹಾಸಭೆಯ ಅಧಿವೇಶನದಲ್ಲಿ ಹಿಂದೂ–ಮುಸಲ್ಮಾನರ ಒಪ್ಪಂದವು ರೂಪುಗೊಳ್ಳುವಂತೆ ಮಾಡಿದ ಮುಖಂಡರಲ್ಲಿ ಇವರೊಬ್ಬರು ಇತ್ತೀಚೆಗ ಇವರು ಭಾರತೀಯ ಮುಸಲ್ಮಾನರ ಒಂದು ಭಾಗಕ್ಕೆ ನೇತೃಗಳಾಗಿದ್ದಾರೆ ಇವರ ರಾಜನೀತಿಯು 'ಮಂದ' ಪಕ್ಷಕ್ಕೆ ಸೇರಿದುದೂ ಅಲ್ಲ, 'ಪ್ರಗತಿ' ಪಕ್ಷಕ್ಕೆ ಸೇರಿದುದೂ ಅಲ್ಲ ಇವರದು 'ಸ್ವತಂತ್ರ' ಪಕ್ಷ ಇವರು ಉತ್ತಮ ವಾಗ್ಮಿಗಳೆಂದು ಹೆಸರುಪಡೆದಿದ್ದಾರೆ

**ವಿಲ್ಲಿಂಗ್ಡನ್, ಲಾರ್ಡ್** (ಪು ೫)

ಜನ್ಮ ೧೮೬೬ ಇವರು ಇಂಗ್ಲೆಂಡಿನ ಪ್ರಜಾಪಕ್ಷ ಸಭೆಯ ಸದಸ್ಯರಾಗಿದ್ದು ೧೯೧೩ರಲ್ಲಿ ಮುಂಬಯಿ ಆಧಿಪತ್ಯದ ಗವರ್ನರರಾಗಿ ಈ ದೇಶಕ್ಕೆ ಬಂದರು ಆ ಸ್ಥಾನದಲ್ಲಿ ೧೯೧೯ರ ವರೆಗಿದ್ದು ಅನಂತರ ಮದರಾಸ್ ಆಧಿಪತ್ಯದ ಗವರ್ನರರಾದರು ಈ ಹುದ್ದೆಯಿಂದ ೧೯೨೪ರಲ್ಲಿ ನಿವೃತ್ತರಾಗಿ ೧೯೨೬ರಲ್ಲಿ ಕೆನಡಾ ಡೊಮಿನಿಯನ್ನಿನ

ಗವರ್ನರ್ ಜನರಲ್ ಆದರು. ಇದೇ ವರ್ಷ ಏಪ್ರಿಲ್ ತಿಂಗಳಿನಲ್ಲಿ ಇವರು ಹಿಂದುಸ್ಥಾನದ ವೈಸ್‌ರಾಯರಾಗಿ ಈ ದೇಶಕ್ಕೆ ಹಿಂತಿರುಗಿದರು.

**ಭಾರತ ಸೇವಾ ಸಂಘ** (ಪು ೬)

**೨ನೆಯ ಭಾಗದ 'ಗೋಖಲೆ' ಎಂಬ ಟಿಪ್ಪಣಿಯನ್ನು ನೋಡಿ**

**ದಕ್ಷಿಣ ಆಫ್ರಿಕದ ಸತ್ಯಾಗ್ರಹ** (ಪು ೯)

ಇದರ ಚರಿತ್ರೆಯನ್ನು ಗಾಂಧೀಜಿಯವರು 'ದಕ್ಷಿಣ ಆಫ್ರಿಕದ ಸತ್ಯಾಗ್ರಹದ ಇತಿಹಾಸ'ವೆಂಬ ಪುಸ್ತಕದಲ್ಲಿ ವಿವರಿಸಿದ್ದಾರೆ ಇದರ ಕನ್ನಡ ಭಾಷಾಂತರವು ಇಷ್ಟರಲ್ಲೇ ಪ್ರಕಟವಾಗುವುದು

**ಚೆಮ್ಸ್‌ಫರ್ಡ್, ಲಾರ್ಡ್** (ಪು ೧೩)

ಜನ್ಮ ೧೮೬೮ ಇವರು ೧೯೧೬ರಲ್ಲಿ ಹಿಂದುಸ್ಥಾನಕ್ಕೆ ವೈಸ್‌ರಾಯರಾಗಿ ಬಂದರು ಆಗ ಬ್ರಿಟಿಷ್ ಮಂತ್ರಿ ಮಂಡಲದಲ್ಲಿ ಹಿಂದುಸ್ಥಾನದ ಮೇಲ್ವಿಚಾರಕ ಸಚಿವರಾಗಿದ್ದ ಮಾಂಟೆಗ್ಯೂರವರೂ ಇವರೂ ಸೇರಿ ರಚಿಸಿದ ವರದಿಯೇ ೧೯೧೯ರಲ್ಲಿ ಸ್ಥಾಪಿತವಾದ ರಾಜಕೀಯ ಸುಧಾರಣೆಗಳ ಆಧಾರವಾಗಿದ್ದಿತು ಪಂಜಾಬಿನ ಹತ್ಯಾಕಾಂಡವು ನಡೆದುದು ಗಾಂಧೀಜಿಯವರು ಅಸಹಯೋಗವನ್ನು ಪ್ರಾರಂಭಿಸಿದುದು ಇವರ ಕಾಲದಲ್ಲಿಯೇ

**ಕಾಕಾ ಕಾಲೇಲ್ಕರ್** (ಪು ೧೫)

ಇವರು ಮೊನ್ನೆ ಸತ್ಯಾಗ್ರಹ ಯುದ್ಧವು ಆರಂಭವಾಗುವವರಗೂ ಸಾಬರ್ಮತಿ ಆಶ್ರಮದಲ್ಲಿ ಗಾಂಧೀಜಿಯವರ ಸಹಯೋಗಿಗಳಾಗಿದ್ದರು ಈ ಸಂಬಂಧವಾಗಿ ಗಾಂಧೀಜಿಯವರನ್ನು ಸರೆಮನೆಯಲ್ಲಿಟ್ಟಾಗ ಅವರ ಸಂಗಾತಿಗಳಾಗಿದ್ದರು ಇವರು ಕನ್ನಡ ದೇಶದಲ್ಲಿ ಹುಟ್ಟಿ ಮರಾಠಿಯನ್ನು ತಾಯ್ನುಡಿಯಾಗಿ ಉಳ್ಳವರಾಗಿ ಗುಜರಾತಿಯಲ್ಲಿ ಉತ್ತಮ ಪಂಡಿತರೆನಿಸಿಕೊಂಡಿದ್ದಾರೆ.

**ಹರಿಹರ ಶರ್ಮಾ** (ಪು ೧೫)

ಇವರು ದಕ್ಷಿಣ ಭಾರತ ಹಿಂದೀ ಪ್ರಚಾರ ಸಭೆಯ ಮುಖ್ಯ ಕಾರ್ಯದರ್ಶಿಗಳು ಮೊನ್ನಿನ ಸವಿನಯ ಕಾನೂನು ಭಂಗದಲ್ಲಿ ಭಾಗಿಗಳಾಗಿ ಇವರೂ ಕೆಲವು ಕಾಲ 'ಚಕ್ರವರ್ತಿಗಳ ಅತಿಥಿ'ಗಳಾಗಿದ್ದರು.

**ಸ್ವಾಮಿ ಆನಂದರು** (ಪು ೧೫)

೧ನೆಯ ಭಾಗದ ಟಿಪ್ಪಣಿಯನ್ನು ನೋಡಿ

**ಗಾಂಧೀ, ಮಗನಲಾಲ** (ಪು ೧೬)

೩ನೆಯ ಭಾಗದ ಟಿಪ್ಪಣಿಯನ್ನು ನೋಡಿ

**ಪಿಯರ್ಸನರು** (ಪು ೧೬)

ಭಾರತದ ಜನಜೀವನದೊಡನೆ ಸಂಪೂರ್ಣ ಐಕ್ಯತೆಯಿಂದ ತಮ್ಮ ಜೀವನವನ್ನು ನಡಸಿದ ಅತ್ಯಲ್ಪ ಮಂದಿ ಪಾಶ್ಚಾತ್ಯರಲ್ಲಿ ಇವರೊಬ್ಬರು. ಇವರ ಆಂಗ್ಲ ಕವಿತೆಗಳು ಉತ್ಕೃಷ್ಟವಾದವು

**'ಹಿಂದ್ ಸ್ವರಾಜ್'** (ಪು ೧೯)

ಭಾರತದ ಭವಿಷ್ಯಜ್ಜೀವನವು ಯಾವ ರೀತಿಯಿಂದಿರಬೇಕೆಂಬುದನ್ನು ಗಾಂಧೀಜಿಯವರು ಈ ಪುಸ್ತಕದಲ್ಲಿ ಪ್ರಶ್ನೋತ್ತರ ರೂಪದಲ್ಲಿ ವಿವರಿಸಿದ್ದಾರ ಸರಕಾರದವರು ಇದನ್ನು ಕೆಲವು ಕಾಲ ಬಹಿಷ್ಕರಿಸಿದ್ದರು ಶ್ರೀ ದ ಕೃ ಭಾರದ್ವಾಜರು ಇದನ್ನು ಕನ್ನಡಿಸಿದ್ದಾರೆ.

**ಶ್ರೀನಿವಾಸಶಾಸ್ತ್ರಿಗಳು, ವಿ. ಎಸ್.** (ಪು ೨೫)

೪ನೆಯ ಭಾಗದ ಟಿಪ್ಪಣಿಯನ್ನು ನೋಡಿ

**ವಸು, ಭೂಪೇಂದ್ರನಾಥ** (ಪು ೨೦)

೩ನೆಯ ಭಾಗದ ಟಿಪ್ಪಣಿಯನ್ನು ನೋಡಿ

**ಕುಂಜರು, ಪಂಡಿತ ಹೃದಯನಾಥ** (ಪು ೨೯)

ಇವರು ಈಗ ಭಾರತ ಸೇವಾ ಸಂಘದ ಉಪಾಧ್ಯಕ್ಷರಾಗಿಯೂ ಕೇಂದ್ರ ಕಾಯಿದೆ ಮಂಡಲದ ಸದಸ್ಯರಾಗಿಯೂ ಇದ್ದಾರೆ.

**ರಾಮದೇವ್, ಆಚಾರ್ಯ** (ಪು ೩೪)

ಈಗ ಇವರು ಕಾಂಗ್ರಿ ಗುರುಕುಲದ ಮುಖ್ಯಾಚಾರ್ಯರಾಗಿದ್ದಾರೆ

**ರಾಮರಕ್ಷ್** (ಪು ೩೫)

೧ನೆಯ ಭಾಗದ ಟಿಪ್ಪಣಿಯನ್ನು ನೋಡಿ

**ಗಾಂಧೀ, ಛಗನಲಾಲ** (ಪು ೩೬)

೪ನೆಯ ಭಾಗದ ಟಿಪ್ಪಣಿಯನ್ನು ನೋಡಿ

**ಬಾನರ್ಜಿ, ಸರ್ ಗುರುದಾಸ** (ಪು ೪೨)

೩ನೆಯ ಭಾಗದ ಟಿಪ್ಪಣಿಯನ್ನು ನೋಡಿ

**ಠಕ್ಕರ್, ಅಮೃತಲಾಲ** (ಪು ೪೩)

ಇವರು ಭಾರತ ಸೇವಾ ಸಂಘದ ಪ್ರಮುಖ ಸದಸ್ಯರಲ್ಲೊಬ್ಬರು. ಗುಜರಾತಿನಲ್ಲಿ ಕೀಳ್ಜಾತಿಯ ಜನರ ಮೇಲ್ಮೆಗಾಗಿ ಬಹು ಕೆಲಸ ಮಾಡಿದ್ದಾರೆ ಮೂಲ್ಸಿನ ಸತ್ಯಾಗ್ರಹ ಯುದ್ಧದಲ್ಲಿ ಇವರೂ ಸೆರಮನೆಯನ್ನು ಹೊಕ್ಕರು

**ಮಾಲವೀಯರು, ಪಂಡಿತ ಮದನ ಮೋಹನ** (ಪು ೪೮)

೧ನೆಯ ಭಾಗದ ಟಿಪ್ಪಣಿಯನ್ನು ನೋಡಿ

**ಹಾರ್ಡಿಂಜ್, ಲಾರ್ಡ್** (ಪು ೪೮)

೪ನೆಯ ಭಾಗದ ಟಿಪ್ಪಣಿಯನ್ನು ನೋಡಿ

**ರೀಡ್, ಸರ್ ಸ್ಟಾನ್ಲೆ** (ಪು ೫೦)

ಇವರು ಬಹುಕಾಲ ಮುಂಬಯಿಯ 'ಟೈಮ್ಸ್ ಆಫ್ ಇಂಡಿಯಾ' ಪತ್ರಿಕೆಯ ಸಂಪಾದಕರಾಗಿದ್ದರು.

**ಶ್ಯಾಮಲದಾಸ್, ಸರ್ ಲಲ್ಲೂಭಾಯಿ** (ಪು ೫೦)

ಮುಂಬಯಿಯ ವರ್ತಕರಲ್ಲೊಬ್ಬರು. ಇವರು ಕೆಲವು ಕಾಲ ಮುಂಬಯಿಯ ಮಂತ್ರಿ ಮಂಡಲದಲ್ಲಿದ್ದರು. ಪರಸ್ಪರ ಸಹಾಯ ಸಂಘಗಳ ವಿಷಯದಲ್ಲಿ ಬಹು ಅನುಭವಿಗಳು.

**ನಟರಾಜನ್, ಕೆ.** (ಪು ೫೦)

ಮುಂಬಯಿಯ ‘ಇಂಡಿಯನ್ ಸೋಷಿಯಲ್ ರಿಫಾರ್ಮರ್’ ಎಂಬ ಪತ್ರಿಕೆಯ ಸಂಪಾದಕರು ಇದಲ್ಲದೆ ಇವರು ‘ಇಂಡಿಯನ್ ಡೆಯ್ಲಿ ಮೆಯಿಲ್’ ಪತ್ರಿಕೆಯ ಸಂಪಾದಕರಾಗಿಯೂ ಇದ್ದಾರೆ. ಇವರು ಸಮಾಜಸುಧಾರಣಾಕಾರ್ಯದಲ್ಲಿ ನುರಿತವರು

**ಭಾರತ ರಾಷ್ಟ್ರಮಹಾಸಭೆ** (ಪು ೫೪)

೨ನೆಯ ಭಾಗದ ಟಿಪ್ಪಣಿಯನ್ನು ನೋಡಿ

**ರಾಜೇಂದ್ರ ಪ್ರಸಾದ್, ಬಾಬು** (ಪು ೫೭)

ಇವರು ಪಾಟ್ನಾದಲ್ಲಿ ಪ್ರಸಿದ್ಧ ವಕೀಲರಾಗಿದ್ದು ಚಂಪಾರಣ್ಯದ ಸತ್ಯಾಗ್ರಹದ ಸಂಬಂಧವಾಗಿ ಗಾಂಧೀಜಿಯವರ ಪರಿಚಯವನ್ನು ಹೊಂದಿದರು ಅಲ್ಲಿಂದೀಚೆಗೆ ಇವರು ಗಾಂಧೀಜಿಯವರ ಮುಖ್ಯ ಅನುಯಾಯಿಗಳಲ್ಲಿ ಒಬ್ಬರಾಗಿದ್ದಾರೆ ೧೯೨೦ರಲ್ಲಿ ಗಾಂಧೀಜಿಯವರು ಅಸಹಯೋಗವನ್ನು ಆರಂಭಿಸಿದಾಗ ಇವರು ತಮ್ಮ ವಕೀಲಿಯನ್ನು ಬಿಟ್ಟುಬಿಟ್ಟರು. ಅಲ್ಲಿಂದೀಚೆಗೆ ಇವರು ಖಾದೀ ಕಾರ್ಯದಲ್ಲಿ ಆಸಕ್ತರಾಗಿದ್ದಾರೆ ಮೊನ್ನಿನ ಸತ್ಯಾಗ್ರಹ ಯುದ್ಧದಲ್ಲಿ ಇವರನ್ನೂ ಜೈಲಿಗೆ ಒಯ್ದಿದ್ದರು ಇವರು ಚಂಪಾರಣ್ಯದ ಸತ್ಯಾಗ್ರಹದ ಇತಿಹಾಸವನ್ನು ಬರೆದಿದ್ದಾರೆ ಇದರ ಕನ್ನಡ ಅನುವಾದವು ಇಷ್ಟರಲ್ಲೇ ಪ್ರಕಟವಾಗುವುದು.

**ಮುಜಹರ್-ಉಲ್ ಹಕ್** (ಪು ೫೯)

ಇವರು ಪಾಟ್ನಾದಲ್ಲಿ ವಕೀಲಿ ವೃತ್ತಿಯಲ್ಲಿದ್ದ ಬ್ಯಾರಿಸ್ಟರು. ೧೯೨೧ರಲ್ಲಿ ಗಾಂಧೀಜಿಯವರ ಅಸಹಯೋಗ ಚಳವಳಿಗೆ ಸೇರಿ

ಕಾರಾಗೃಹವಾಸವನ್ನನುಭವಿಸಿದರು. ಈ ಪ್ರಕಾರದಲ್ಲಿ ಹಿಂದೂ ಮುಸಲ್ಮಾನರಿಗೆ ಪರಸ್ಪರ ಮಧುರ ಸಂಬಂಧವಿರಲು ಈ ಮಹಾತ್ಮರಂತಹರೇ ಕಾರಣರು. ಇವರು ಎರಡು ವರ್ಷಗಳ ಕೆಳಗೆ ಗತಿಸಿದರು.

**ಮುಸ್ಲಿಮ್ ಲೀಗ್** (ಪು ೫೯)

ಇದು ಭಾರತೀಯ ಮುಸಲ್ಮಾನರ ಮಹಾಸಭೆ. ಇದನ್ನು ಸ್ಥಾಪಿಸಿದವರು ಸರ್ ಸಯ್ಯದ್ ಅಹಮದಾ ಎಂಬವರು. ಮೊಟ್ಟಮೊದಲು ಇದು ಭಾರತ ರಾಷ್ಟ್ರ ಮಹಾಸಭೆಯ ಪ್ರತಿಕಕ್ಷಿಯಾಗಿ ಪ್ರಾರಂಭವಾಯಿತು. ಆದರೆ ೧೯೧೭ರಲ್ಲಿ ಎರಡು ಸಂಸ್ಥೆಗಳ ಅಧಿವೇಶನವೂ ಒಟ್ಟಿಗೆ ಲಖನೌನಗರದಲ್ಲಿ ಸೇರಿ ಎರಡಕ್ಕೂ ಒಪ್ಪಂದವಾಯಿತು. ಅಸಹಯೋಗದ ಚಳವಳಿಯು ಪ್ರಾರಂಭವಾದಂದಿನಿಂದ ಮುಸಲ್ಮಾನರಲ್ಲಿ ಅನೇಕರು ಖಿಲಾಫತಾ ಸಭೆಗೆ ಸೇರಿದುದರಿಂದ ಇದರ ಪ್ರಾಬಲ್ಯವು ಕಡಿಮೆಯಾಯಿತು. ಇತ್ತೀಚೆಗೆ ಈ ಸಂಸ್ಥೆಯಲ್ಲಿ ಎರಡು ಪಂಗಡಗಳೊಡದುವು. ಈಗ ಎಲ್ಲವನ್ನೂ ಒಟ್ಟುಗೂಡಿಸುವ ಪ್ರಯತ್ನವು ನಡೆಯುತ್ತಿದೆ.

**ಡಾ. ಚೋಯಿಥರಾಮ್ ಗಿದವಾಣಿ** (ಪು ೫೯)

ಸಿಂಧು ಪ್ರಾಂತದ ಮುಖಂಡರಲ್ಲೊಬ್ಬರು. ಇವರೂ ಮೊನ್ನಿನ ಸವಿನಯ ಕಾನೂನು ಭಂಗದ ಚಳವಳಿಯಲ್ಲಿ ಭಾಗಿಗಳಾಗಿ ಸೆರೆಮನೆಗೆ ಹೋಗಿದ್ದರು. ಕಳೆದ ಮಾರ್ಚ ತಿಂಗಳಲ್ಲಿ ಕರಾಚಿಯಲ್ಲಿ ನಡೆದ ರಾಷ್ಟ್ರಮಹಾಸಭೆಯ ಅಧಿವೇಶನದ ಸ್ವಾಗತ ಸಮಿತಿಯ ಅಧ್ಯಕ್ಷರಾಗಿದ್ದರಿವರು.

**ಗಂಗಾಧರರಾವ್ ದೇಶಪಾಂಡೆ** (ಪು ೮೩)

ಇವರು ಕರ್ಣಾಟಕದಲ್ಲಿ ಗಾಂಧೀಜಿಯವರ ಬಲಗೈಯಂತಿರುವರು. ಲೋಕಮಾನ್ಯರು ಜೀವಂತರಾಗಿದ್ದಾಗ ಇವರು ಅವರ ಆಪ್ತರಲ್ಲೊಬ್ಬರಾಗಿದ್ದರು. ಮರಾಠಿಯಲ್ಲೂ ಕನ್ನಡದಲ್ಲಿಯೂ ಪ್ರಸಿದ್ಧ ವಾಗ್ಮಿಗಳಿವರು. ಅನೇಕ ಬಾರಿ ಕಾರಾಗೃಹವಾಸವನ್ನನುಭವಿಸಿದ್ದಾರೆ.

**ಶ್ರೀ ಅವಂತಿಕಾಬಾಯಿ ಗೋಖಲೆ** (ಪು ೮೩)

ಇವರು ಕಳೆದ ವರ್ಷದ ಸತ್ಯಾಗ್ರಹ ಯುದ್ಧದಲ್ಲಿ ಭಾಗಿಗಳಾಗಿ ಮುಂಬಯಿಯ 'ಯುದ್ಧ ಸಭೆ'ಯ ಅಧ್ಯಕ್ಷರಾಗಿದ್ದರು ಇತರ ಮಹಿಳೆಯರೊಂದಿಗೆ ಇವರೂ ಜೈಲಿನಲ್ಲಿದ್ದರು ಇವರು ಮಹಿಳಾ ಶಿಕ್ಷಣಕ್ಕಾಗಿ ಅತ್ಯಂತ ಶ್ರಮಪಟ್ಟಿದ್ದಾರೆ.

**ಮಹಾದೇವ ದೇಶಾಯಿ** (ಪು ೮೩)

ಗಾಂಧೀಜಿಯವರು ದಕ್ಷಿಣ ಆಫ್ರಿಕದಿಂದ ಹಿಂತಿರುಗಿದಂದಿನಿಂದ ಇವರು ಗಾಂಧೀಜಿಯವರ ಸಹಯೋಗಿಗಳಾಗಿದ್ದಾರೆ. ಇವರನ್ನು ಗಾಂಧೀಜಿಯವರ ಆಧ್ಯಾತ್ಮಿಕ ಪುತ್ರರೆಂದರೂ ಎನ್ನಬಹುದು. ಗುಜರಾತಿಯಲ್ಲಿಯೂ ಇಂಗ್ಲಿಷಿನಲ್ಲಿಯೂ ಬಹು ಚೆನ್ನಾಗಿ ಬರೆಯುತ್ತಾರೆ ಇವರೂ ಸತ್ಯಾಗ್ರಹ ಯುದ್ಧದಲ್ಲಿ ಭಾಗಿಗಳಾಗಿದ್ದರೆಂದು ಹೇಳಬೇಕಾದುದಿಲ್ಲ

**ನರಹರಿ ಪರೀಖ್** (ಪು ೮೩)

ಗುಜರಾತ್ ವಿದ್ಯಾಪೀಠದ ಅಧ್ಯಾಪಕರು. ಆಧುನಿಕ ಗುಜರಾತಿ ಗ್ರಂಥಕರ್ತರಲ್ಲಿ ಇವರು ಪ್ರಸಿದ್ಧರು ಇವರೂ ಮೊನ್ನಿನ ಯುದ್ಧದಲ್ಲಿ ಭಾಗಿಗಳಾಗಿದ್ದರು

**ಸ್ಲೈ, ಸರ್ ಫ್ರಾಂಕ್** (ಪು ೯೧)

ಇವರು ಮಧ್ಯ ಪ್ರಾಂತದ ಗವರ್ನರರಾಗಿ ನಿವೃತ್ತರಾದರು

**ಶ್ರೀ ಅನಸೂಯಾಬಾಯಿ** (ಪು ೯೩)

ಇವರು ಸೇಠ್ ಅಂಬಾಲಾಲ್ ಸಾರಾಭಾಯಿಯವರ ತಂಗಿ ಅಹಮದಾಬಾದಿನ ಕೂಲಿಗಾರರ ಮಾರ್ಗದರ್ಶಿಗಳಿವರು ಸೇವಾಕಾರ್ಯಕ್ಕಾಗಿಯೇ ಇವರು ತಮ್ಮ ಜೀವನವನ್ನು ಮೀಸಲಾಗಿಟ್ಟಿದ್ದಾರೆ

F

**ಪಟೇಲ್, ವಲ್ಲಭಭಾಯಿಾ** (ಪು ೯೬)

ಇವರು ಅಹಮದಾಬಾದಿನಲ್ಲಿ ವಕೀಲರಾಗಿದ್ದರು ಗಾಂಧೀಜಿಯವರು ಅಸಹಕಾರವನ್ನಾರಂಭಿಸಿದೊಡನೆಯೇ ಅವರೊಡನೆ ಸೇರಿ ಗುಜರಾತಿನಲ್ಲಿ ಅದು ಪ್ರಚಂಡ ಭಾವವನ್ನು ತಾಳಲು ಕಾರಣರಾದರು. ಇವರು ಅನೇಕ ವರ್ಷ ಅಹಮದಾಬಾದಿನ ಪೌರ ಸಭಾಧ್ಯಕ್ಷರಾಗಿದ್ದರು ೧೯೨೮ರಲ್ಲಿ ಬಾರ್ದೋಲಿಯಲ್ಲಿ ನಡೆದ ಕರನಿರಾಕರಣ ಸತ್ಯಾಗ್ರಹಕ್ಕೆ ಇವರೇ ಮುಂದಾಳುಗಳಾಗಿದ್ದರು ಈ ಸಂದರ್ಭದಲ್ಲಿಯೇ 'ಸರದಾರ'ರೆಂಬ ಬಿರುದನ್ನು ಜನತೆಯು ಇವರಿಗೆ ಕೊಟ್ಟದು ಇವರು ಈ ವರ್ಷ ಕರಾಚಿಯಲ್ಲಿ ನಡೆದ ರಾಷ್ಟ್ರಮಹಾಸಭೆಯ ಅಧಿವೇಶನದ ಅಧ್ಯಕ್ಷರಾಗಿದ್ದರು ಇವರೂ ಹಲವು ಬಾರಿ ಸೆರೆಮನೆಯ ವಾಸವನ್ನನುಭವಿಸಿದ್ದಾರ

**ಶಂಕರಲಾಲ ಬ್ಯಾಂಕರ್** (ಪು ೯೬)

ಗಾಂಧೀಜಿಯವರ ಹತ್ತಿರದ ಅನುಯಾಯಿಗಳಲ್ಲಿ ಇವರೊಬ್ಬರು. ೧೯೨೧ರಲ್ಲಿ ಗಾಂಧೀಜಿಯವರಿಗೂ ಇವರಿಗೂ ಒಟ್ಟಿಗೇ ಕಾರಾಗೃಹವಾಸ ಶಿಕ್ಷೆಯು ವಿಧಿತವಾಯಿತು ಅಖಿಲ ಭಾರತ ಚರಖಾ ಸಂಘವು ಸ್ಥಾಪಿತವಾದಂದಿನಿಂದ ಇವರು ಅದರ ಕಾರ್ಯದರ್ಶಿಗಳಾಗಿದ್ದಾರ.

**ಟಾಲ್‌ಸ್ಟಾಯ್ ಫಾರ್ಮ್** (ಪು ೯೯)

೪ನೆಯ ಭಾಗದ ಟಿಪ್ಪಣಿಯನ್ನು ನೋಡಿ

**ಸೇರ್ ಅಂಬಾಲಾಲ್ ಸಾರಾಭಾಯಿಾ, ಶ್ರೀ ಸರಲಾದೇವೀ ಸಾರಾಭಾಯಿಾ** (ಪು ೧೦೪)

ಅಹಮದಾಬಾದಿನ ಪ್ರಸಿದ್ಧ ಗಿರಣಿ ಮಾಲಕರಲ್ಲಿ ಅಂಬಾಲಾಲರೊಬ್ಬರು. ರಾಷ್ಟ್ರೀಯ ಚಳವಳಿಯಲ್ಲಿ ತಮಗಿರುವ ಸಹಾನುಭೂತಿಯನ್ನು ಇವರು ಕಾರ್ಯತಃ ತೋರಿಸಿದ್ದಾರೆ. ಇವರ ಧರ್ಮಪತ್ನಿ

ಯಾದ ಶ್ರೀ ಸರಲಾದೇವಿಯವರು ಮೊನ್ನಿನ ಸತ್ಯಾಗ್ರಹ ಚಳವಳಿಯಲ್ಲಿ ಭಾಗಿಗಳಾಗಿ ಕಾರಾಗೃಹವಾಸವನ್ನನುಭವಿಸಿದರು.

**ಪಟೇಲ್, ವಿಠ್ಠಲಭಾಯಿಾ** (ಪು ೧೦೮)

ಇವರು ವಲ್ಲಭಭಾಯಿಾ ಪಟೇಲರ ಅಣ್ಣಂದಿರು. ಬಹುಕಾಲ ಕೇಂದ್ರ ಕಾಯಿದೆ ಮಂಡಲದಲ್ಲಿದ್ದು ಸಮಾಜಸುಧಾರಣಾ ಮಸೂದೆಗಳನ್ನು ತಂದರು ೧೯೨೦ರಲ್ಲಿ ಇವರು ಅಸಹಕಾರ ಚಳವಳಿಯನ್ನು ಸೇರಿದರು ಹೊಸ ಸುಧಾರಣೆಗಳ ಫಲವಾದ ಕೇಂದ್ರ ಕಾಯಿದೆ ಮಂಡಲದ ಪ್ರಥಮ ಖಾಸಗಿ ಅಧ್ಯಕ್ಷರಾಗಿ ಇವರು ಚುನಾಯಿಸಲ್ಪಟ್ಟರು ಆ ಸ್ಥಾನದಲ್ಲಿ ತಮ್ಮ ಕಾರ್ಯವನ್ನು ಇವರು ನಿಷ್ಪಕ್ಷಪಾತದಿಂದಲೂ ಆದರ್ಶ ಸ್ವಾತಂತ್ರ್ಯದಿಂದಲೂ ನಿರ್ವಹಿಸಿ ಕೀರ್ತಿ ಪಡೆದರು ಕಳೆದ ವರ್ಷ ಗಾಂಧೀಜಿಯವರು ಸತ್ಯಾಗ್ರಹ ಯುದ್ಧವನ್ನಾರಂಭಿಸಿದಾಗ ಇವರು ತಮ್ಮ ಕೆಲಸಕ್ಕೆ ರಾಜೀನಾಮೆ ಕೊಟ್ಟು ಸಮರವನ್ನು ಸೇರಿದರು ಇವರನ್ನು ಸರಕಾರದವರು ದೆಹಲಿಯಲ್ಲಿ ದಸ್ತಗಿರಿ ಮಾಡಿ ಶಿಕ್ಷೆ ವಿಧಿಸಿ ಸರೆಯಲ್ಲಿಟ್ಟರು ಕೆಲವು ತಿಂಗಳು ಕಳೆದಮೇಲೆ ಇವರ ಆರೋಗ್ಯವು ಬಹಳ ಕೆಟ್ಟಿದ್ದುದರಿಂದ ಇವರನ್ನು ಬಿಡುಗಡೆ ಮಾಡಿದರು ಈಗ ಇವರು ತಮ್ಮ ಆರೋಗ್ಯದ ಸಲುವಾಗಿ ಆಸ್ಟ್ರಿಯಾ ದೇಶಕ್ಕೆ ಹೋಗಿದ್ದಾರ

**ಬೆಸೆಂಟ್, ಡಾ. ಅನ್ನೀ** (ಪು ೧೧೭)

೧ನೆಯ ಭಾಗದ ಟಿಪ್ಪಣಿಯನ್ನು ನೋಡಿ

**ಗುಜರಾತಿನಲ್ಲಿ ಅತಿವೃಷ್ಟಿ** (ಪು ೧೧೮)

೧೯೨೭ನೆಯ ಇಸವಿಯ ಜೂನ್ ತಿಂಗಳಿನಲ್ಲಿ ಗುಜರಾತಿನಲ್ಲಿ ಅತಿವೃಷ್ಟಿಯಾಗಿ ಕೋಟ್ಯಂತರ ರೂಪಾಯಿಗಳ ನಷ್ಟವಾಯಿತು. ಹಲವು ಪ್ರಾಣಗಳೂ ಹೋದುವು. ಆ ಕಷ್ಟಕಾಲದಲ್ಲಿ ಒಸರಿಗೆ ರಾಷ್ಟ್ರ ಮಹಾಸಭೆಯ ಸ್ವಯಂಸೇವಕರು ಬಹು ಸಹಾಯ ಮಾಡಿದರು

**ಬಾರ್ಡೋಲಿ ಸತ್ಯಾಗ್ರಹ** (ಪು ೧೧೮)

ಸರಕಾರದವರು ಸರಿಯಾದ ಕಾರಣವಿಲ್ಲದೆ ಬಾರ್ಡೋಲಿ ತಾಲ್ಲೂಕಿನಲ್ಲಿ ಭೂಗಂದಾಯವನ್ನು ಹೆಚ್ಚಿಸಿದರೆಂಬ ನಂಬಿಕೆಯೇ ಅಲ್ಲಿನ ರೈತರು ಶ್ರೀ ವಲ್ಲಭಭಾಯಿ ಪಟೇಲರ ಮುಂದಾಳುತನದಲ್ಲಿ ೧೯೨೮ರಲ್ಲಿ ಕರನಿರಾಕರಣೆಯ ಮೂಲಕ ಸತ್ಯಾಗ್ರಹವನ್ನು ಹೂಡಲು ಕಾರಣ. ರೈತರ ದವಸಧಾನ್ಯಗಳನ್ನೂ ದನಕರುಗಳನ್ನೂ ಸರಕಾರದವರು ಮಾರಿಬಿಟ್ಟರು ಇನ್ನೂ ಇತರ ವಿಧವಾದ ಕಷ್ಟನಷ್ಟಗಳನ್ನು ರೈತರು ಅನುಭವಿಸಿದರು ಆದರೂ ಅವರು ತಮ್ಮ ಪಟ್ಟನ್ನು ಬಿಡಲಿಲ್ಲ ಕಟ್ಟಕಡೆಗೆ ಸರಕಾರದವರು ಕಂದಾಯವನ್ನೇರಿಸಿದುದು ತಪ್ಪೆ, ಸರಿಯೆ ಎಂಬುದನ್ನು ನಿರ್ಧರಿಸಲು ಒಂದು ಸಮಿತಿಯನ್ನು ಗೊತ್ತುಮಾಡಲು ಒಪ್ಪಿಕೊಂಡಮೇಲೆಯೇ ಸತ್ಯಾಗ್ರಹವು ನಿಂತುದು ಈ ಸಮಿತಿಯ ವರದಿಯು ಪ್ರಜಾಪಕ್ಷಕ್ಕೆ ಅನುಕೂಲವಾಗಿದ್ದಿತು

**ಅಲೀ ಸಹೋದರರು** (ಪು ೧೧೯)

ಇವರ ಹೆಸರುಗಳು ಷೌಕತಾ ಅಲೀ ಮತ್ತು ಮಹಮ್ಮದ್ ಅಲೀ ಎಂದು ಇವರು ರಾಂಪುರವೆಂಬ ದೇಶೀಯ ಸಂಸ್ಥಾನದವರು ಮೊದಲು ಸರಕಾರದ ನೌಕರಿಯಲ್ಲಿದ್ದರು ಬ್ರಿಟಿಷ್ ಸರಕಾರದವರು ಮಹಾಯುದ್ಧದಲ್ಲಿ ತುರ್ಕಿಯನ್ನು ದಿರಿಸಿದರಷ್ಟೆ ಆಗ ಅವರು ಮುಸಲ್ಮಾನರ ಯಾತ್ರಾಸ್ಥಳಗಳು ಮುಸಲ್ಮಾನರ ವಶದಲ್ಲೇ ಇರುವಂತೆ ಏರ್ಪಾಟು ಮಾಡುವದಾಗಿಯೂ ಅವರ ಧರ್ಮಕ್ಕೆ ಲೋಪ ಬರದಂತೆ ವ್ಯವಸ್ಥೆಮಾಡುವದಾಗಿಯೂ ಮಾತುಕೊಟ್ಟು ತಮ್ಮ ಚಕ್ರಾಧಿಪತ್ಯದಲ್ಲಿದ್ದ ಮುಸಲ್ಮಾನರನ್ನು ಶಾಂತವಾಗಿಟ್ಟುಕೊಳ್ಳಲು ಪ್ರಯತ್ನಪಟ್ಟರು. ಅಲೀ ಸಹೋದರರು ಮುಸಲ್ಮಾನರಲ್ಲಿ ರಾಜದ್ರೋಹ ಹೆಚ್ಚಿಸುವರೆಂಬ ಭೀತಿಯಿಂದ ಸರಕಾರದವರು ಅವರನ್ನು ದಿಗ್ಬಂಧನದಲ್ಲಿರಿಸಿದ್ದರು ಯುದ್ಧವಾದಮೇಲೆ ಬ್ರಿಟಿಷ್ ಸರಕಾರದವರು ಮೇಲೆ ಹೇಳಿದಂತೆ ತಾವು ಕೊಟ್ಟ ಮಾತಿನ ಪ್ರಕಾರ ನಡೆಯಲಿಲ್ಲವೆಂಬ ಕಾರಣದಿಂದ ಖಿಲಾಫತ್ ಚಳವಳಿಯು ಆರಂಭವಾಯಿತು. ಅಲೀ

ಸಹೋದರರು ಇದಕ್ಕೆ ಮುಖಂಡರಾದರು ಗಾಂಧೀಜಿಯವರು ಈ ಚಳವಳಿಯನ್ನು ತಮ್ಮದನ್ನಾಗಿ ಮಾಡಿಕೊಂಡರು. ಅಲೀ ಸಹೋದರರು ಅಸಹಯೋಗ ಚಳವಳಿಯನ್ನು ಸೇರಿದರು ಈ ನಿಕಟ ಸಂಬಂಧವು ಕೆಲವು ವರ್ಷಗಳ ಕಾಲ ಇದ್ದಿತು ಇತ್ತೀಚೆಗೆ ಅಲೀ ಸಹೋದರರು ರಾಷ್ಟ್ರೀಯತೆಗಿಂತಲೂ ಕೋಮುವಾರು ಭಾವಕ್ಕೆ ಹೆಚ್ಚು ಪ್ರಾಮುಖ್ಯತೆಯನ್ನು ಕೊಡುವವರಂತೆ ಕಂಡುಬಂದರು ಮಹಮ್ಮದ್ ಅಲಿಯವರು ಲಂಡನಿನಲ್ಲಿ ಈಗ ನಾಲ್ಕಾರು ತಿಂಗಳ ಕೆಳಗೆ ನಡೆದ ಚಕ್ರಗೋಷ್ಠಿಗೆ ಹೋಗಿದ್ದರು ಅಲ್ಲಿ ಅವರು ಮಾಡಿದ ಭಾಷಣವು ಅತ್ಯುಜ್ವಲವಾಗಿದ್ದಿತು ಅವರು ಈ ದೇಶದಿಂದ ಹೊರಟಾಗಲೇ ಅವರ ಆರೋಗ್ಯವು ಅಸಮರ್ಪಕವಾಗಿದ್ದಿತು ಅವರು ತಮ್ಮ ಭಾಷಣದಲ್ಲಿ ಸೂಚಿಸಿದಂತೆಯೇ ಗೋಷ್ಠಿಯು ಮುಕ್ತಾಯವಾಗುವದಕ್ಕೆ ಮೊದಲೇ ಅವರು ಲಂಡನಿನಲ್ಲಿ ಕಾಲನಿಗೆ ತುತ್ತಾದರು ಇವರು ೧೯೨೩ರಲ್ಲಿ ಕಾಕಿನಾಡದಲ್ಲಿ ನಡೆದ ಮಹಾ ಸಭಾಧಿವೇಶನಕ್ಕೆ ಅಧ್ಯಕ್ಷರಾಗಿದ್ದರು

**ಅಜಮಲ್ ಖಾನ್, ಹಕೀಮ್** (ಪು ೧೧೯)

ಪೂರ್ವಕಾಲದಿಂದ ಪ್ರಸಿದ್ಧವಾದ ಯುನಾನಿ ರಾಜವೈದ್ಯರ ವಂಶಕ್ಕೆ ಸೇರಿದವರಿವರು ಅಸಹಯೋಗ ಚಳವಳಿಯನ್ನು ಸೇರಿದ ಮುಸಲ್ಮಾನ ಮುಖಂಡರಲ್ಲಿ ಇವರೊಬ್ಬರು ಇವರು ೧೯೨೧ರಲ್ಲಿ ಅಹಮದಾಬಾದಿನಲ್ಲಿ ನಡೆದ ರಾಷ್ಟ್ರ ಸಭಾಧಿವೇಶನಕ್ಕೆ ಅಧ್ಯಕ್ಷರಾಗಿದ್ದರು ಹಿಂದೂ ಮುಸಲ್ಮಾನರ ಐಕ್ಯಕ್ಕಾಗಿ ತನುಮನಧನವನ್ನರ್ಪಿಸಿದವರಿವರು ದೆಹಲಿಯಲ್ಲಿ ಯುನಾನಿ ವೈದ್ಯವಿದ್ಯಾಶಾಲೆಯನ್ನೂ ಮುಸಲ್ಮಾನ್ ರಾಷ್ಟ್ರೀಯ ವಿಶ್ವವಿದ್ಯಾನಿಲಯವನ್ನೂ ಇವರು ಸ್ಥಾಪಿಸಿದರು ಇವರು ೧೯೨೭ರಲ್ಲಿ ಸ್ವರ್ಗಸ್ಥರಾದರು

**ಶ್ವೇಬ್ ಖುರೇಷಿ** (ಪು ೧೧೯)

ಇವರು ಸಾಬರ್ಮತಿಯಲ್ಲಿ ಗಾಂಧೀಜಿಯವರ ಸಹಯೋಗಿಗಳಾಗಿದ್ದರು. ಗಾಂಧೀಜಿಯವರನ್ನು ೧೯೨೧ರಲ್ಲಿ ಸೆರೆಮನೆಗೊಯ್ದ

ಮೇಲೆ ಇವರು 'ಯಂಗ್ ಇಂಡಿಯಾ' ಪತ್ರಿಕೆಯ ಸಂಪಾದಕರಾಗಿದ್ದರು. ಕೆಲವು ಕಾಲ ರಾಷ್ಟ್ರಮಹಾಸಭೆಯ ಕಾರ್ಯದರ್ಶಿಗಳಾಗಿಯೂ ಇದ್ದರು.

**ಡಾ. ಅನ್ಸಾರಿ** (ಪು. ೧೧೯)

ದೆಹಲಿಯ ಪ್ರಸಿದ್ಧ ವೈದ್ಯರು ಗಾಂಧೀಜಿಯವರ ರಾಜಕೀಯ ಅನುಯಾಯಿಗಳು ೧೯೨೭ರಲ್ಲಿ ಮದರಾಸಿನಲ್ಲಿ ನಡೆದ ಮಹಾಸಭಾಧಿವೇಶನಕ್ಕೆ ಅಧ್ಯಕ್ಷರಾಗಿದ್ದರು ಮೊನ್ನೆ ನಡೆದ ಸತ್ಯಾಗ್ರಹಯುದ್ಧದಲ್ಲಿ ಕಾರಾಗೃಹವಾಸವನ್ನನುಭವಿಸಿದರಿವರು ಹಿಂದೂ ಮುಸಲ್ಮಾನರ ಐಕ್ಯಕ್ಕೆ ತಮ್ಮ ಜೀವನವನ್ನು ಧಾರೆಯೆರದಿದ್ದಾರೆ

**ಅಲೀಗಢದ ಮುಸ್ಲಿಮ್ ವಿದ್ಯಾನಿಲಯ** (ಪು ೧೨೧)

ಅಲೀಗಢದಲ್ಲಿ ಮುಸ್ಲಿಮ್ ಕಾಲೇಜನ್ನು ಸರ್ ಸಯ್ಯದ್ ಅಹಮದರು ಸ್ಥಾಪಿಸಿದರು ಅದು ಈಗ ಕಾಶೀ ಹಿಂದೂ ವಿಶ್ವವಿದ್ಯಾನಿಲಯದಂತೆಯೇ ಮುಸ್ಲಿಮ್ ವಿಶ್ವವಿದ್ಯಾನಿಲಯವಾಗಿ ಬೆಳೆದು ಮುಸಲ್ಮಾನರ ಸಾಂಸ್ಕೃತಿಕ ಕೇಂದ್ರವಾಗಿ ಪರಿಣಮಿಸಿದೆ.

**ತಿಲಕರು, ಲೋಕಮಾನ್ಯ ಬಾಲಗಂಗಾಧರ** (ಪು ೧೨೫)

೨ನೆಯ ಭಾಗದ ಟಿಪ್ಪಣಿಯನ್ನು ನೋಡಿ

**ಬ್ರಹ್ಮ ಸಮಾಜ** (ಪು ೧೪೧)

೩ನೆಯ ಭಾಗದ ಟಿಪ್ಪಣಿಯನ್ನು ನೋಡಿ

**ರೌಲಟ್ ಸಮಿತಿ ಮತ್ತು ಕಾನೂನು** (ಪು ೧೪೩)

ಹಿಂದುಸ್ಥಾನದಲ್ಲಿ ರಾಜಕೀಯ ಚಳವಳಿಗಾರರನ್ನು ತಮ್ಮ ಹಿಡಿತದಲ್ಲಿಟ್ಟುಕೊಳ್ಳಲೋಸುಗ ಸರಕಾರದವರು ಹೊಸ ಕಾನೂನನ್ನು ಮಾಡಬೇಕೆಂಬ ಉದ್ದೇಶದಿಂದ ಅದು ಯಾವ ರೀತಿ ಇರಬೇಕೆಂದು ಸಲಹೆ ಕೊಡಲು ಒಂದು ಸಮಿತಿಯನ್ನು ನಿಯಮಿಸಿದರು ಇಂಗ್ಲೆಂಡಿನ ಹೈಕೋರ್ಟಿನ ನ್ಯಾಯಾಧೀಶರಾದ ರೌಲಟರೆಂಬುವರು

ಇದರ ಅಧ್ಯಕ್ಷರಾಗಿದ್ದುದರಿಂದ ಆ ಸಮಿತಿಗೂ ಸಮಿತಿಯ ವರದಿಯ ಫಲವಾದ ಕಾನೂನಿಗೂ ಅವರ ಹೆಸರೇ ಬಂದಿತು. ಜನರ ಪ್ರತಿನಿಧಿಗಳು ಒಂದೇ ಕಂಠದಿಂದ ಬೇಡವೆಂದು ಹೇಳಿದರೂ ಸರಕಾರ ದವರು ಮುಷ್ಕರ ಹಿಡಿದು ಈ ಕಾನೂನನ್ನು ನಿರ್ಮಿಸಿದರು ಈ ಕಾನೂನು ಸರಕಾರದವರಿಗೆ ತಮ್ಮ ಇಷ್ಟ ಬಂದವರನ್ನು ನ್ಯಾಯ ಸ್ಥಾನದಲ್ಲಿ ಸರಿಯಾದ ವಿಚಾರಣೆಯಿಲ್ಲದೆ ನಿರ್ಬಂಧದಲ್ಲಿಡಲು ಅಧಿಕಾರ ಕೊಟ್ಟಿತು

**ಶ್ರೀ ಸರೋಜಿನೀ ನಾಯಿಡು** (ಪು ೧೪೪)

ಇವರು ವಂಗ ಬ್ರಾಹ್ಮಣರ ಕುಲದಲ್ಲ ಹುಟ್ಟಿ ಚಿಕ್ಕ ವಯಸ್ಸಿನಲ್ಲೆ ತಮ್ಮ ಕವಿತಾ ಪ್ರತಿಭೆಯನ್ನು ತೋರಿಸಿಕೊಂಡರು ಅಂದಿನಿಂದೀಚೆಗ ಇವರು 'ಭರತಖಂಡದ ಕೋಗಿಲೆ'ಯೆಂದು ಹಸರುಗೊಂಡಿದ್ದಾರೆ ಹಿಂದುಸ್ಥಾನದಲ್ಲಿ ಸ್ತ್ರೀಯರ ಮೇಲ್ಮೆಗಾಗಿಯೂ ಹಿಂದೂ ಮುಸಲ್ಮಾನರ ಐಕ್ಯಕ್ಕಾಗಿಯೂ ಬಹು ಸಾಹಸ ಪಟ್ಟಿದ್ದಾರ ೧೯೨೫ರಲ್ಲಿ ಇವರು ಆಫ್ರಿಕಾ ಖಂಡಕ್ಕೆ ಹಿಂದುಸ್ಥಾನದ ರಾಯಭಾರಿಯಾಗಿ ಹೋಗಿ ಅಲ್ಲಿನ ಜನರನ್ನು ತಮ್ಮ ವಾಗ್ವೈರಣೆಯಿಂದ ಬೆರಗು ಮಾಡಿದರು ಅದೇ ವರ್ಷ ಕಾನಪುರದಲ್ಲಿ ನೆರದ ಮಹಾಸಭಾಧಿವೇಶನಕ್ಕೆ ಅಧ್ಯಕ್ಷರಾಗಿ ಸಮ್ಮಾನಿತರಾದರು ಮೊನ್ನೆ ನಡೆದ ಸತ್ಯಾಗ್ರಹ ಯುದ್ಧದಲ್ಲಿ ಇವರೂ ದಸ್ತಗಿರಿ ಮಾಡಲ್ಪಟ್ಟು ಕಾರಾಗೃಹವಾಸವನ್ನನುಭವಿಸಿದರು

**ಹಾರ್ನಿಮನ್, ಬೆಂಜಮಿನ್ ಗೈ** (ಪು ೧೪೪)

ಇವರು ಮೊಟ್ಟಮೊದಲು ಈ ದೇಶದ ಐರೋಪ್ಯ ವೃತ್ತಪತ್ರಿಕಗಳ ಕಚೇರಿಯಲ್ಲಿ ನೌಕರರಾಗಿದ್ದು ಆಮೇಲೆ 'ಬಾಂಬೇ ಕ್ರಾನಿಕಲ್' ಪತ್ರಿಕೆಯ ಸಂಪಾದಕರಾಗಿ ಅದರಲ್ಲಿ ಭಾರತ ರಾಷ್ಟ್ರೀಯ ಪಕ್ಷವನ್ನು ಧೈರ್ಯದಿಂದಲೂ ಸ್ವತಂತ್ರತೆಯಿಂದಲೂ ಪ್ರತಿಪಾದಿಸಿ ಹೆಸರು ಪಡೆದರು ಇದು ಸರಕಾರದವರಿಗೆ ಸರಿಬೀಳದೆ ಅವರು ಇವರನ್ನು ೧೯೧೯ರಲ್ಲಿ ಈ ದೇಶದಿಂದ ಗಡೀಪಾರು ಮಾಡಿದರು

ಇವರು ೧೯೨೬ರಲ್ಲಿ ಪುನಃ ಈ ದೇಶಕ್ಕೆ ಬಂದರು. ಈಗ ಇವರು 'ವೀಕ್ಲಿ ಹೆರಾಲ್ಡ್' ಎಂಬ ಪತ್ರಿಕೆಯ ಸಂಪಾದಕರಾಗಿದ್ದಾರೆ.

**ಉಮರ್ ಸುಬಾನಿ** (ಪು ೧೪೪)

ಮುಂಬಯಿಯ ಸಾಹುಕಾರರು. ಗಾಂಧೀಜಿಯವರ ಅಸಹಕಾರ ಚಳವಳಿಯನ್ನು ಸೇರಿ ಕಷ್ಟನಷ್ಟಗಳನ್ನನುಭವಿಸಿದರು ಇವರು ಗತಿಸಿ ಸುಮಾರು ನಾಲ್ಕು ವರ್ಷವಾಯಿತು

**ಕಸ್ತೂರಿ ರಂಗೈಯಂಗಾರ್** (ಪು ೧೫೧)

ಇವರು ಮೊಟ್ಟಮೊದಲು ಕೊಯಮುತ್ತೂರಿನಲ್ಲಿ ವಕೀಲರಾಗಿದ್ದು ಆಮೇಲೆ ಮದರಾಸಿನ 'ಹಿಂದೂ' ಪತ್ರಿಕೆಯ ಸಂಪಾದಕರೂ ಮಾಲಿಕರೂ ಆದರು 'ಹಿಂದೂ'ವಿನ ಇಂದಿನ ಉನ್ನತ ಸ್ಥಿತಿಗೆ ಇವರೇ ಕಾರಣಕರ್ತರೆನ್ನಬಹುದು ರಾಷ್ಟ್ರಮಹಾಸಭೆಯು ೧೯೨೨ರಲ್ಲಿ ಈ ದೇಶವು ಸವಿನಯ ಕಾನೂನು ಭಂಗಕ್ಕೆ ಸಿದ್ಧವಾಗಿದೆಯೆ, ಇಲ್ಲವೆ ಎಂಬುದನ್ನು ನಿರ್ಧರಿಸಲು ನಿಯಮಿಸಿದ್ದ ಸಮಿತಿಗೆ ಇವರು ಸದಸ್ಯರಾಗಿದ್ದರು ಇವರು ಗತಿಸಿ ಐದಾರು ವರ್ಷಗಳಾದುವು

**ರಾಜಗೋಪಾಲಾಚಾರ್ಯರು** (ಪು ೧೫೧)

ಇವರು ಮೊದಲು ಸೇಲಮಿನಲ್ಲಿ ವಕೀಲರಾಗಿದ್ದು ಆಮೇಲೆ ಮದರಾಸಿಗೆ ಹೋದರು ಅಲ್ಲಿಗೆ ಹೋದ ಸ್ವಲ್ಪಕಾಲದಲ್ಲಿಯೇ ಅಸಹಯೋಗ ಚಳವಳಿಯು ಆರಂಭವಾಯಿತು ಅದರಲ್ಲಿ ಇವರು ಭಾಗಿಗಳಾಗಿ ಪರಮನಯ ವಾಸವನ್ನನುಭವಿಸಿದರು ಅಲ್ಲಿಂದೀಚೆಗೆ ಇವರು ಸೇಲಂ ಜಿಲ್ಲೆಯ ಪುದುಪಾಳ್ಯವೆಂಬ ಸ್ಥಳದಲ್ಲಿ ಗಾಂಧೀ ಆಶ್ರಮವೆಂಬ ಖಾದೀ ಕೇಂದ್ರವನ್ನು ಸ್ಥಾಪಿಸಿ ನಡೆಸುತ್ತಿದ್ದಾರೆ ಈಚಿನ ಸತ್ಯಾಗ್ರಹ ಯುದ್ಧದಲ್ಲೂ ಭಾಗ ವಹಿಸಿ ಜೈಲಿಗೆ ಹೋಗಿದ್ದರು. ಇವರು ಬಹು ಮೇಧಾವಿಗಳು. ಇವರನ್ನು ಗಾಂಧೀ ತತ್ವಗಳ ಟೀಕಾಚಾರ್ಯರೆನ್ನಬಹುದು.

**ವಿಜಯರಾಘವಾಚಾರ್ಯರು** (ಪು ೧೫೨)

ಇವರು ಸೇಲಮಿನ ಪ್ರಸಿದ್ಧ ವಕೀಲರು. ಭಾರತ ರಾಜಕೀಯ ಕ್ಷೇತ್ರದಲ್ಲಿ ಹಳೆಯ ಹುಲಿಗಳು. ೧೯೨೦ರಲ್ಲಿ ನಾಗಪುರದಲ್ಲಿ ನಡೆದ ಮಹಾಸಭೆಯ ಅಧಿವೇಶನಕ್ಕೆ ಅಧ್ಯಕ್ಷರು ರಾಜ್ಯಾಂಗ ವ್ಯವಸ್ಥಾ ವಿಚಾರದಲ್ಲಿ ಅಸಮಪಂಡಿತರೆಂದು ಖ್ಯಾತಿಪತ್ತಿದ್ದಾರೆ

**ಡಾ. ಸತ್ಯಪಾಲ್, ಡಾ. ಕಿಚಲೂ** (ಪು ೧೫೫)

ಇವರಿಬ್ಬರೂ ಪಂಜಾಬಿನ ರಾಷ್ಟ್ರೀಯ ಮುಖಂಡರು. ಇವರನ್ನು ಗಡೀಪಾರು ಮಾಡಲಿಕ್ಕಾಗಿ ಸರಕಾರದವರು ದಸ್ತಗಿರಿ ಮಾಡಿದುದೇ ಪಂಜಾಬಿನ ಅನಾಹುತದ ಮೊದಲ ಘಟನೆ ಸರಕಾರವನ್ನಿದಿರಿಸಿ ಇವರಿಬ್ಬರೂ ಅನೇಕ ಬಾರಿ ಜೈಲಿಗೆ ಹೋಗಿದ್ದಾರೆ

**ಜೇರಾಜಾಣಿ, ವಿಠ್ಠಲದಾಸ್** (ಪು ೧೫೫)

ಇವರು ಖಾದಿಯ ಮಾರಾಟವನ್ನೊಂದು ವಿಜ್ಞಾನವಾಗಿ ಮಾಡಿದ್ದಾರೆ 'ಖಾದಿ ಪತ್ರಿಕೆ'ಯ ಸಂಪಾದಕರಿವರು.

**'ಸರ್ವೋದಯ'** (ಪು ೧೫೬)

೪ನೆಯ ಭಾಗದ ೧೮ನೆಯ ಅಧ್ಯಾಯವನ್ನು ನೋಡಿ

**ಗಿದವಾಣಿ, ಆಚಾರ್ಯ** (ಪು ೧೫೮)

ಇವರು ದೆಹಲಿಯ ರಾಮಜಸ ಕಾಲೇಜಿನ ಮುಖ್ಯಾಧ್ಯಾಪಕರಾಗಿದ್ದವರು. ಗಾಂಧೀಜಿಯವರು ಅಸಹಕಾರ ಚಳವಳಿಯನ್ನಾರಂಭಿಸಿದಾಗ ಆ ಕೆಲಸವನ್ನು ಬಿಟ್ಟು ಗಾಂಧೀಜಿಯವರಿಂದ ಸ್ಥಾಪಿತವಾದ ಗುಜರಾತ್ ವಿದ್ಯಾಪೀಠದ ಪ್ರೋ-ಛಾನ್ಸಲರಾಗಿಯೂ ಮುಖ್ಯಾಧ್ಯಾಪಕರಾಗಿಯೂ ಸೇರಿದರು. ೧೯೨೪ರಲ್ಲಿ ಇವರು ನಾಭಾ ಸಂಸ್ಥಾನಕ್ಕೆ ಅಕಾಲಿ ಜಾಥದ ಮುಂದಾಳಾಗಿ ಹೋದಾಗ ದಸ್ತಗಿರಿಮಾಡಲ್ಪಟ್ಟು ಶಿಕ್ಷೆಯನ್ನನುಭವಿಸಿದರು. ೧೯೩೬ರಲ್ಲಿ ಇವರು ಬೃಂದಾವನದ 'ಪ್ರೇಮ ವಿದ್ಯಾಲಯ'ವನ್ನು ಸೇರಿದರು.

೧೯೨೫ರಲ್ಲಿ ಕರಾಚಿ ನಗರದ ಪೌರಸಭೆಯ ಕೈಕೆಳಗೆ ಶಿಕ್ಷಣ ಸಂಸ್ಥೆಗಳ ಮೇಲ್ವಿಚಾರಕರಾದರು. ಮೊನ್ನಿನ ಸತ್ಯಾಗ್ರಹ ಯುದ್ಧದಲ್ಲಿ ಉಪ್ಪಿನ ಕಾಯಿದೆಯನ್ನು ಮುರಿದುದಕ್ಕಾಗಿ ಇವರಿಗೆ ಒಂದು ವರ್ಷ ಸಶ್ರಮ ಕಾರಾಗೃಹವಾಸವು ವಿಧಿಸಲ್ಪಟ್ಟಿತು

**ಓಡ್ವಯರ್, ಸರ್ ಮೈಕೇಲ್** (ಪು ೧೬೦), **ಯುದ್ಧದ ಕಾನೂನು** (ಪು ೧೬೭), **ಜಾಲಿಯನ್ವಾಲಾಬಾಗ್** (ಪು ೧೭೪)

ಓಡ್ವಯರರು ಐ ಸಿ ಎಸ್ ಗೋತ್ರಕ್ಕೆ ಸೇರಿದವರು ಹಿಂದುಸ್ಥಾನ ಸರಕಾರದ ರಾಜಕೀಯ ಇಲಾಖೆಯಲ್ಲಿ ಅನೇಕ ಹುದ್ದೆಗಳಲ್ಲಿದ್ದು ಮಹಾಯುದ್ಧದ ಕಾಲದಲ್ಲ ಪಂಜಾಬಿನ ಗವರ್ನರರಾಗಿದ್ದರು ಆಗ ಇವರು ಸಿಪಾಯಿಗಳನ್ನು ಕೂಡಿಸುವದಕ್ಕೆ ಎಸಗಿದ ಕಾರ್ಯಗಳು ಜನರಿಗೆ ಸರಿಬೀಳದೆ ಆ ನಾಡಿನಲ್ಲಿ ಅಶಾಂತಿಗೆ ಕಾರಣವಾಯಿತು ೧೯೧೯ರಲ್ಲಿ ರೌಲಟ್ ಕಾನೂನಿನ ಸಂಬಂಧವಾಗಿ ಅಲ್ಲಿ ಚಳವಳಿ ಪ್ರಾರಂಭವಾದಾಗ ಇವರ ಸರಕಾರವು ಅದನ್ನು ತಗ್ಗಿಸಲು ನಡೆಸಿದ ಕಾರ್ಯಕ್ರಮವು **ಜಾಲಿಯನ್ವಾಲಾಬಾಗಿನ** (ಪು ೧೭೪) ಹತ್ಯಾಕಾಂಡದಲ್ಲಿ ಕೊನೆಗಂಡಿತು ೧೯೧೯ನೇ ಏಪ್ರಿಲ್ ೬ನೆಯ ತಾರೀಖಿನ ದಿನ ರೌಲಟ್ ಕಾನೂನಿಗೆ ವಿರೋಧವಾಗಿ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಲು ಅಮೃತಸರದ ಜನರು ಹರತಾಳವನ್ನಾಚರಿಸಿ ಸಂಜೆ ಸಭೆಗೂಡಿದರು. ಈ ಸಭೆಯು ಅಧಿಕಾರಿಗಳ ಆಜ್ಞೆಗೆ ವಿರುದ್ಧವಾದುದೆಂಬದಾಗಿ, ಸಭೆಗೂಡಿದ ಜಾಲಿಯನ್‌ವಾಲಾಬಾಗ್ ಎಂಬ ಸ್ಥಳಕ್ಕೆ ಸೈನ್ಯವು ಒಯ್ಯಲ್ಪಟ್ಟು ನೂರಾರು ಮಂದಿ ಹೆಂಗಸರು, ಮಕ್ಕಳು, ಮುದುಕರು ಕೂಡ ಸೈನಿಕರ ಗುಂಡಿಗೆ ತುತ್ತಾದರು ಇದನ್ನೆಲ್ಲಾ ನಡೆಸಿದ ಸೇನಾನಾಯಕನೇ ಕ್ರೂರಾತ್ಮನಾದ **ಜನರಲ್ ಡೈಯರ್** (ಪು ೧೮೫) ಎಂಬಾತನು ಈ ಕೊಲೆಯಾದ ಮೇಲೆ ಪಂಜಾಬಿನಲ್ಲಿ ಸರಕಾರದವರು **'ಯುದ್ಧದ ಕಾನೂನನ್ನು' (ಮಾರ್ಷಲ್ ಲಾ)** (ಪು ೧೬೭)

ಪ್ರಚಾರಕ್ಕೆ ತಂದರು. ಯುದ್ಧದ ಕಾನೂನೆಂದರೆ ವಾಸ್ತವಿಕವಾಗಿ ಕಾನೂನಿನ ಅಭಾವವೆನ್ನಬಹುದು. ರಾಜ್ಯವೆಲ್ಲಾ ಸೈನ್ಯದ ಅಂಕೆಯಲ್ಲೇ ಇರುತ್ತದೆ. ಸೈನ್ಯದ ಅಧಿಕಾರಿಗಳು ವಿಧಿಸಿದ ನಿಯಮಗಳನ್ನು ಚಾಚೂ ಮೀರಿದರೆ ಬಹು ಕಠಿಣ ಶಿಕ್ಷೆಯಾಗುತ್ತದೆ ಇದು ಮರಣದಲ್ಲಿ ಪರ್ಯವಸಾನ ಹೊಂದಿದರೂ ಹೊಂದಬಹುದು. ಶಿಕ್ಷೆಯನ್ನು ಕೊಡಲು ಕ್ರಮವಾದ ನ್ಯಾಯಸ್ಥಾನಗಳಿರುವದಿಲ್ಲ ಕ್ರಮವಾದ ವಿಚಾರಣೆಯಾಗುವದಿಲ್ಲ ಈ ಯುದ್ಧದ ಕಾನೂನು ಜಾರಿಯಲ್ಲಿದ್ದಾಗ ಪಂಜಾಬಿನಲ್ಲಿ ಅನೇಕ ಅತ್ಯಾಚಾರಗಳು ನಡೆದುವು. ಇವುಗಳ ವಿಷಯವನ್ನೂ ಜಾಲಿಯಾನಾವಾಲಾಬಾಗಿನಲ್ಲಿ ನಡೆದುದನ್ನೂ ವಿಮರ್ಶಿಸಲು—ದೇಶವೆಲ್ಲಾ ಕೂಗಿಕೊಂಡಮೇಲೆ—ಸರಕಾರದವರು ಲಾರ್ಡ್ ಹಂಟರ್ ಎಂಬವರ ಅಧ್ಯಕ್ಷತೆಯಲ್ಲಿ ಒಂದು ಸಮಿತಿಯನ್ನೇರ್ಪಡಿಸಿದರು ಇದಕ್ಕೆ **'ಹಂಟರ್ ಸಮಿತಿ'** (ಪು ೧೮೧) ಎಂದು ಹೆಸರು ಇದು ಜನರಿಗೆ ಸಮರ್ಪಕವಾಗಿರಲಿಲ್ಲವಾದುದರಿಂದ ಮಹಾಸಭೆಯು ಇದರೊಡನೆ ಸಹಕರಿಸದೆ ತಾನೆ ಬೇರೆ ಒಂದು ಸಮಿತಿಯನ್ನು ನಿಯಮಿಸಿತು ಹಂಟರ್ ಸಮಿತಿಯ ವಿಚಾರಣೆಯೂ ಕೂಡ ಪಂಜಾಬಿನ ಅನೇಕ ಅತ್ಯಾಚಾರಗಳನ್ನು ಬಯಲಿಗೆ ತಂದಿತು ಇದರ ಫಲವಾಗಿ ಜನರಲ್ ಡೈಯರನಿಗೆ ನಾಮಮಾತ್ರಕ್ಕೆ ಶಿಕ್ಷೆಯಾಯಿತು

**ಬ್ರೆಲ್ವಿ, ಸೈಯದ್ ಅಬ್ದುಲ್ಲಾ** (ಪು ೧೭೬)

ಇವರು ಈಗ 'ಬಾಂಬೇ ಕ್ರಾನಿಕಲ್' ಪತ್ರಿಕೆಯ ಸಂಪಾದಕರಾಗಿದ್ದಾರೆ ಇವರು ರಾಷ್ಟ್ರೀಯತಾ ಪಕ್ಷಪಾತಿಗಳು ಮೊಸ್ಲೆಮನ ಸತ್ಯಾಗ್ರಹ ಕದನದ ಸಂಬಂಧವಾಗಿ ಗುನೋ ವಿಷಯವನ್ನು ಪ್ರಚಾರಮಾಡಿದುದಕ್ಕಾಗಿ ಇವರಿಗೆ ಕಾರಾಗೃಹವಾಸ ಶಿಕ್ಷೆಯಾಯಿತು

**'ಇಂಡಿಯನ್ ಒಪಿನಿಯನ್'** (ಪು ೧೭೮)

೪ನೆಯ ಭಾಗದ ೧೩ನೆಯ ಅಧ್ಯಾಯವನ್ನು ನೋಡಿ

**ಹಂಟರ್ ಸಮಿತಿ** (ಪು ೧೮೧)

ಮೇಲಿನ 'ಓಡ್ವಯರ್' ಎಂಬ ಟಿಪ್ಪಣಿಯನ್ನು ನೋಡಿ

**ಸರಲಾದೇವಿ ಚೌಧರಾಣಿ** (ಪು ೧೮೨)

ಈಕೆಯು ಪಂಜಾಬಿನ ವೀರರಮಣಿ ಪ್ರಸಿದ್ಧ ಕವಯಿತ್ರಿ ರಾಜಕೀಯ ರಂಗಕ್ಕೆ ಪ್ರವೇಶಮಾಡಿದ ಭಾರತೀಯ ಮಹಿಳೆಯರಲ್ಲಿ ಇವರೊಬ್ಬರು ಮೊದಲಿಗರು

**ನೆಹರು, ಪಂಡಿತ ಮೋತೀಲಾಲ** (ಪು ೧೮೩)

ಇವರು ಅಲಹಾಬಾದಿನಲ್ಲಿ ಪ್ರಸಿದ್ಧ ವಕೀಲರಾಗಿದ್ದರು ಮೊದಲು ರಾಜಕೀಯ ವಿಚಾರದಲ್ಲಿ ಮಂದಪಕ್ಷಕ್ಕೆ ಸೇರಿದ್ದು ಪಂಜಾಬಿನ ಅತ್ಯಾಚಾರವಾದಮೇಲೆ ಪ್ರಗತಿ ಪಕ್ಷದ ಮುಂದಾಳುಗಳಲ್ಲೊಬ್ಬರಾದರು ಮಾರನೆಯ ವರ್ಷ ಅಮೃತಸರದಲ್ಲಿಯೂ ೧೯೨೦ರಲ್ಲಿ ಕಲ್ಕತ್ತೆಯಲ್ಲಿಯೂ ಇವರು ಮಹಾಸಭೆಯ ಅಧ್ಯಕ್ಷರಾದರು ಅಸಹಕಾರ ಚಳವಳಿಯಲ್ಲಿ ಭಾಗಿಗಳಾಗಿ ತಮ್ಮ ಮಕ್ಕಳಾದ ಜವಾಹಿರಲಾಲರೊಂದಿಗೆ ಕಾರಾಗೃಹವಾಸವನ್ನನುಭವಿಸಿದರು ಮಹಾಸಭೆಯೊಳಗೆ 'ಸ್ವರಾಜ್ಯ' ಪಕ್ಷವು ಸ್ಥಾಪಿತವಾಗಿ ಆ ಪಕ್ಷವು ಕಾಯಿದೆ ಸಭೆಗಳನ್ನು ಪ್ರವೇಶಿಸಲು ನಿರ್ಧರಿಸಿದಮೇಲೆ ಇವರು ಕೇಂದ್ರ ಕಾಯಿದೆ ಮಂಡಲದಲ್ಲಿ ಆ ಪಕ್ಷದ ಮುಖಂಡರಾಗಿ ನಿಂತು ತಮ್ಮ ಅಸದೃಶ ಪ್ರತಿಭೆಯಿಂದ ಸಕಲ ಪಕ್ಷದವರ ಗೌರವಾದರಗಳನ್ನು ಸಂಪಾದಿಸಿದರು ಇವರು ಶ್ರೀಮಂತರಾಗಿ ಜನಿಸಿ ಲಕ್ಷಾಂತರ ರೂಪಾಯಿಗಳನ್ನು ಗಳಿಸಿ ಸುಖಜೀವನದ ಅಭ್ಯಾಸವುಳ್ಳವರಾಗಿದ್ದಾಗ್ಯೂ ದೇಶ ಹಿತಕ್ಕೋಸ್ಕರ ಇವೆಲ್ಲವನ್ನೂ ತ್ಯಾಗಮಾಡಿ ತಮ್ಮ ದೇಹವನ್ನು ಸವೆದರು ಮೊನ್ನೆ ನಡೆದ ಸತ್ಯಾಗ್ರಹ ಯುದ್ಧದಲ್ಲಿ ಇವರನ್ನು ಸೆರೆಮನೆಗೆ ಒಯ್ದರು ಇವರ ವ್ಯಾಧಿಯು ಅಲ್ಲಿ ಪ್ರಬಲವಾದುದರಿಂದ ಇವರನ್ನು ಬಿಟ್ಟುಬಿಟ್ಟರು ಆದರೆ ಇದಾದ ಅಲ್ಪಕಾಲದಲ್ಲಿ ಈಗ ನಾಲ್ಕು ತಿಂಗಳ ಕೆಳಗೆ ಇವರು ಸ್ವರ್ಗವಾಸಿಗಳಾದರು.

**ದಾಸ್, ದೇಶಬಂಧು ಚಿತ್ತರಂಜನ** (ಪು ೧೮೩)

ಇವರು ಕಲ್ಕತ್ತೆಯಲ್ಲಿ ಪ್ರಸಿದ್ಧರಾದ ವಕೀಲರಾಗಿದ್ದು ಅಸಹಕಾರ ಚಳವಳಿಯನ್ನು ಸೇರಿ ಕಾರಾಗೃಹವಾಸವನ್ನನುಭವಿಸಿದರು ಅಲ್ಲಿಂದ ಬಿಡುಗಡೆಯಾದಮೇಲೆ ಇವರು ಮಹಾಸಭೆಯೊಳಗೆ 'ಸ್ವರಾಜ್ಯ' ಪಕ್ಷವನ್ನು ಮೋತೀಲಾಲರೊಂದಿಗೆ ಸ್ಥಾಪಿಸಿದರು ವಂಗದಲ್ಲಿ ಇವರ ಪ್ರಭಾವವು ಎಷ್ಟುಮಟ್ಟಿಗಿದ್ದಿತೆಂದರೆ ಇವರನ್ನು 'ವಂಗದ ಅನಭಿಷಿಕ್ತ ನರೇಶ'ರೆಂದು ಕರೆಯುತ್ತಿದ್ದರು ಇವರು ಸಾಹಿತ್ಯಾಭಿಮಾನಿಗಳು, ಸ್ವತಃ ಕವಿಗಳು 'ಸಾಗರ ಸಂಗೀತ'ವೆಂಬ ಗೀತೆಗಳ ಪುಸ್ತಕವನ್ನು ಬರೆದಿದ್ದಾರೆ ಇವರು ೧೯೨೫ರಲ್ಲಿ ಕಾಲವಾದರು ಕಾಲವಾಗುವದಕ್ಕೆ ಮುಂಚೆ ಇವರು ತಮ್ಮ ಆಸ್ತಿಯನ್ನೆಲ್ಲಾ ವೈದ್ಯಶಾಲೆಯನ್ನು ಸ್ಥಾಪಿಸಲೋಸುಗ ದಾನಮಾಡಿದರು

**ಜಯಕರ್, ಎಂ. ಆರ್.** (ಪು ೧೮೩)

ಮುಂಬಯಿಯ ಪ್ರಸಿದ್ಧ ವಕೀಲರು ಪ್ರಖ್ಯಾತ ವಾಗ್ಮಿಗಳು ಮೊದಲು ಇವರು ರಾಜಕೀಯ ವಿಚಾರದಲ್ಲಿ ಪ್ರಗತಿ ಪಕ್ಷಕ್ಕೆ ಸೇರಿದ್ದರೂ ಇತ್ತೀಚಗೆ ಮಹಾಸಭೆಯ ಮಾರ್ಗವನ್ನು ಹಿಡಿದಿದ್ದಾರೆ ಮೊನ್ನೆ ಗಾಂಧೀಜಿಯವರು ಸೆರೆಯಲ್ಲಿದ್ದಾಗ ಇವರೂ ಸರ್ ತೇಜಬಹದ್ದೂರ್ ಸಪ್ರೂರವರೂ ಸರಕಾರಕ್ಕೂ ಮಹಾಸಭೆಗೂ ಸಂಧಿ ಮಾಡಲು ಯತ್ನಿಸಿದರು ಆದರೆ ಆ ಯತ್ನವು ವಿಫಲವಾಯಿತು

**ಅಬ್ಬಾಸ್ ತಯ್ಯಬ್ಜೀ** (ಪು ೧೮೩)

೧ನೆಯ ಭಾಗದ 'ಬುದ್ರುದ್ದೀನ್ ತಯ್ಯಬ್ಜೀ' ಎಂಬ ಟಿಪ್ಪಣಿಯನ್ನು ನೋಡಿ

**'ಡ್ವೈಯರ್-ಗಿರಿ'** (ಪು ೧೮೫)

ಮೇಲಿರುವ 'ಓಡ್ವಯರ್' ಎಂಬ ಟಿಪ್ಪಣಿಯನ್ನು ನೋಡಿ

**ಸಂಧಿಯ ಷರತ್ತುಗಳು** (ಪು ೧೮೭)

ಮೇಲಿನ 'ಅಲೀ ಸಹೋದರರು' ಎಂಬ ಟಿಪ್ಪಣಿಯಲ್ಲಿ ತಿಳಿಸಿರುವಂತೆ ಬ್ರಿಟಿಷ್ ಸರಕಾರದವರು ತಮ್ಮ ಚಕ್ರಾಧಿಪತ್ಯದಲ್ಲಿದ್ದ ಮುಸಲ್ಮಾನರಿಗೆ ಮಾತು ಕೊಟ್ಟಂತೆ ಮಹಾಯುದ್ಧವು ಮುಗಿದ ನಂತರ ಮುಸಲ್ಮಾನರ ಯಾತ್ರಾಸ್ಥಳಗಳು ಮುಸಲ್ಮಾನರ ಕೈತಪ್ಪದಂತೆಯೂ ಅವರ ಶ್ರೇಷ್ಠತಮ ಧರ್ಮಗುರು(ಖಲೀಫ್)ವಾದ ತುರ್ಕಿಯ ಸುಲ್ತಾನರ ಧಾರ್ಮಿಕ ಅಧಿಕಾರಕ್ಕೆ ತೊಂದರೆ ಬರದಂತೆಯೂ ಸಂಧಿಯ ಷರತ್ತುಗಳಲ್ಲಿ ಏರ್ಪಾಟು ಮಾಡಲಿಲ್ಲ. ಇದರಿಂದಲೇ 'ಖಿಲಾಫತ್' ಚಳವಳಿಯು ಹಿಂದುಸ್ತಾನದಲ್ಲಿ ಆರಂಭವಾದುದು

**ಮೋಹಾನಿ, ಮೌಲಾನಾ ಹಜರತ್** (ಪು ೧೮೮)

ಇವರು ಮುಸಲ್ಮಾನರ ಮುಖಂಡರು. ಅಸಹಕಾರ ಚಳವಳಿಯಲ್ಲಿ ಪ್ರಾಮುಖ್ಯತೆಗೆ ಬಂದರು ದೇಶ ಸೇವೆಗಾಗಿ ಇವರು ಅನೇಕ ಬಾರಿ ಸೆರೆಮನೆಗೆ ಹೋಗಿ ಕಷ್ಟ ನಷ್ಟಗಳನ್ನನುಭವಿಸಿದರು ಆದರೆ ಇವರ ಅಭಿಪ್ರಾಯವು ಪದೇ ಪದೇ ಬದಲಾಗುತ್ತಿರುತ್ತದೆ ಈಗ ಇವರು ಮುಸಲ್ಮಾನರಲ್ಲಿ ಕೋಮುವಾರ ಪಂಗಡಕ್ಕೆ ಸೇರಿದವರಾಗಿದ್ದಾರೆಂದು ಹೇಳಬಹುದು

**ಹರಕಿಶನ್ ಲಾಲ್, ಲಾಲಾ** (ಪು ೧೯೩)

ಇವರು ಲಾಹೋರಿನ ವರ್ತಕರು ಪಂಜಾಬಿನ ಅತ್ಯಾಚಾರದ ಕಾಲದಲ್ಲಿ ಇವರಿಗೆ ಗಡೀಪಾರು ಶಿಕ್ಷೆ ವಿಧಿಸಿದರು. ಹೊಸ ಸುಧಾರಣೆಗಳು ಬಂದಮೇಲೆ ಇವರು ಪಂಜಾಬಿನ ಸಚಿವರಾಗಿದ್ದರು.

**ಸಿಂಹ, ಲಾರ್ಡ್ ಸತ್ಯೇಂದ್ರ ಪ್ರಸನ್ನ** (ಪು ೧೯೪)

ಇವರು ಕಲ್ಕತ್ತೆಯಲ್ಲಿ ಪ್ರಸಿದ್ಧ ವಕೀಲರಾಗಿದ್ದರು. ೧೯೧೫ರಲ್ಲಿ ಮುಂಬಯಿಯಲ್ಲಿ ನೆರೆದ ಮಹಾಸಭೆಗೆ ಅಧ್ಯಕ್ಷರಾಗಿದ್ದರು. ಆಮೇಲೆ ಇವರು ವೈಸ್‌ರಾಯರ ಮಂತ್ರಿಮಂಡಲಕ್ಕೆ ಸೇರಿದರು.

ತದನಂತರ ಬ್ರಿಟಿಷ್ ಪಾರ್ಲಿಮೆಂಟಿನ ಸದಸ್ಯರಾಗಿ ಅಲ್ಲಿನ ಹಿಂದುಸ್ತಾನದ ಮೇಲ್ವಿಚಾರಕರಾದ ಸಚಿವರಿಗೆ ಸಹಾಯಕ ಮಂತ್ರಿಗಳಾದರು ಭಾರತೀಯರಲ್ಲಿ 'ಲಾರ್ಡ್' ಎಂಬ ಪದವಿಯನ್ನು ಪಡೆಯಲು ಮೊದಲಿಗರಿವರು ಆಮೇಲೆ ಕೆಲವು ಕಾಲ ಇವರು ಬಿಹಾರದ ಗವರ್ನರರಾಗಿದ್ದರು ಇವರು ಮೂರು ನಾಲ್ಕು ವರ್ಷಗಳ ಕೆಳಗೆ ಗತಿಸಿದರು

**ಹಿಂದೂ ವಿಶ್ವವಿದ್ಯಾನಿಲಯ** (ಪು ೧೯೪)

೩ನೆಯ ಭಾಗದ ಟಿಪ್ಪಣಿಯನ್ನು ನೋಡಿ

**ಮಾಂಟಿಗ್ಯೂ, ಎಡ್ವಿನ್** (ಪು ೧೯೫)

ಇವರು ೧೯೧೭ರಿಂದ ೧೯೨೨ರ ವರೆಗೆ ಬ್ರಿಟಿಷ್ ಮಂತ್ರಿಮಂಡಲದಲ್ಲಿ ಹಿಂದುಸ್ತಾನದ ಮೇಲ್ವಿಚಾರಕ ಸಚಿವರಾಗಿದ್ದರು ಭಾರತೀಯರ ರಾಜಕೀಯ ಆಶಯಗಳಲ್ಲಿ ಇವರಿಗೆ ಸಹಾನುಭೂತಿಯಿದ್ದಿತು ೧೯೧೯ರ ರಾಜಕೀಯ ಸುಧಾರಣೆಗಳಿಗ ಇವರೇ ಕಾರಣರು ಇವರು ೧೯೧೮ರಲ್ಲಿ ಈ ದೇಶಕ್ಕೆ ಬಂದು ವಿಚಾರಣೆಮಾಡಿ ಆಗ ಇಲ್ಲಿನ ವೈಸ್‌ರಾಯರಾಗಿದ್ದ ಲಾರ್ಡ್ ಚೆಮ್ಸ್‌ಫರ್ಡರೂಡಗೂಡಿ ಬರೆದ ವರದಿಯೇ ಈ ಸುಧಾರಣೆಗಳಿಗೆ ಆಧಾರವಾಗಿದ್ದಿತು ಈ ಸುಧಾರಣೆಗಳು ಸಾಮಾನ್ಯವಾಗಿ ಇಲ್ಲಿನ ಜನರಿಗ ಸಮರ್ಪಕವಾಗಿರಲಿಲ್ಲ ಇವರು ೧೯೨೪ರಲ್ಲಿ ಗತಿಸಿದರು

**ಜಯರಾಮದಾಸ್** (ಪು ೧೯೬)

೧ನೆಯ ಭಾಗದ ಟಿಪ್ಪಣಿಯನ್ನು ನೋಡಿ

**ಪಾಲ್, ವಿಪಿನ ಚಂದ್ರ** (ಪು ೧೯೮)

ಇವರು ಮೊದಲು ಬೆಂಗಳೂರಿನಲ್ಲಿ ಶಿಕ್ಷಕರಾಗಿದ್ದರು. ವಂಗ ವಿಭಜನೆಯ ಚಳವಳಿಯ ಕಾಲದಲ್ಲಿ ಅತ್ಯುತ್ತಮ ವಾಗ್ಮಿಗಳೆಂಬದಾಗಿ ಪ್ರಸಿದ್ಧಿಗೆ ಬಂದರು ಮೊದಲು ಇವರು ಪ್ರಗತಿ ಪಕ್ಷಕ್ಕೆ ಸೇರಿ

ದ್ದರು. ಅಸಹಕಾರವು ಪ್ರಾರಂಭವಾದಂದಿನಿಂದ ಇವರು ಹಿಂದೆ ಬಿದ್ದಿದ್ದಾರೆ.

**ಕೇಳ್ಕರ್, ನಾರಾಯಣ ಚಿಂತಾಮಣಿ** (ಪು ೨೦೬)

ಲೋಕಮಾನ್ಯ ತಿಲಕರ ಶಿಷ್ಯರು. ತಿಲಕರು ಗತಿಸಿದಂದಿನಿಂದ ಇವರು 'ಕೇಸರಿ' ಯ ಸಂಪಾದಕರಾಗಿದ್ದಾರೆ ಈಗ ಇವರನ್ನೇ ಮಹಾರಾಷ್ಟ್ರದ ಮುಖಂಡರೆನ್ನಬಹುದು

**ಕಾಮದಾರ್, ಶ್ರೀ ರಮಾಬಾಯಿ** (ಪು ೨೧೦)

ಇವರು ಮೊನ್ನಿನ ಸತ್ಯಾಗ್ರಹದಲ್ಲಿ ಭಾಗಿಗಳಾಗಿದ್ದರು. ಮುಂಬಯಿಯ 'ಯುದ್ಧ ಸಭೆ'ಗೆ ಅಧ್ಯಕ್ಷರಾಗಿದ್ದು ದಸ್ತಗಿರಿ ಮಾಡಲ್ಪಟ್ಟರು

**ಪುರುಷೋತ್ತಮ್, ಲಕ್ಷ್ಮೀದಾಸ್** (ಪು ೨೧೩)

ಇವರು ಸಾಬರ್ಮತೀ ಆಶ್ರಮದಲ್ಲಿ ಗಾಂಧೀಜಿಯವರ ಸಹ ಯೋಗಿಗಳಾಗಿದ್ದರು ಖಾದೀ ಕಾರ್ಯದಲ್ಲಿ ಇವರಿಗೆ ಅದ್ವಿತೀಯ ಅನುಭವವುಂಟು. ಇವರೂ ಸತ್ಯಾಗ್ರಹ ಯುದ್ಧದಲ್ಲಿ ಭಾಗಿಗಳಾಗಿದ್ದರು.

**ವಂಗ ವಿಭಜನೆ** (ಪು ೨೧೩)

ಒಂದೇ ಪ್ರಾಂತವಾಗಿದ್ದ ವಂಗವನ್ನು ಪೂರ್ವ ವಂಗ ಮತ್ತು ಅಸ್ಸಾಮ್ ಎಂಬದಾಗಿಯೂ ಪಶ್ಚಿಮ ವಂಗವೆಂಬದಾಗಿಯೂ ವಿಂಗಡಿಸಿ ಆ ಕಾಲದಲ್ಲಿ ಹಿಂದುಸ್ತಾನದ ವೈಸ್‌ರಾಯರಾಗಿದ್ದ ಲಾರ್ಡ್ ಕರ್ಜನರು ವಂಗದ ಐಕ್ಯತೆಯನ್ನು ಮುರಿದರು. ಇದರಿಂದ ವಂಗರು ರೇಗಿ ಚಳವಳಿಯನ್ನಾರಂಭಿಸಿದರು ಸ್ವದೇಶೀ ವ್ರತವು ಈ ಚಳವಳಿಯ ಮುಖ್ಯ ಭಾಗವಾಗಿದ್ದಿತು ೧೯೧೧ರಲ್ಲಿ ಸರಕಾರದವರು ತಮ್ಮ ತಪ್ಪನ್ನರಿತು ಪುನಃ ವಂಗವನ್ನು ಒಂದೇ ಪ್ರಾಂತವಾಗಿ ಮಾಡಿದರು

**ಲಾಜಪತ್ ರಾಯ್, ಲಾಲಾ** (ಪು ೨೨೦)

ಇವರು ಲಾಹೋರಿನಲ್ಲಿ ವಕೀಲರಾಗಿದ್ದರು ಇವರು ಕ್ರಾಂತಿಕಾರಕ ಸಭೆಗೆ ಸೇರಿದ್ದಾರೆಂದು ಸರಕಾರದವರು ಇವರನ್ನು ಗಡೀಪಾರುಮಾಡಲು ಇವರು ಅಮೆರಿಕಕ್ಕೆ ಹೋಗಿ ನೆಲೆಸಿ ಅಲ್ಲಿ ಭರತಖಂಡದ ಸ್ವಾತಂತ್ರ್ಯದ ಪರವಾಗಿ ಪ್ರಚಾರಕಾರ್ಯವನ್ನೆಸಗಿದರು. ೧೯೨೦ರಲ್ಲಿ ಇವರು ಪುನಃ ಈ ದೇಶಕ್ಕೆ ಬಂದರು ಅದೇ ವರ್ಷ ಕಲ್ಕತ್ತೆಯಲ್ಲಿ ನೆರೆದ ಮಹಾಸಭೆಯ ವಿಶೇಷ ಅಧಿವೇಶನಕ್ಕೆ ಅಧ್ಯಕ್ಷರಾಗಿದ್ದರು ಈ ಅಧಿವೇಶನದಲ್ಲಿಯೇ ಮಹಾಸಭೆಯು ಅಸಹಕಾರ ಕಾರ್ಯಕ್ರಮವನ್ನು ಸ್ವೀಕರಿಸಿದುದು ಲಾಲಾಜಿಯವರು ಈ ಚಳವಳಿಯನ್ನು ಸೇರಿ ಅನೇಕ ಬಾರಿ ಸೆರೆಮನೆಗೆ ಒಯ್ಯಲ್ಪಟ್ಟರು ೧೯೨೭ರಲ್ಲಿ ಸ್ವರಾಜ್ಯಕ್ಕೆ ಭರತಖಂಡದ ಯೋಗ್ಯತೆಯನ್ನು ಅಳೆಯಲು ಬ್ರಿಟಿಷ್ ಪಾರ್ಲಿಮೆಂಟ್ ನೇಮಿಸಿದ ಸೈಮನ್ ಸಪ್ತರ್ಷಿ ಮಂಡಲವನ್ನು ಇಡೀ ಹಿಂದುಸ್ತಾನವೇ ಬಹಿಷ್ಕರಿಸಿತಷ್ಟೆ ಈ ಗುಂಪು ಲಾಹೋರಿಗೆ ಬಂದಾಗ ಬಹಿಷ್ಕಾರದ ಮೆರವಣಿಗೆಯು ಲಾಲಾಜಿಯವರ ನೇತೃತ್ವದಲ್ಲಿ ಏರ್ಪಾಟಾಯಿತು ಪೋಲೀಸಿನವರು ಜನರ ಮೇಲೆ ಬಿದ್ದು ದೊಣ್ಣೆಯಿಂದ ಹೊಡೆದರು ಲಾಲಾಜಿಯವರೂ ಹೊಡೆತಕ್ಕೆ ಸಿಕ್ಕಿದರು ಇದರ ಪರಿಣಾಮವಾಗಿ ಇವರು ಕೆಲವು ದಿವಸಗಳಲ್ಲಿಯೇ ಇಹಲೋಕವನ್ನು ತ್ಯಜಿಸಿದರು ಈ ವೀರರನ್ನು 'ಪಂಜಾಬಿನ ಸಿಂಹ'ವೆಂದು ಕರೆಯುತ್ತಿದ್ದರು

**ಆಜಾದ್, ಅಬುಲ್ ಕಲಾಮ್** (ಪು ೨೨೦)

ಕಲ್ಕತ್ತೆಯ ಮುಸಲ್ಮಾನ ಮುಖಂಡರು ಹಿಂದೂ ಮುಸಲ್ಮಾನ ಐಕ್ಯಕ್ಕಾಗಿ ಬಹು ಸಾಹಸಪಸಗಿದ್ದಾರೆ ಪೂನ್ನೆ ನಡೆದ ಸತ್ಯಾಗ್ರಹ ಯುದ್ಧದಲ್ಲಿ ಇವರು ಜೈಲಿಗೆ ಹೋಗಿದ್ದರು ೧೯೨೨ರಲ್ಲಿ ಗಯಾದಲ್ಲಿ ನೆರೆದ ಮಹಾಸಭೆಗೆ ಅಧ್ಯಕ್ಷರಾಗಿದ್ದರು.

**ಪ್ರತಿನಿಧಿಗಳ ಸಂಖ್ಯೆ** (ಪು ೨೨೫)

ಗಾಂಧೀಜಿಯವರು ೧೯೨೯ರಲ್ಲಿ ನೆರೆದ ಲಾಹೋರ್ ಮಹಾ ಸಭೆಯಲ್ಲಿ ಪುನಃ ಪ್ರತಿನಿಧಿಗಳ ಸಂಖ್ಯೆಯನ್ನು ಕಡಿಮೆ ಮಾಡಲು ಬಹು ಸಾಹಸಪಟ್ಟರು. ಆದರೆ ಅವರ ಪ್ರಯತ್ನವು ಕೈಗೂಡಲಿಲ್ಲ.

**ಮಹಾಸಭೆಯ ಧ್ಯೇಯ** (ಪು ೨೨೬)

ಈಚೆಗೆ ಮಹಾಸಭೆಯ ಧ್ಯೇಯವನ್ನು ಮಾರ್ಪಡಿಸಲು ಎಷ್ಟೋ ಪ್ರಯತ್ನಗಳು ನಡೆದಿವೆ ಭಾರತದ ಸ್ವಾತಂತ್ರ್ಯವೇ ಮಹಾಸಭೆಯ ಧ್ಯೇಯವಾಗಿರಬೇಕೆಂಬ ಗೊತ್ತುವಳಿಯು ವರ್ಷೇ ವರ್ಷೇ ತರಲ್ಪಟ್ಟು ಬಿದ್ದುಹೋಗುತ್ತಿದ್ದಿತು ಇದನ್ನು ಪ್ರತಿ ಪಾದಿಸುವ ಪಕ್ಷವು ಮದರಾಸಿನಲ್ಲಿ ಬಲಗೊಂಡು ಕಲ್ಕತ್ತೆಯಲ್ಲಿ ಮುಂದುವರಿದು ಲಾಹೋರಿನಲ್ಲಿ ಜಯವನ್ನು ಪಡೆಯಿತು ಅಲ್ಲಿ ಧ್ಯೇಯದ ಬದಲಾವಣೆಯ ಗೊತ್ತುವಳಿಯನ್ನು ಗಾಂಧೀಜಿಯವರೇ ಸಭೆಯ ಮುಂದಿಟ್ಟರು ಮಹಾಸಭೆಯ ಕಾರ್ಯಕ್ರಮವು ಅಹಿಂಸಾತ್ಮಕವಾಗಿರಬೇಕೆಂಬ ಧ್ಯೇಯವನ್ನು ಬದಲಾಯಿಸಲು ಹಲವರು ಮಾಡಿದ ಸಾಹಸವೆಲ್ಲಾ ಇದುವರೆಗೂ ವ್ಯರ್ಥವಾಗಿದೆ

---

# ಅನುಕ್ರಮಣಿಕೆ

